


( ಸಚಿತ್ರ ಮಾಸ ಪುಸ್ತಕಾವಳಿ )

# ೧೨

**ಸುಬೋಧ ಪ್ರಕಟನಾಲಯ,**

ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

ಹೆಸರು

॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಶ್ರೀಮನ್ಮಹಾಭಾರತದ ಆದಿಪರ್ವದಲ್ಲಿಯೂ, ಶ್ರೀಮನ್ಮಹಾವಿಷ್ಣು ಭಾಗವತದ ನವಮಸ್ಕಂಧದಲ್ಲಿಯೂ ಹೇಳಲ್ಪಟ್ಟಿರುವ ನಹುಷ ಪುತ್ರನಾದ ಯಯಾತಿ ರಾಜನ ಚರಿತ್ರೆಯೂ, ಆತನ ಪತ್ನಿಯರಾದ ದೇವಯಾನೀಶರ್ಮಿಷ್ಠೆಯರ ಚರಿತ್ರೆಯೂ ಪ್ರಕೃತ ಗ್ರಂಥಕ್ಕೆ ವಿಷಯವಾಗಿವೆ. ಆದರೆ ಶುಕ್ರ ಪುತ್ರಿಯಾದ ದೇವಯಾನೆಯ ಸಂಬಂಧವು, ಕಥಾಪಾತ್ರಗಳಾದ ಕಚ, ಯಯಾತಿ, ಮತ್ತು ಶರ್ಮಿಷ್ಠೆ ಈ ಮೂವರೊಂದಿಗೂ ವಿಶೇಷವಾಗಿ ಬರುವುದರಿಂದ, ಆಕೆಯನ್ನೇ ಮುಖ್ಯ ಪಾತ್ರವನ್ನಾಗಿ ಕೈಕೊಂಡು, ಗ್ರಂಥವನ್ನು ಆಕೆಯ ಹೆಸರಿಸಿಂದಲೇ ಕರೆದಿದೆ.

ಈ ಪೌರಾಣಿಕ ಕಥೆಯಲ್ಲಿ ಕೆಲವು ಅತಿ ವಿಚಿತ್ರ, ಕಥಾಸಂದರ್ಭಗಳು ದೊರೆಯುತ್ತವೆ. ಉತ್ತಮ ಕುಲಸಂಭೂತನೂ, ಪ್ರಾಯಸಮರ್ಥನೂ ಆದ ಬೃಹಸ್ಪತಿ ಪುತ್ರ ಕಚನು, ಗುರುಪುತ್ರಿಯಾದ ದೇವಯಾನೆಯು ಸಹೋದರೀ ಸದೃಶಳೆಂದು ಭಾವಿಸಿ, ಸೌಂದರ್ಯಶಾಲಿನಿಯೂ ಪ್ರಾಯಪ್ರಬುದ್ಧೆಯೂ ಆದ ಅವಳಿಂದ ಪ್ರಾರ್ಥಿತನಾದರೂ ಕಾಮಕ್ಕೆ ಒಳಪಡದೆ, ತನ್ನ ಬ್ರಹ್ಮಚರ್ಯನಿಷ್ಠೆಯನ್ನು ಕಾಯ್ದುಕೊಂಡಿದ್ದಾನೆ. ಹೀಗೆ ತುಂಬು ಯೌವನದಲ್ಲೂ ಕಾಮವನ್ನು ಜಯಿಸಿದುದರಿಂದ ಆ ಮುನಿಕುಮಾರನು ಮೃತಸಂಜೀವಿನೀ ವಿದ್ಯೆಗೆ ಅಧಿಕಾರಿಯಾಗಿ, ದೇವವರ್ಗಕ್ಕೇ ಮಹೋಪಕಾರಮಾಡಲು ಶಕ್ತನಾದುದು ಮಾತ್ರವಲ್ಲ—ಅಖಿಳ ದೇವವರ್ಗದಿಂದಲೂ ಪೂಜಾಯೋಗ್ಯನಾದನು. ಆದರೆ ಅತ್ತ ಇದಕ್ಕೆ ಸರಿ ವಿರೋಧವಾದ ಮತ್ತೊಂದು ಸಂಗತಿಯೂ ನಡೆಯಿತು. ಗೃಹಸ್ಥನೂ ಪತ್ನೀಸಮೇತನೂ ಆಗಿದ್ದ ಪ್ರೌಢವಯಸ್ಸಿನ ಯಯಾತಿರಾಜನು, ಕಾಮವೇಗವನ್ನು ತಡೆಯಲಾರದೆ ತಾನು ಯಾರೊಂದಿಗೆ ಸಂಗಮಿಸಬಾರದೆಂದು ಶುಕ್ರಾಚಾರ್ಯರಿಂದ ಆಜ್ಞಪ್ತನಾಗಿದ್ದನೋ ಅಂತಹ ಶರ್ಮಿಷ್ಠಾದೇವಿಯಲ್ಲಿ ಬೆರೆದು ತನ್ಮೂಲಕ ಶುಕ್ರಶಾಪಕ್ಕೆ ಒಳಗಾಗಿ, ಮಧ್ಯಪ್ರಾಯದಲ್ಲೇ ಅತಿ ಹೇಯವೂ ದುಃಖಭಾಜನವೂ ಆದ ವೃದ್ಧಾಪ್ಯವನ್ನು ಹೊಂದಿದನು. ಮಹಾಕಾಮಿಯಾದ ಆತನು ಅಲ್ಲಿಗೂ ತೃಪ್ತನಾಗಿ ಸುಮ್ಮನಿರದೆ, ಪುನಃ ತನ್ನ ಮಕ್ಕಳಲ್ಲೊಬ್ಬನ ಯೌವನವನ್ನು ತನ್ನ ವೃದ್ಧಾಪ್ಯಕ್ಕೆ ವಿನಿಮಯವಾಗಿ ಪಡೆದು, ಮುಂದೆ ಸಹಸ್ರಾರು ವರ್ಷಗಳವರೆಗೆ ಕಾಮೋಪಭೋಗವನ್ನು ಅನುಭವಿಸಿದನಾದರೂ ಸಂತೃಪ್ತಿಯನ್ನು ಹೊಂದಲಾರದೆ ಹೋದನು. ಇದರಿಂದ ಕಾಮವು ಮನೋನಿಗ್ರಹಣದಿಂದಲೇ ಜಯಿಸಲ್ಪಡಬೇಕಲ್ಲದೆ, ಅನುಭವಿಸಿ ಅದಕ್ಕೆ

ತೃಪ್ತಿಯನ್ನುಂಟುಮಾಡುವುದು ಸಾಧ್ಯವಲ್ಲ ಎಂಬ ನೀತಿಯೂ, ಕಾವ್ಯದ ನಿಶ್ಚಯ ತತ್ವವೂ ಪ್ರಪಂಚಕ್ಕೆ ಗೋಚರವಾಯಿತು.

ನಮ್ಮಲ್ಲಿ ಪುರಾಣಗಳೆಂಬುವು, ಪೂರ್ವಕಾಲದಲ್ಲಿ, ದೇಶಚರಿತ್ರ, ಮಹಾಪುರುಷರ ದಿವ್ಯಾಖ್ಯಾನಗಳು, ಸತ್ಯ ಧರ್ಮ ನೀತಿ ತತ್ವಗಳನ್ನು ನಿತ್ಯಾಚಾರಣೆಯಲ್ಲಿ ತರುವ ಮಾರ್ಗಗಳು, ಸೃಷ್ಟ್ಯಾದಿಯಿಂದ ಪ್ರಕೃತ ಕಾಲದವರೆಗೆ ವಿವಿಧ ಕಾಲಗಳಲ್ಲಿ ಜನಾಂಗದಲ್ಲಿ ನಡೆದ ಅಭಿವೃದ್ಧಿ ಅವನತಿ ವಿಚಾರಗಳು ಮುಂತಾದ ಹಲವು ಸಂಗತಿಗಳನ್ನು ತಿಳಿಸುವಲ್ಲಿ ಅತ್ಯುಪಯೋಗಿಗಳಾದ ವಿವಿಧ ವಿಷಯ ಭಾಂಡಾಗಾರವೆಂದು ಪರಿಗಣಿತವಾಗಿದ್ದವು. ಇಂತಹ ಅಮೌಲ್ಯ ಗ್ರಂಥಸಾಮಗ್ರಿಯನ್ನು ಯೋಗ್ಯರೀತಿಯಿಂದ ಉಪಯೋಗಿಸಿಕೊಳ್ಳುವುದಾದರೆ ವಿಶೇಷ ಪ್ರಯೋಜನವಾಗದಿರದು. ಅಷ್ಟುಮಾತ್ರವಲ್ಲ. ವಿಚಿತ್ರ ಕಥಾಸಂವಿಧಾನ (Plot) ಗಳಿಂದೊಡಗೂಡಿರುವ ಅನೇಕ ವಿಷಯಗಳನ್ನು ಗಮನವಿಟ್ಟು ತಿದ್ದುಕೊಂಡು ನವೀನ ರೀತಿಯ ಕಾದಂಬರಿ (Novel) ಗಳನ್ನು ಬರೆಯಲಾರಂಭಿಸುವ ಕರ್ನಾಟಕ ಲೇಖಕರು ಮುಂದೆ ಬಂದರಾದರೆ, ಪ್ರತ್ಯೇಕವಾದ ಒಂದು ಗ್ರಂಥ ಸಮುದಾಯವನ್ನೇ ಸೃಷ್ಟಿಸಲು ಸಾಧ್ಯವುಂಟು. ಅಂತಾದರೆ, ಅವು ಈಗ ವಿಶೇಷವಾಗಿ ದೃಷ್ಟಿಗೋಚರವಾಗುತ್ತಿರುವ ಅನೇಕ ಕಟ್ಟುಕಥೆಗಳ ಗ್ರಂಥರಾಶಿಯಂತೆ ಕುಹಕ, ದಂಭ, ಮೋಸ, ಕಾಪಟ್ಯಾದಿಗಳನ್ನೂ, ಅರ್ಥವಿಲ್ಲದ ಭೀಭತ್ಸ ವಿಷಯಗಳನ್ನೂ ವಿವರಿಸಿ ನಿರುಪಯೋಗವೂ, ನಿಸ್ಸಾರವೂ, ದುರ್ಮಾರ್ಗಬೋಧಕವೂ ಆಗದಂತೆ, ಸತ್ಯಸನ್ಮಾರ್ಗ ಧರ್ಮ ನೀತಿ ನ್ಯಾಯಗಳ ಮಹತ್ವವನ್ನೂ ಅವುಗಳನ್ನನುಸರಿಸಿ ನಡೆವುದರಿಂದ ಉಂಟಾಗುವ ಸತ್ಪರಿಣಾಮಗಳನ್ನೂ, ವಿರೋಧಿಸಿ ನಡೆವುದರಿಂದ ಉಂಟಾಗುವ ದುಷ್ಪರಿಣಾಮಗಳನ್ನೂ, ತಿಳಿಸುವಲ್ಲಿ ಅತಿಶಯ ಸಹಾಯಕಗಳಾಗದಿರವೆಂದೂ ತನ್ಮೂಲಕ ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸುವುದೂ ಅತಿಶಯ ಸುಲಭವಾಗುವುದೆಂದೂ ಭಾವಿಸುತ್ತೇವೆ.

ವಿಚಿತ್ರ ಕಥಾಸಂವಿಧಾನಗಳಿಂದೊಡಗೂಡಿ, ಮನೋಹರವಾಗಿರುವ ಈ ಚರಿತ್ರೆಯನ್ನೂ, ಕರ್ನಾಟಕ ಭಾಷಾಬಾಂಧವರು, ಆದರದಿಂದ ಸ್ವೀಕರಿಸಿ, ಮೇಲ್ಕಂಡ ಉನ್ನತಧ್ಯೇಯವನ್ನಿಟ್ಟುಕೊಂಡು ಶ್ರಮಿಸುತ್ತಿರುವ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಬೆಂಗಳೂರು ನಗರ
ತಾ|| ೧೨-೮-೧೯೨೮

ಇತಿ ಸುಜನ ವಿಧೇಯ,
**ಯಂ. ರಾಮರಾವ್,**

ಶ್ರೀರಾಮಸಹಾಯಂ

ಸಾಧ್ವಿ

# ದೇವಯಾನಿ

## ಅಧ್ಯಾಯ ೧ "ಶಿಷ್ಯವೃತ್ತಿ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವು, ಗೌತಮ ಬುದ್ಧನಿಂದ ಈಚೆಗೆ ಚಾರಿತ್ರಿಕ ಯುಗವೆಂದು ಪರಿಗಣಿತವಾಗಿರುವ ಕಾಲದಿಂದ ಮಾತ್ರವಲ್ಲ - ಅದಕ್ಕೆ ಹಿಂದೆ, ಬಹು ಪೂರ್ವಕಾಲದ ಪೌರಾಣಿಕ ಯುಗದಿಂದಲೂ, ಅನೇಕ ವಿಷಯಗಳಲ್ಲಿ ಪ್ರಸಿದ್ಧವಾದುದೆನ್ನಿಸಿದೆ. ದೇವತೆಗಳು, ಯಕ್ಷಕಿನ್ನರರು, ಗಂಧರ್ವರು, ಅಪ್ಸರ, ನಾಗಕನ್ನಿಕೆಯರು ಮುಂತಾದ ಮನುಷ್ಯೇತರ ವ್ಯಕ್ತಿಗಳೂ, ಮನುಷ್ಯರೊಂದಿಗೆ-ಅವರ ನಿತ್ಯವ್ಯವಹಾರದಲ್ಲಿ ಬಂದು ಬೆರೆಯುತ್ತಿದ್ದ ಕಾಲವದು. ಆದರೆ ದೇವತೆಗಳು ವಾಸಿಸಿದ್ದ ಸ್ವರ್ಗಲೋಕವೂ, ದೈತ್ಯರು ವಾಸಿಸಿದ್ದ ಪಾತಾಳಲೋಕವೂ, ಇತರ ಯಕ್ಷ ಗಂಧರ್ವ ಕಿನ್ನರ ಕಿಂಪುರುಷಾದಿಗಳು ವಾಸಿಸಿದ್ದ ವಿವಿಧ ಪ್ರದೇಶಗಳೂ ಯಾವುವೆಂದು ಈಗ ನಿರ್ದೇಶಿಸಿ ತೋರಿಸುವುದು ಸಾಧ್ಯವಲ್ಲವಾದರೂ, ಅವರು ಮನುಷ್ಯರೊಂದಿಗೆ ಎಂದರೆ ಆರ್ಯ ಮಹರ್ಷಿಗಳು, ಸೂರ್ಯವಂಶ ಚಂದ್ರವಂಶಗಳ ನರಶ್ರೇಷ್ಠರು ಮುಂತಾದವರೊಂದಿಗೆ ಬೆರೆದು ಲೋಕನಾಟಕದಲ್ಲಿ ಭಾಗವನ್ನು ವಹಿಸಿ ವಿಹರಿಸುತ್ತಿದ್ದ ರಂಗಸ್ಥಳವು ಮಾತ್ರ ಈ ಪವಿತ್ರ ಭರತವರ್ಷವೇ ಎನ್ನುವುದಕ್ಕೆ ಸಂದೇಹವಿಲ್ಲ. ದೇವಾಧಿದೇವತೆಗಳ - ಅವತಾರರೂಪೀ ಸಾಕ್ಷಾತ್ ಶ್ರೀಮನ್ನಾರಾಯಣನ, ಬ್ರಹ್ಮ ರುದ್ರಾದಿ ಲೋಕನಾಯಕರ ಚರಣಸ್ಪರ್ಶದಿಂದ ಪವಿತ್ರವಾದ ಪುಣ್ಯ ಭೂಮಿಯಿದು-ನಮ್ಮ ಮಾತೃದೇಶವು! ಈ ವಿಷಯದಲ್ಲಿ ಪ್ರತಿಯೊಬ್ಬ ಭಾರತಪುತ್ರನೂ ಹೆಮ್ಮೆಗೊಳ್ಳಬೇಕಾಗಿದೆ.

ಆ ಕಾಲದಲ್ಲಿ ಆರ್ಯಜನಾಂಗವು, ಶ್ರಮವಿಭಾಗ ತತ್ವವನ್ನನುಸರಿಸಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಂಗಡಿಸಲ್ಪಟ್ಟು, ಆಯಾಯಾ ವರ್ಣದವರು ಆಯಾಯಾ ವೃತ್ತಿಯಲ್ಲಿ ನಿಷ್ಣಾತರಾಗಿದ್ದುದರಿಂದ ಜನಾಂಗ ಜೀವಿತವು ಗಲಭೆಯಿಲ್ಲದೆ ಸುಲಲಿತ ರೀತಿಯಿಂದ ಸಾಗುತ್ತಿದ್ದಿತು. ಬ್ರಾಹ್ಮಣರು ತಪಸ್ಸು ಯಜ್ಞಯಾಗಾದಿಗಳು, ವೇದ ಶಾಸ್ತ್ರಾಧ್ಯಯನಗಳು ಮುಂತಾದುವುಗಳಲ್ಲಿ ನಿರತರಾಗಿದ್ದರು. ಅವರ ತಪಸ್ಸೂ, ಯೋಗಸಾಮರ್ಥ್ಯವೂ ಎಷ್ಟುಮಟ್ಟಿಗೆ ಅಭಿವೃದ್ಧಿಗೊಂಡಿದ್ದುವೆಂದರೆ:—

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂತು ದೇವತಾಃ ।
ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋ ಮಮದೇವತಾ ॥

ಎಂಬಂತೆ ಅವರು ಭೂ-ದೇವರೆಂದೇ ಕರೆಯಲ್ಪಡುತ್ತಿದ್ದರು. ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಾದಿ ಕಾರ್ಯಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿರುವ ದೇವತೆಗಳನ್ನು ಸಹ, ತಮ್ಮ ಮಂತ್ರ ಸಾಮರ್ಥ್ಯದಿಂದ ವಶಪಡಿಸಿಕೊಂಡು, ಅವರಮೇಲೂ ಅಧಿಕಾರಮಾಡಲು ಯೋಗ್ಯರಾಗಿದ್ದ ಸ್ಥಿತಿಯು ಬ್ರಾಹ್ಮಣರಿಗೆ ಲಭ್ಯವಾಗಿದ್ದಿತು. ಅವರಾದರೂ ಅಂತರಿಂದ್ರಿಯ ಬಾಹ್ಯೇಂದ್ರಿಯನಿಗ್ರಹ, ಕ್ಷಮಾ, ಅಕ್ರೋಧ, ಋಜುಮಾರ್ಗಗಮನ, ತಪಸ್ಸು, ವೇದಾಧ್ಯಯನ, ಯೋಗಸಾಧನೆ ಮುಂತಾದುವುಗಳಿಂದ ಆ ಪದವಿಯನ್ನು ಗಳಿಸಿ, ಇತರ ವರ್ಣಗಳವರಿಗೆ ಅಸಾಧ್ಯವೆಂಬಂತಹ ಆ ಸ್ಥಾನವನ್ನು ತಮ್ಮ ಮನೋನಿಗ್ರಹ ಸಾಮರ್ಥ್ಯದಿಂದಲೇ ರಕ್ಷಿಸಿಕೊಂಡಿದ್ದರು. ಹಾಗೆ ದೇವತೆಗಳನ್ನಾದರೂ ಸ್ವಾಧೀನಪಡಿಸಿಕೊಂಡು ಆಳುತ್ತಿದ್ದಂತಹ ಶಕ್ತಿಯು ಬ್ರಾಹ್ಮಣರಿಗಿದ್ದ ಆ ಸ್ಥಿತಿಯಲ್ಲಿ, ಇತರ ಮನುಷ್ಯರು ಅವರಿಗೆ ಅಧೀನರಾಗಿ - ಪಾದಾವನತರಾಗಿ ಆಜ್ಞಾಬದ್ಧರಾಗಿ ನಡೆಯುತ್ತಿದ್ದುದರಲ್ಲಿ ಆಶ್ಚರ್ಯವೇನು ? ಮಣಿರತ್ನ ಮಕುಟಧಾರಿಗಳಾಗಿದ್ದ ರಾಜಾಧಿರಾಜರೂ, ಚಕ್ರಾಧಿಪತಿಗಳೂ ಅಂತಹ ಬ್ರಾಹ್ಮಣಶ್ರೇಷ್ಠರ ಕುಡಿಹುಬ್ಬಿನ ನೋಟಕ್ಕೆ ಬೆದರಿ ನಡನಡುಗಿ ಪಾದಸೇವೆಗೆ ಸಿದ್ಧರಾಗುತ್ತಿದ್ದರೆಂದರೆ ಅದರಲ್ಲಿ ವಿಶೇಷವೇನಿದೆ ? ಎಂದಿನವರೆಗೆ ಬ್ರಾಹ್ಮಣರು ತಮ್ಮ ವರ್ಣಕ್ಕೆ ವಿಧಾಯಕ ಧರ್ಮಗಳಾದ,—

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವ ಮೇವ ಚ |
ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಹ್ಮ ಕರ್ಮ ಸ್ವಭಾವಜಮ್ ||ಗೀತಾ|

ಎಂಬಂತೆ ಶಾಂತಿ ಇಂದ್ರಿಯನಿಗ್ರಹ ತಪಸ್ಸು ಶೌಚಕ್ಷಮಾ ಋಜುತ್ವ ಶಾಸ್ತ್ರಜ್ಞಾನ ಅನುಭವಜ್ಞಾನ ಆಸ್ತಿಕ್ಯಬುದ್ಧಿ ಇವುಗಳನ್ನು ತಮ್ಮ ನಿತ್ಯಾಚರಣೆಯಲ್ಲಿಟ್ಟುಕೊಂಡು ನಡೆಯುತ್ತಿದ್ದರೋ, ಆವರೆಗೂ ಅವರು ತಮ್ಮ ಪೂಜ್ಯ ಪೀಠದಲ್ಲಿದ್ದು ಜಗನ್ಮಾನ್ಯರಾಗಿದ್ದರು. ಆದರೆ ಎಂದು ಅವರು ತಮ್ಮ ಆ ಶಾಂತಿ ಇಂದ್ರಿಯನಿಗ್ರಹ ತಪಸ್ಸು ಶೌಚ ಮುಂತಾದ ದೈವಿಕ ಗುಣಗಳು ಲೌಕಿಕ ಜೀವನವನ್ನು ಒದಗಿಸಲಾರವೆಂದು ಹೇಳಿಕೊಂಡು ಅವುಗಳಿಂದ ವಿಮುಖರಾಗಿ ವಿಷಯಲೋಲುಪರಾದರೋ, ಅಂದೇ ಅವರ ಅವನತಿಯು ಮೊದಲಾಯಿತು. ಹೀಗೆ ಇಂದ್ರಿಯವಶರಾಗಿ ಒಂದುಸಾರಿ ಅವನತಿಯ ಮಾರ್ಗವನ್ನನುಸರಿಸಿ ಉರುಳತೊಡಗಿದಮೇಲೆ ಮುಂದೆ ಕೇಳುವುದೇನು ? ಉರುಳುತ್ತಾ ಉರುಳುತ್ತಾ ಬಂದು, ಯಾವ ತಮ್ಮ ಪೂರ್ವಿಕರು ಜನಾಂಗ ಸಭೆಯಲ್ಲಿ ಉನ್ನತ ಪೀಠವನ್ನು ಅಧಿರೋಹಿಸಿ ಕುಳಿತು ಸಕಲ ವರ್ಗಗಳಿಂದಲೂ, ಸನ್ಮಾನ್ಯರಾಗಿ ಪಾದಪೂಜೆಗೊಳ್ಳುತ್ತಿದ್ದರೋ, ಅದೇ ಜನಾಂಗ ಸಭೆಯಲ್ಲಿ ಇಂದು ಅವರು ಆ ಪೀಠದ ಪಾದಮೂಲದಲ್ಲಿ ನಿಂತು, ಹಿಡಿಮುಷ್ಟಿಯ ಭಿಕ್ಷೆಗೆ ಬಾಯ್ದೆರೆದು, ಜನಾಂಗದ ಹೇಯದೃಷ್ಟಿಗೆ ಪಾತ್ರರಾಗಿದ್ದಾರೆ. ಅರ್ಥವಿಲ್ಲದ ದುರಭಿಮಾನ, ಅಹಂಕಾರ, ಲೌಕಿಕ ವಿದ್ಯೆಯ ಎರಡಕ್ಷರವನ್ನು ಕಲಿತಿರುವ ಪ್ರೌಢಿಮೆ, ಭೌತಿಕ ಸುಖಾಪೇಕ್ಷೆ, ಲೌಕಿಕ ಸುಖಗಳೆನ್ನಿಸಿಕೊಳ್ಳುವ ಮಕ್ಕಳ ಆಟಪಾಟಗಳು, ಬಂಡಿ - ಕುದುರೆಗಳು ಮುಂತಾದುವುಗಳಲ್ಲೇ ಮಗ್ನರಾಗಿ, ತಮ್ಮ ಪೂರ್ವದ ಮಹೌನ್ನತ್ಯ ಸ್ಥಿತಿಯನ್ನೂ ಮರೆತಿದ್ದಾರೆ. ಸುಖಜೀವಿತಾಸೆಯನ್ನು ಎದುರಿಸಲು ಮನೋದಾರ್ಢ್ಯವಿಲ್ಲದೆ, ಅಲ್ಪಸ್ವಲ್ಪದ - ಕೇವಲ 'ಕಾಫಿತಿಂಡಿ'ಗಳ ಚಪಲಕ್ಕೂ ಹಲ್ಗಿರಿದು ಪರಾಧೀನರಾಗುತ್ತ, ತಮ್ಮ ಮನಸ್ಸಾಕ್ಷಿಗೆ ವಿರೋಧವಾಗಿ ನಡೆದು, ಹೇಡಿಗಳೆಂದೆನಿಸಿಕೊಂಡರೂ ನಾಚಿಕೆಯಿಲ್ಲದೆ, ಅದೇ ಎಂಜಲು ರೊಟ್ಟಿಗೆ ಬಾಯ್ದೆರೆದುಕೊಂಡಿದ್ದಾರೆ. ಸಾಲದುದಕ್ಕೆ ಅದೇ ತಮ್ಮ ಧರ್ಮವೆಂಬ ಭ್ರಾಂತಿಯೂ ಅವರನ್ನು ಆವರಿಸಿದೆ. ಅಷ್ಟೇ ಅಲ್ಲ - ಆ ಎಲ್ಲವನ್ನೂ ಕಾಲಕ್ಕೆ ಆರೋಪಿಸಿ ತಲೆ ತಪ್ಪಿಸಿಕೊಳ್ಳುವ ಹೇಡಿತನವಾದರೂ ಅವರನ್ನು ಬಿಟ್ಟಿಲ್ಲ.

ಇದೇ ಮಾರ್ಗವನ್ನನುಸರಿಸಿ ಹೋಗುತ್ತಿದ್ದರೆ - ಇಂದಲ್ಲ ಸಾವಿರ ವರ್ಷಗಳಿಗಾದರೂ ಬ್ರಾಹ್ಮಣರು ಎಚ್ಚತ್ತುಕೊಳ್ಳುವ ಆಸೆಯುಂಟೆ? ಅದನ್ನು ಕನಸಿನಲ್ಲೂ ಎಣಿಸಬಾರದು! ಅವರು ತಮ್ಮ ಇಂದಿನ ಹೀನಸ್ಥಿತಿಯನ್ನು ಬದಿಗೊತ್ತಿ ಕೊಡಹಿಕೊಂಡೇಳುವ ಮಾರ್ಗವು ಒಂದೇ ಒಂದುಂಟು. ಅದನ್ನನುಸರಿಸಲು ಅವರಿಗೆ ಮನೋದಾರ್ಢ್ಯವು ಬೇಕು. ಅವರಲ್ಲಿ ನಿರ್ಭೀತಿ ನಿರಲಸಿಕೆಗಳು ನೆಲೆಗೊಳ್ಳಬೇಕು. ಸುಖಾಪೇಕ್ಷೆಯು ತೊಲಗಿ ಕಷ್ಟಸಹಿಷ್ಣುತೆಯ ಜೀವಿತವನ್ನು ಕೈಕೊಳ್ಳಲು ಅವರು ಸಿದ್ಧರಾಗಬೇಕು. ನೌಕರಿಯೆಂಬ ಹಿಡಿಗೂಳಿನ ಭಿಕ್ಷೆಗಾಗಿ ಕೈನೀಡುವ ಹೇಡಿತನವನ್ನು ಎದುರಿಸಿ, ಅವರು, ತಮ್ಮ ಎರಡು ಕೈ, ಎರಡು ಕಾಲುಗಳು, ಹತ್ತು ಬೆರಳುಗಳು, ಕಣ್ಣು ಮೂಗು ಬಾಯಿಗಳು ಮುಂತಾದ ದೈವದತ್ತ ಅಂಗಗಳ ಪ್ರಯೋಜನವನ್ನು ತಿಳಿದು, ಆತ್ಮವಿಶ್ವಾಸವನ್ನುಂಟಾಗಿ ಪರಿಶ್ರಮವಮಾಡಲು ಸಿದ್ಧರಾಗಬೇಕು. ಉದರಂಭರಣವೇ ಜನ್ಮೋದ್ದೇಶವೆಂದು ಭಾವಿಸಿ, ಮಾನವನ್ನು ತೆತ್ತು ಜೀವನವನ್ನು ಕೊಳ್ಳುವ ಹೇಡಿತನವು ಎಲ್ಲಿಯವರೆಗೆ ಅವರಲ್ಲಿ ನೆಲೆಸಿರುವುದೋ ಅಲ್ಲಿಯವರೆಗೆ ಅವರಿಗೆ ಅಭಿವೃದ್ಧಿ ಮಾರ್ಗವೇ ಸ್ಫುರಿಸಲಾರದು. ಹೊಟ್ಟೆಯನ್ನು ಕೊಟ್ಟ ದೇವರು ಹೊಟ್ಟೆಗೆ ಕೊಡದಿರುವುದಿಲ್ಲವೆಂಬ ನಂಬಿಕೆಯಿಂದ ಪ್ರಯತ್ನಶೀಲರಾಗಬೇಕು.

ತಮ್ಮ ವರ್ಣಗೌರವವನ್ನು ಮರೆತ ಬ್ರಾಹ್ಮಣರು ಇತರ ಹಲವು ವರ್ಣಗಳವರೊಂದಿಗೆ ಲೌಕಿಕ ಜೀವಿತದಲ್ಲಿ ಸ್ಪರ್ಧೆಗೂ ನಿಂತಿದ್ದಾರೆ. ನೌಕರಿಗಾಗಿ ಸ್ಪರ್ಧೆ. 'ಮ್ಯುನಿಸಿಪಾಲಟಿ' 'ತಾಲ್ಲೂಕು ಬೋರ್ಡು' 'ಡಿಸ್ಟ್ರಿಕ್ಟ ಬೋರ್ಡು' 'ಪ್ರತಿನಿಧಿಸಭೆ' 'ನ್ಯಾಯವಿಧಾಯಕಸಭೆ' ಮುಂತಾದ ಆಧುನಿಕ ಸಂಸ್ಥೆಗಳಲ್ಲಿ ಸಭ್ಯರಾಗಲು ಸ್ಪರ್ಧೆ. ಪ್ರಕೃತ ಕಾಲಾನುಸಾರವಾಗಿ ಈ ಸ್ಪರ್ಧೆಯೇ ಆವಶ್ಯಕವೆಂದೂ, ಈ ಬಗೆಯ ಪೋಟಾಪೋಟಿಗೆ ಒಳಪಡದಿದ್ದರೆ ಜೀವನಸಂಗ್ರಾಮದಲ್ಲಿ ಪರಿಣಾಮವಾಗಲರಿಯದೆಂದೂ ಹೇಳುವುದು ಹೊಸದಲ್ಲ: ಆದರೆ ಈ ಪೋಟಾಪೋಟಿಯೇ ಆಧುನಿಕ ಕಾಲದ ಸಕಲ ದುಃಖಗಳಿಗೂ ಕಾರಣವೆಂಬುದನ್ನೂ ಅದರೊಂದಿಗೇ ಮರೆಯಲಿರಬೇಕು. ನಮ್ಮ ಮೇಲ್ಕಂಡ ಧ್ಯೇಯದಂತೆ ಕಾರ್ಯಪ್ರಯತ್ನ ಮಾಡುವುದಾದರೆ ಅಲ್ಲಿ ಪೋಟಾಪೋಟಿಗೆ ಸ್ಥಾನವಿಲ್ಲ. ಬ್ರಾಹ್ಮಣರು ಲೋಕಸೇವಾ

ಕಾರ್ಯವನ್ನು ಕೈಕೊಂಡು, ಯದೃಚ್ಛಾಲಾಭಸಂತುಷ್ಟರಾಗಿ ನಿರ್ಮಮರಾದರೆಂದರೆ ಆ ಸ್ಥಿತಿಯಲ್ಲಿ ಅವರೊಂದಿಗೆ ಸ್ಪರ್ಧಿಸುವ ಸಾಹಸವು ಮುಂದೆಬಾರದು. ಘೋಲ್ಕಂಡ ಸ್ಥಳಗಳಲ್ಲಿ ಸಭ್ಯರಾಗಲು ಅಪೇಕ್ಷಿಸುವವರಿಗೂ ಕೂಡ ಲೋಕಸೇವೆ ಮಾಡಬೇಕೆಂಬ ಮಹಾತ್ವಾಪೇಕ್ಷೆ ಇರುವುದೆಂದು ಕೇಳಿಯುಂಟು. ಅಂತಃಕರಣಪೂರ್ವಕವಾಗಿ ಜನಸೇವೆಯನ್ನೇ ಜನಾರ್ದನನ ಸೇವೆಯೆಂದು ತಿಳಿದು ಆ ಸಂಸ್ಥೆಗಳನ್ನು ಹೊಗಲಾಸಿಸುವ ಮಹನೀಯರಿಗೆ ಸರ್ವರೂ ಕೃತಜ್ಞರಾಗಿರುವರು. ಆದರೆ, ಅಲ್ಲಿ ಮಹತ್ಕಾರ್ಯ ಮಾಡುವ ಆಸೆಯೊಂದಿರಲಿ! ಅಲ್ಲಿ ಹೋಗಿ ಕುಳಿತು - ಪರಮಾವಧಿ ಒಂದೆರಡು ಬಾರಿ ಕೈಯೆತ್ತಿ ಸಮ್ಮತಿಯನ್ನೋ ಅಸಮ್ಮತಿಯನ್ನೋ ಸೂಚಿಸಿ—ಒಂದು ಬಟ್ಟಲು 'ಚಾ' ಕುಡಿದು ಗೌರವ ಸಂಪಾದಿಸಬೇಕೆಂಬ ಒಣ ಆಸೆಯು ಮಾತ್ರ ಈಗ ಲುಪ್ತವಾಗತಕ್ಕದ್ದಿದೆ. ಬ್ರಾಹ್ಮಣರು, ಜನಾಂಗಕ್ಕೆ ವಿದ್ಯಾಗುರುಸ್ಥಾನದಲ್ಲಿದ್ದವರು. ಹಿತಬೋಧಕರು. ಅವರು ಜನಾಂಗದ ಅಧಿನಾಯಕರಾಗಿ ನಡೆಸುವ ಕಾಲವೊಂದಿತ್ತು. ಆಗ ಹಾಗೆ ಮಾಡಿದ್ದಾಯಿತು. ಈಗ ಆ ರಂಗಸ್ಥಳವನ್ನು ಪ್ರವೇಶಿಸಿ, ನರ್ತಿಸಲು ಮತ್ತೆ ಕೆಲವರು ಅಪೇಕ್ಷಿಸತಕ್ಕವರು ಮುಂದೆ ಬಂದಿದ್ದಾರೆ. ಅವರೊಂದಿಗೆ ಸ್ಪರ್ಧಿಸಲೇಕೆ! ಕೆಲವು ದಿನ ಅವರಿಗೂ ಅವಕಾಶ ಕೊಟ್ಟಿದ್ದು, ನೋಡಲು ಬ್ರಾಹ್ಮಣರು ಸಿದ್ಧರಾಗಲಿ! ತಟಸ್ಥರಾಗಿ ಪಕ್ಕದಲ್ಲಿ ನಿಂತು ನೋಡುವಷ್ಟು ಸಮಾಧಾನವಾದರೂ ಅವರಲ್ಲಿ ಉಂಟಾಗಲಿ! ಪೋಟಾಪೋಟಿಯೇಕೆ? ವಿಸ್ತಾರವಾದ ಈ ಪ್ರಪಂಚದಲ್ಲಿ ಹುಟ್ಟಿದ ಪ್ರಾಣಿಗಳೆಲ್ಲವೂ ನೌಕರಿಯಿಂದಲೇ ಜೀವಿಸುತ್ತವೆಯೋ? ಬೇರೆ ವೃತ್ತಿಗಳೇ ಈ ಲೋಕದಲ್ಲಿ ದೊರಕವೇ! ಅಕ್ಕಟಾ, ಮಹರ್ಷಿಗಳ ಪವಿತ್ರಗೋತ್ರಜರಾದ ಬ್ರಾಹ್ಮಣರಿಗೂ ಈ ಭಾವದಾಸ್ಯವು ಏಕೆ ಪ್ರಾಪ್ತವಾಯಿತು! ಈ ಭಾವದಾಸ್ಯದ ಮಾಯಾಕವಚವನ್ನು ಮಾತ್ರ ಕಿತ್ತೊಗೆದು ಬ್ರಾಹ್ಮಣರು ಇಂದು ಸೇವಕಜೀವಿತದಿಂದ ಹಿಂದಿರುಗಿ ತಮ್ಮ ಪೂರ್ವಜರ ಪವಿತ್ರ, ಲೋಕಸೇವಾವ್ರತವನ್ನು ಅನುಸರಿಸಲು ಕಟಿಬದ್ಧರಾಗಿ, ಕಷ್ಟಸಹಿಷ್ಣುತೆಯ ಗಟ್ಟಿನೆಲದ ಮೇಲೆ ಕಾಲಿಟ್ಟು ನಿಲ್ಲಲಿ! ಅಂದು ಜನಾಂಗದಲ್ಲಿ ನಷ್ಟವಾಗಿರುವ ಅವರ ಗೌರವವು ಪುನಃ ಲಭ್ಯವಾಗುವುದೋ ಇಲ್ಲವೋ ನೋಡೋಣ! ಮನ್ನು

ಷ್ಯನು ನೆರಳಿನ ತಲೆಯನ್ನು ಹಿಡಿಯಬೇಕೆಂದು ಓಡುತ್ತಿದ್ದಷ್ಟೂ ಅದೂ ಮುಂದು ಮುಂದಕ್ಕೆ ಹೋಗುತ್ತಿರುವುದಲ್ಲದೆ ಕೈಗೆ ಸಿಕ್ಕದು. ಅವನ ಒಂದುಸಾರಿ ಅದರಿಂದ ಹಿಂದಿರುಗಿ ಸೂರ್ಯನನ್ನು ಅನುಸರಿಸಿ ನಡೆಯ ತೊಡಗಿದನೆಂದರೆ, ಅದೇ ನೆರಳೇ ಪಾದಾಕ್ರಾಂತವಾಗಿ ಅವನ ಹೆಜ್ಜೆಗಳ ನ್ನನುಸರಿಸಿಕೊಂಡು ಬರತೊಡಗುವುದು. ಲೌಕಿಕ ಸುಖಸಂಪತ್ತುಗಳೂ, ಗೌರವಪದವಿಗಳೂ, ಮಾನಮರ್ಯಾದೆಗಳೂ ಅಂಥವೇ! ಅವುಗಳನ್ನು ಪಡೆಯಲು ಆಸಿಸಿದಷ್ಟೂ ಅವೂ ಹಿಂದಹಿಂದಕ್ಕೆ ಹೋಗುತ್ತಿರುವುದು ಸ್ವಾಭಾವಿಕ; ಅಥವ ಲಭ್ಯವಾದರೂ ಒಹು ಶ್ರಮದಿಂದ ಲೇಶಮಾತ್ರ. ಆದರೆ ಅವುಗಳನ್ನು ದುರ್ಲಕ್ಷಿಸಿ ・ ನಿಶ್ಚಯಮಾರ್ಗದ ಕಡೆಗೆ ಹಿಂದಿರುಗಿದ ದಿನವೇ ಅವೂ ಅನುಸರಿಸತೊಡಗುವುವು—ಆದರೆ ಈ ಸಂದರ್ಭದಲ್ಲಿ ಭಾವ ದಾಸ್ಯ, ಸ್ವಾತಂತ್ರ್ಯ, ಲೋಕಸೇವೆ ಮುಂತಾದ ಮಾತುಗಳ ಅಪಾರ್ಥ ಮಾಡಿಕೊಂಡು, ಯಾರೊಬ್ಬರೂ ಆವೇಶಯುಕ್ತರಾಗಿ ಯಾವುದೊಂದು ಪ್ರಮಾದ ಕಾರ್ಯವನ್ನೂ ಆಚರಿಸದಂತೆ ಜಾಗ್ರತರಾಗಿರಬೇಕು.

ಇನ್ನು ಪ್ರಕೃತಕಥಾ:—

ಸುರರೂ ಅಸುರರೂ ಒಬ್ಬ ತಂದೆಯ ಮಕ್ಕಳೇ ಆದರೂ ಅವರಲ್ಲಿ ಪರಸ್ಪರ ದ್ವೇಷವು ಜನ್ಮಸಿದ್ಧವಾಗಿ ನೆಲೆಸಿದ್ದಿತು. ಪೂರ್ವಯುಗದಲ್ಲಿ, ಒಂದಾ ನೊಂದುವೇಳೆ ತ್ರಿಲೋಕಾಧಿಪತ್ಯದ ನಿಮಿತ್ತದಿಂದ ಅವರು ಒಬ್ಬರೊಂದಿ ಗೊಬ್ಬರು ಯುದ್ಧಮಾಡಲು ಸಿದ್ಧರಾದರು. ಆಗ ಅವರು ಮಂತ್ರಸಿದ್ಧರೂ ಪ್ರಾಜ್ಞರೂ ಆದ ಪುರೋಹಿತರನ್ನು ತಮಗೆ ಮಾರ್ಗದರ್ಶಕರಾಗಿರುವಂತೆ ನಿಯಮಿಸಿಕೊಳ್ಳಲಿಚ್ಛಿಸಿದರು. ಬೃಹಸ್ಪತ್ಯಾಚಾರ್ಯರನ್ನು ದೇವತೆಗಳೂ, ಶುಕ್ರಾಚಾರ್ಯರನ್ನು ದೈತ್ಯರೂ ತಮ್ಮ ಗುರುಗಳಾಗಿರಲು ಪ್ರಾರ್ಥಿಸಿಕೊಂ ಡರು. ಆಚಾರ್ಯರಿಬ್ಬರೂ ಎರಡು ಪಂಗಡಗಳ ಗುರು ಪೀಠವನ್ನೂ ಅಲಂ ಕರಿಸಿ, ತಮ್ಮಾ ಶಿಷ್ಯವರ್ಗವು ತಪ್ಪುದಾರಿಯಲ್ಲಿ ಹೋಗದಂತೆಯೂ, ಅವರಿಗೆ ಯಾವ ಬಗೆಯ ಅಪಾಯವೂ ಘಟಿಸದಂತೆಯೂ ರಕ್ಷಿಸಿಕೊಂಡು ಸರ್ವರ ಗೌರವಾದರಗಳಿಗೂ ಪಾತ್ರರಾಗಿದ್ದರು. ಹೀಗೆ ಕೆಲವು ಕಾಲ ಕಳೆಯಿತು.

ಲೋಕದಲ್ಲಿ ರಾಜ್ಯೈಶ್ವರ್ಯಗಳ ಕಾರಣದಿಂದ ಪ್ರಾರಂಭವಾದ ದ್ವೇಷವು ಶಾಂತವಾಗುವುದೆಂದರೇನು! ಸುರಾಸುರರಿಗೆ ಭಯಂಕರ ಕದನವು

ಪ್ರಾರಂಭವಾಗಿ ಉಭಯ ಪಕ್ಷದಲ್ಲೂ ಲಕ್ಷಾವಧಿ ವೀರರು ಹತರಾದರು. ರಕ್ತವು ಹೊಳೆಯಾಗಿ ಹರಿಯಿತು. ಶುಕ್ರಾಚಾರ್ಯರಾದರೋ ತಮಗೆ ಲಭ್ಯವಾಗಿದ್ದ ಮೃತಸಂಜೀವಿನೀ ವಿದ್ಯಾಮಾಹಾತ್ಮ್ಯೆಯಿಂದ ಯುದ್ಧದಲ್ಲಿ ಮೃತರಾದ ತಮ್ಮ ಶಿಷ್ಯವರ್ಗದ ದೈತ್ಯಸೈನ್ಯವನ್ನು ಬದುಕಿಸಿಬಿಡುವರು. ಇಂದು ಯುದ್ಧರಂಗದಲ್ಲಿ ಹತರಾದ ದೈತ್ಯಭಟರು ಪುನಃ ಬದುಕಿ ನಾಳೆ ಬಲವೀರ್ಯಗಳಿಂದ ಕಳೆಗೊಂಡು ಮತ್ತೆ ಯುದ್ಧಭೂಮಿಯನ್ನು ಹೊಕ್ಕು ದೇವತೆಗಳನ್ನು ಎದುರಿಸುವರು. ಆದರೆ ದೇವತೆಗಳ ಪುರೋಹಿತರಾದ ಬೃಹಸ್ಪತ್ಯಾಚಾರ್ಯರಿಗೆ ಆ ಮೃತಸಂಜೀವಿನೀ ವಿದ್ಯೆಯು ತಿಳಿಯದಿದ್ದುದರಿಂದ, ಮೇಲೆ ಮೇಲೆ ಏರುತ್ತಿದ್ದ ದೈತ್ಯಸಂಘದ ಬಲವನ್ನು ಎದುರಿಸಲಾರದೆ, ಅವರ ಏಟನ್ನು ತಡೆದುಕೊಳ್ಳಲಾರದೆ ದೇವತೆಗಳು ದಿನದಿನಕ್ಕೆ ಕ್ಷಯಿಸತೊಡಗಿದರು. ಅವರ ಧೈರ್ಯೋತ್ಸಾಹಗಳಾದರೂ ಕುಂದತೊಡಗಿದುವು. ಅಮೌಲ್ಯವಾದ ಮೃತಸಂಜೀವಿನೀ ಮಂತ್ರಜ್ಞರಾದ ಶ್ರೀ ಶುಕ್ರಾಚಾರ್ಯರನ್ನು ಗುರುಗಳನ್ನಾಗಿ ಪಡೆದ ದೈತ್ಯರ ಲಭ್ಯದ ವಿಷಯದಲ್ಲಿ ಅವರಿಗೆ ಅಸೂಯೆಯುಂಟಾಗದಿರಲಿಲ್ಲ. ಒಂದಿಗೇ ತಮ್ಮ ದೌರ್ಭಾಗ್ಯವನ್ನು ಕುರಿತು ಮರುಕವೂ ವ್ಯಸನವೂ ಉಂಟಾದುವು. ಕೆಲವರು ಹತಾಶರಾದರು. ಮತ್ತೆ ಕೆಲವರು ಅಂತಹ ಹತಾಶಸ್ಥಿತಿಯಲ್ಲೂ ಧೈರ್ಯವನ್ನು ತಳೆದು ಒಂದು ಆಪ್ತಾಲೋಚನೆಮಾಡಿ, ಬೃಹಸ್ಪತಿ ಕುಮಾರನಾದ ಕಚಬ್ರಹ್ಮಚಾರಿಯನ್ನು ಶುಕ್ರಾಚಾರ್ಯರಲ್ಲಿಗೆ ಕಳುಹಿಸಿ, ಆ ವಿದ್ಯೆಯನ್ನು ಗಳಿಸಿಕೊಂಡು ಬರುವಂತೆ ಏರ್ಪಡಿಸಬೇಕೆಂದು ನಿರ್ಧರಿಸಿದರು.

ಬೃಹಸ್ಪತ್ಯಾಚಾರ್ಯರ ಜ್ಯೇಷ್ಠಪುತ್ರನಾದ ಕಚನು, ದಿನದಿನಕ್ಕೆ ಕ್ಷಯಿಸುತ್ತಿರುವ ತಮ್ಮ ದೇವವರ್ಗಕ್ಕೆ ಬಂದ ದುರ್ದಸೆಯನ್ನು ಕಂಡು ಮರುಗಿ, ಆ ಶತ್ರುವರ್ಗದ ಮಧ್ಯದಲ್ಲಿದ್ದುಕೊಂಡಾದರೂ ಆ ವಿದ್ಯೆಯನ್ನು ಕಲಿತು ಬಂದು ದೇವಸೈನ್ಯವನ್ನು ರಕ್ಷಿಸಬೇಕೆಂದು ನಿಶ್ಚಯಮಾಡಿ ಹೊರಡಲನುವಾದನು. ಆ ಸಂದರ್ಭದಲ್ಲಿ ದೈತ್ಯಸಂಘದ ಗುಟ್ಟನ್ನು ತಿಳಿದಿದ್ದ ಒಬ್ಬರಿಬ್ಬರು ದೇವತೆಗಳು ಮುಂದೆ ಬಂದು,—“ಗುರುಪುತ್ರಾ ನಮಗೆ ಉಪಕಾರ ಮಾಡಬೇಕೆಂಬ ಅಪೇಕ್ಷೆಯಿಂದ ನಿನ್ನ ಪ್ರಾಣಾಪಾಯವನ್ನೂ ಲಕ್ಷಿಸದೆ, ಶತ್ರುರಾಜ್ಯಕ್ಕೆ ಹೊರಟಿರುವ ನಿನಗೆ ಸಕಲವಿಧ ಶ್ರೇಯಸ್ಸೂ ಉಂಟಾಗಲಿ!

ಈ ಸಮಯದಲ್ಲಿ ನಿನ್ನ ಕೆಲಸಕ್ಕೆ ಸಾಧಕವಾಗಿರುವ ಒಂದು ಮಾತನ್ನು ಹೇಳುತ್ತೇವೆ, ಕೇಳು. ಶುಕ್ರಾಚಾರ್ಯರಿಗೆ, ದೇವಯಾನಿಯೆಂಬ ಪ್ರಾಯ ಪ್ರಬುದ್ಧೆಯೂ ಸುಂದರಿಯೂ ಆದ ಮಗಳೊಬ್ಬಳುಂಟು. ಅವಳು, ಪ್ರಾಪ್ತ ವಯಸ್ಕನಾದ ನಿನ್ನನ್ನು ಕಂಡರೆ ಹೇಗೂ ಆಕರ್ಷಿತಳಾಗದೆ ಇರುವುದಿಲ್ಲ. ಆದರೂ ಪ್ರಯತ್ನಪೂರ್ವಕ, ಫಲಪುಷ್ಪಾದಿಗಳನ್ನು ತಂದು ಕೊಡುವುದೇ ಮುಂತಾದ ಕೆಲಸಗಳಿಂದ ಅವಳ ಪ್ರೀತಿಯನ್ನು ಮಾತ್ರ ಸಂಪಾದಿಸಿಕೊಳ್ಳು ವುದನ್ನು ಮರೆಯಬೇಡ. ಅದರಿಂದ ಒಂದುವೇಳೆ ನಿನಗೆ, ದೈತ್ಯರಿಂದ ಅಪಾಯ ಪ್ರಾಪ್ತವಾದರೂ, ಆಕೆಯು ನಿನ್ನನ್ನು ಸಂರಕ್ಷಿಸಲು ಅವಕಾಶ ವುಂಟಾಗುವುದು. ದಾನವರು ಬಹು ಮಾಯಾವಿಗಳು. ಜಾಗ್ರತನಾಗಿರು. ನಿನಗೆ ಶುಭವಾಗಲಿ" ಎಂದು ನುಡಿದು ಬೀಳ್ಕೊಟ್ಟರು.

ಕಚನು ಶುಭಮುಹೂರ್ತದಲ್ಲಿ ಹೊರಟು ವೃಷಪರ್ವನ ರಾಜಧಾನಿ ಯನ್ನು ಹೊಕ್ಕು, ನೇರವಾಗಿ ದೈತ್ಯಗುರುವಾದ ಶುಕ್ರಾಚಾರ್ಯರ ಆಶ್ರ ಮಕ್ಕೆ ನಡೆದು, ಆಶ್ರಮದ ಹೊರಭಾಗದಲ್ಲಿ ತಂಗಾಳಿಗೆ ಮೈಯೊಡ್ಡಿ ಕುಳಿ ತಿದ್ದ ಅಖಂಡ ಮಹಿಮಾಶಾಲಿಗಳಾದ ಅವರ ಪಾದಗಳಿಗೆ, ತನ್ನ ಪ್ರವ ರೋಚ್ಚಾರ ಪೂರ್ವಕ, ದೀರ್ಘದಂಡ ನಮಸ್ಕಾರ ಮಾಡಿದನು ಆಚಾ ರ್ಯರು ಅಪೂರ್ವವಾಗಿ ತಮ್ಮ ಬಳಿಗೆ ಬಂದ, ಆ ಬೃಹಸ್ಪತಿ ಪುತ್ರನನ್ನು ಕಂಡು ಆಶ್ಚರ್ಯವಿಂದ—'ಶ್ರೇಯೋಸ್ತು, ಪುತ್ರಾ ಏಳು. ದೇವಗುರು ಬೃಹಸ್ಪತಿ ಪುತ್ರನಾದ ನೀನು ನನ್ನಲ್ಲಿಗೆ ಬಂದ ಕರ್ತವ್ಯವೇನು? ತಿಳಿಸು' ಎಂದು ಪ್ರೇಮಪೂರ್ಣ ದೃಷ್ಟಿಯಿಂದ ನೋಡುತ್ತಾ ಕೇಳಿದರು. ಆಗ ಕಚನು-'ಆಚಾರ್ಯ ಶ್ರೇಷ್ಠರೇ, ನಾನು ನೈಷ್ಠಿಕ ಬ್ರಹ್ಮಚರ್ಯ ವ್ರತದಿಂದ ತಮ್ಮಲ್ಲಿ ಶಿಷ್ಯವೃತ್ತಿ ಮಾಡಬೇಕೆಂದು ಅಪೇಕ್ಷಿಸಿ ಬಂದಿದ್ದೇನೆ. ಅನುಗ್ರಹಿಸ ಬೇಕು' ಎಂದು ಪ್ರಾರ್ಥಿಸಿದನು. ಆ ಮಾತನ್ನು ಕೇಳಿದ ಶುಕ್ರಾಚಾರ್ಯರು, —"ಕುಮಾರಾ, ನೀನು ಹೇಳಿದ ರೀತಿಯಲ್ಲಿ ನಿನ್ನನ್ನು ಶಿಷ್ಯನಾಗಿ ಪರಿಗ್ರ ಹಿಸಿ, ನಿನ್ನ ಮನೋರಥವನ್ನು ಸಫಲಗೊಳಿಸಿದರೆ, ಅದು ಬೃಹಸ್ಪತ್ಯಾ ಚಾರ್ಯರನ್ನು ಪೂಜಿಸಿದಂತೆಯೇ ಆಗುವುದಲ್ಲವೆ! ಇದು ನನಗೆ ಪರಮ ಸಮ್ಮತವಾಗಿದೆ. ಅಂತಾಗಲಿ! ನೀನು ನಿನ್ನಿಷ್ಟದಂತೆ, ಶಿಷ್ಯವೃತ್ತಿಯ ಲ್ಲಿದ್ದು ನಮ್ಮ ಗೋಧನವನ್ನೂ ರಕ್ಷಿಸಿಕೊಂಡಿರು" ಎಂದು ನುಡಿದರು.



## ಅಧ್ಯಾಯ ೨ "ಮೃಗಗರ್ಭದಲ್ಲಿ"

ಕಚನು 'ಧನ್ಯನಾದೆ'ನೆಂದುಕೊಂಡು, ಗುರು ಶುಶ್ರೂಷಾವ್ರತವನ್ನು ಹಿಡಿದು, ಆತನ ಮನಸ್ಸಿಗೆ ಸಂತೋಷವುಂಟಾಗುವ ರೀತಿಯಲ್ಲಿ ಸೇವೆ ಮಾಡುತ್ತ, ಆತನ ಏಕಮಾತ್ರ ಪುತ್ರಿಯಾದ ದೇವಯಾನೆಯನ್ನೂ ಗೌರವಾದರಗಳಿಂದ ಕಂಡು ಆಕೆಯ ಮನಸ್ಸಿಗೂ ಸಂತೋಷವುಂಟಾಗುವಂತೆ ನಾನಾಪ್ರಕಾರವಾದ ಉಪಚಾರಗಳನ್ನು ಮಾಡುತ್ತ ಅಲ್ಲಿ ವಾಸಿಸಿಕೊಂಡಿದ್ದನು. ನಿತ್ಯವೂ ಬ್ರಾಹ್ಮೀ ಮುಹೂರ್ತದಲ್ಲೇ ಎದ್ದು, ಗುರುವಿನ ವಸ್ತ್ರಾದಿಗಳನ್ನು ಒಗೆದು ಶುಭ್ರಪಡಿಸಿ, ಪೂಜಾದ್ರವ್ಯಗಳನ್ನೂ, ಅಗ್ನಿಕಾರ್ಯಕ್ಕಾಗಿ ಸಮಿತ್ಕುಶಾದಿಗಳನ್ನೂ ಸಿದ್ಧಪಡಿಸಿಟ್ಟು, ತಾನೂ ಸ್ನಾನ ಸಂಧ್ಯಾ ಅಗ್ನಿಕಾರ್ಯ ವೇದಪಠನ ಮುಂತಾದುವುಗಳನ್ನು ತೀರಿಸಿಕೊಂಡು, ತರುವಾಯ ಆಶ್ರಮದ ಗೋ ಸಹಸ್ರಗಳನ್ನು ಬಿಟ್ಟುಕೊಂಡು ಕಾಡಿಗಾಗಿ ಹೊರಡುವನು. ವನದಲ್ಲಿ ಸಾಯಂಕಾಲದವರೆಗೂ, ಗೋವುಗಳನ್ನು ಸಮೃದ್ಧವಾಗಿ ಮೇಯಿಸಿಕೊಂಡು ನಿರ್ಮಲೋದಕವನ್ನು ಕುಡಿಸಿಕೊಂಡು ಸಂಧ್ಯಾಕಾಲದ ವೇಳೆಗೆ ಎಂದಿನಂತೆ ಆಶ್ರಮಕ್ಕೆ ಬರುವನು. ಹಾಗೆ ಬರುವಾಗ್ಗೆ ಕಾಡಿನಲ್ಲಿ ದೊರೆವ ವಿವಿಧ ವರ್ಣರಂಜಿತ ಪುಷ್ಪಗಳನ್ನೂ, ಫಲಾದಿಗಳನ್ನೂ ಇತರ ಆಶ್ಚರ್ಯಕರ ವಸ್ತುಗಳನ್ನೂ ತಂದು ಗುರುಪುತ್ರಿಯಾದ ದೇವಯಾನೆಗೆ ಕೊಟ್ಟು ಆಕೆಯ ಮನರಂಜನೆ ಮಾಡುವನು. ಆಕೆಯು ಏನು ಕೆಲಸ ಹೇಳಿದರೂ ಲೇಶವೂ ಸಾವಕಾಶಮಾಡದೆ ಅದನ್ನು ತೃಪ್ತಿಕರವಾಗಿ ನಿರ್ವಹಿಸುವನು. ದೈತ್ಯಲೋಕದಲ್ಲಿ ಎಂದೂ ಕೇಳಿ ಅರಿಯದ ಗಂಧರ್ವ ಗಾಯನದಿಂದಲೂ ನೃತ್ಯಾದಿಗಳಿಂದಲೂ ಆಕೆಯ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವನು. ಪ್ರಿಯವಯಸ್ಯನೂ ಸರಳಚಿತ್ತನೂ ಆದ ಆತನೊಂದಿಗೆ ದೇವಯಾನೆಯಾದರೂ ನಿಷ್ಕಪಟ ಭಾವದಿಂದ ಆಡಿ ಪಾಡಿ ನಕ್ಕು ನಲಿಯುತ್ತ ಸ್ನೇಹದಿಂದ ಇದ್ದಳು. ಸಂಗೀತ ಹಾಡುವವನನ್ನೂ, ನಿಷ್ಕಪಟಿಯನ್ನೂ, ಉದಾರಿಯನ್ನೂ, ಪ್ರಿಯವಾಗಿ ಮಾತನಾಡುವವನನ್ನೂ, ರೂಪವಂತನನ್ನೂ, ವಸ್ತ್ರಭೂಷಣಾದಿಗಳಿಂದ ಅಲಂಕೃತನಾದವನನ್ನೂ, ಗಂಧಮಾಲ್ಯಾದಿಗಳನ್ನು ಧರಿಸುವುದರಲ್ಲಿ ಪ್ರಿಯವುಳ್ಳವನನ್ನೂ ಕಂಡು ಮೆಚ್ಚಿ, ಮೋಹಿಸುವುದು ಪ್ರಾಯದ ಸ್ತ್ರೀಜನಕ್ಕೆ ಸ್ವಭಾವವಾದುದರಿಂದ ಪ್ರಾಯ

ಸಮರ್ಥೆಯಾದ ದೇವಯಾನಿಯಾದರೂ ಚತುರನಾದ ಆ ದೇವಗುರು ಪುತ್ರ ನನ್ನು ಸರ್ವವಿಧದಿಂದಲೂ ಮೆಚ್ಚಿಕೊಂಡಳು. ಆತನನ್ನು ಬಿಟ್ಟು ಆಹಾ ರಾದಿಗಳನ್ನು ಸ್ವೀಕರಿಸಳು. ಕಚನನ್ನು ಕ್ಷಣಮಾತ್ರ ಕಾಣದಿದ್ದರೂ ತಲ್ಲಣ ಗೊಂಡು ಮರುಗುವಳು. ಹೀಗೆ ಅವರ ಸ್ನೇಹವು ದಿನದಿನಕ್ಕೆ ಅಭಿವೃದ್ಧಿ ಗೊಂಡಿರಲು, ಕಚನೂ ತನ್ನ ಸೇವಾಕಾರ್ಯದಲ್ಲಿ ಯಾವ ವಿಧ ಲೋಪವೂ ಉಂಟಾಗದಂತೆ, ಲೇಶಮಾತ್ರವೂ ಅಲಸನಾಗದೆ ಶ್ರದ್ಧಾಭಕ್ತಿಯುಕ್ತನಾಗಿ ಗುರುಸೇವೆ ಮಾಡಿಕೊಂಡಿದ್ದನು.

ತಮ್ಮ ಕುಲಪುರೋಹಿತರಾದ ಶುಕ್ರಾಚಾರ್ಯರಲ್ಲಿ ಬಂದು ಸೇರಿದ, ಈ ನೂತನ ಶಿಷ್ಯನಾರೆಂಬುದೂ, ಅವನು ಬಂದ ಕಾರಣವೇನೆಂಬುದೂ ಬಹುಕಾಲ ದೈತ್ಯರಿಗೆ ತಿಳಿದಿರಲಿಲ್ಲ. ಕೊನೆಗೊಂದುದಿನ ಅಕಸ್ಮಾತ್ತಾಗಿ, ಅವನು ದೇವಗುರುವಾದ ಬೃಹಸ್ಪತ್ಯಾಚಾರ್ಯರ ಪುತ್ರನೆಂದೂ, ಮೃತ ಸಂಜೀವಿನೀ ವಿದ್ಯಾಲಾಭದಲ್ಲಿ ಲಕ್ಷ್ಯವಿಟ್ಟು ತಮ್ಮ ಗುರುವನ್ನು ಸೇವಿಸು ತ್ತಿರುವನೆಂದೂ, ಹೇಗೋ ತಿಳಿದುಹೋಯಿತು. ಒಡನೆ ಅಸಂಖ್ಯ ದೈತ್ಯ ಸಂಘವೇ ಆ ಬ್ರಹ್ಮಚಾರಿಯನ್ನು ವಕ್ರದೃಷ್ಟಿಯಿಂದ ನೋಡಲು ಪ್ರಾರಂ ಭಿಸಿತು. ಆ ಸಂಗತಿಯನ್ನು ಆಚಾರ್ಯರಲ್ಲಿ ವಿಜ್ಞಾಪಿಸಿ, ಅವನನ್ನು ಕಳು ಹಿಸಿಬಿಡಿರೆಂದು ಬೇಡಿಕೊಳ್ಳಬೇಕೆಂಬಷ್ಟು ಸೌಜನ್ಯವಾದರೂ ದೈತ್ಯರಲ್ಲಿ ಉಂಟೆ? ಒಡನೆ ಹೇಗಾದರೂ ಮಾಡಿ, ಅವನನ್ನು ದೇಹಾಂತ ತೀರಿಸಿಬಿಡ ಬೇಕೆಂದು ರಹಸ್ಯವಾಗಿ ಯೋಚಿಸಿಕೊಂಡರು. ಸಮಯಕಾದು ಅವನನ್ನು ವಧಿಸುವ ಕಾರ್ಯಕ್ಕೆಂದೇ ಕೆಲವರು ನಿಯಮಿಸಲ್ಪಟ್ಟರು.

ಆದರೆ, ತನ್ನ ವಧೆಗಾಗಿ ನಡೆಯುತ್ತಿದ್ದ ಈ ಪ್ರಯತ್ನಗಳಲ್ಲೊಂದೂ ಕಚನಿಗೆ ತಿಳಿಯವು. ಹೀಗೆ ಕೆಲವು ಕಾಲ ಕಳೆಯಲು, ಮುಂದೆ, ಒಂದುದಿನ ಅವನು ಎಂದಿನಂತೆ, ತನ್ನ ಸ್ನಾನ ಸಂಧ್ಯಾ ಆಹ್ನಿಕ, ವೇದಪಾಠ ಮುಂತಾ ದುವುಗಳನ್ನು ತೀರಿಸಿಕೊಂಡು, ಗೋಸಮೂಹವನ್ನು ಬಿಟ್ಟುಕೊಂಡು ವನಾಭಿಮುಖವಾಗಿ ಹೊರಟನು. ಅಲ್ಲಿ ಅವುಗಳ ಮನರಂಜನೆಗಾಗಿ ಕೆಲ ಕೆಲವು ವೇಳೆ ಕೊಳಲೂದುತ್ತ, ಮತ್ತೆ ಕೆಲವುವೇಳೆ ಉಚ್ಚಸ್ವರದಿಂದ ಗಾನಮಾಡುತ್ತ, ನಡೆಯಲಾರದ ಚಿಕ್ಕ ಕರುಗಳನ್ನು ತೋಳುಗಳಿಂದೆತ್ತಿ ಕೊಂಡು ನಡೆಯುತ್ತ, ಸ್ವತಃ ಮೇಯಲಾರದ ಎಳೆಗರುಗಳಿಗೆ ಎಳೆಯ

ಗೆಂಕೆಯು ಹುಲ್ಲನ್ನು ಕಿತ್ತು ತಿನ್ನಲಿತ್ತು. ಆಗಾಗ ಅವುಗಳ ತಾಯಿಯು ಮೊಲೆ ಯೂಡಲಿತ್ತು. ಮಧ್ಯಾಹ್ನ ಬಿಸಿಲೇರಿತೆಂದರೆ ಆ ಗೋವುಗಳನ್ನು ನೀರೆಡೆಗೆ ತರುವ, ತಿಳಿನೀರ್ಕುಡಿದು ತೃಪ್ತವಾದನಂತರ ವಿಶಾಲವಾದ ಒಂದು ವೃಕ್ಷ ದಡಿಯಲ್ಲಿ ವಿಶ್ರಾಮಗೊಳ್ಳಲು ನೆರೆಯಿಸಿ, ತಾನೂ ಕೆಲಹೊತ್ತು ವಿಶ್ರಾಂತಿ ಗಾಗಿ ಕುಳಿತನು. ಮಧ್ಯಾಹ್ನದ ಬಿಸಿಲೂ ಆಯಾಸವೂ ಅಧಿಕವಾಗಿರಲು, ಅಲ್ಲೇ ಇದ್ದ ತಂಪಾದ ಎಳೆಹುಲ್ಲಿನಮೇಲೆ ಕೆಲಹೊತ್ತು ಮಲಗಿ ಶ್ರಮ ಪರಿಹಾರವಾಡಿಕೊಳ್ಳಬೇಕೆಂಬ ಅಪೇಕ್ಷೆಯಾದರೂ ಆ ಯುವಕನಿಗೆ ಸ್ವಾಭಾವಿಕವಾಗಿಯೇ ಉಂಟಾಯಿತು. ಕಚನು ಒಡನೆ ಹಾಗೆ ಅಂಗತ ನಾಗಿ ಮಲಗಿ, ನೀಲವರ್ಣದ ವಿಶಾಲ ಅಂತರಿಕ್ಷವನ್ನೂ, ಅದರಲ್ಲಿ ದೇದೀಪ್ಯ ಮಾನನಾಗಿ ಮಹತ್ಪ್ರಕಾಶದಿಂದ ಬೆಳಗುತ್ತಿದ್ದ ದಿನಮಣಿಯನ್ನೂ ಕಂಡು ಪರಮಾಶ್ಚರ್ಯಗೊಂಡವನಂತೆ, ಆ ಸಂಬಂಧ ಯೋಚನೆಯಲ್ಲೇ ಮಗ್ನ ನಾಗಿಬಿಟ್ಟನು. ವಿದ್ಯಾವಂತನೂ ವೇದಜ್ಞನೂ ಆಗಿದ್ದ ಆತನಿಗೆ ಆಗ ಭೂ ಗೋಳ ಖಗೋಳ ಶಾಸ್ತ್ರಸಂಬಂಧವಾದ ಅನೇಕ ವಿಚಾರಗಳು ಸ್ಮೃತಿಗೆ ಬಂದುವು. ಆ ವಿಚಾರಗಳಲ್ಲೇ ಮನಸ್ಸು ಹೊಕ್ಕಿರಲು ಆತನು ಬಹುಹೊತ್ತು ಹಾಗೇ ಮಲಗಿದ್ದನು.

ದೈತ್ಯಕುಲಕ್ಕೇ ಶತ್ರುಸ್ವರೂಪನಾಗಿದ್ದ ಅವನನ್ನು ವಧಿಸಲು ಯೋಗ್ಯ ಸಮಯ ನಿರೀಕ್ಷಣೆಯಲ್ಲಿದ್ದ ದೈತ್ಯರಲ್ಲಿ ಕೆಲವರು, ತಮ್ಮ ಆ ಬೇಟೆಯು ಕೇವಲ ಏಕಾಂಗಿಯಾಗಿಯೂ ಅವಶನಾಗಿಯೂ ಇದ್ದ ಆ ಸ್ಥಿತಿಯನ್ನು ನೋಡಿದರು. ಆಶ್ರಮದಿಂದ ಬಹು ದೂರವಿದ್ದು ನಿರ್ಜನವಾಗಿದ್ದ ಆ ಸ್ಥಳ ದಲ್ಲಿ ನಡೆಯಿಸುವ ತಮ್ಮ ಕೃತ್ಯವು ಬಯಲಾಗುವ ಮಾರ್ಗವಿಲ್ಲವೆಂಬ ಯೋಚನೆಯೂ ಅವರಿಗೆ ಹೊಳೆಯಲು - ಮತ್ತಷ್ಟು ಧೈರ್ಯವುಂಟಾಯಿತು. ಒಡನೆ ಅವರು ತಮ್ಮ ಪರಿಚಯ ಸಿಕ್ಕದಂತೆ, ಮುಖಗಳಿಗೆ ವಿವಿಧ ವರ್ಣ ಗಳನ್ನು ಬಳಿದುಕೊಂಡು, ಭಯಂಕರ ತೀಕ್ಷ್ಣಧಾರೆಯ ಮಚ್ಚುಕತ್ತಿ ಗಳನ್ನು ಹಿಡಿದು ಝಳಪಿಸುತ್ತಾ, ಕಿವಿಗಳು ಕಿವುಡಾಗುವಂತೆ ನಾಲ್ವರೂ ಏಕಕಾಲದಲ್ಲಿ ಗರ್ಜನೆಮಾಡಿ ಕೇಕೆ ಹಾಕಿಕೊಳ್ಳುತ್ತಾ, ಬೇರೆ ಬೇರೆ ದಿಕ್ಕು ಗಳಿಂದ ಓಡಿ ಬಂದು, ಅವನು ಅದು ಏನೆಂದು ಮೇಲಕ್ಕೆದ್ದು ನೋಡು ವುದರೊಳಗಾಗಿ. ಕೈಕಾಲು ತಲೆಗಳನ್ನು ನೆಲಕ್ಕೊತ್ತಿ ಹಿಡಿದುಬಿಟ್ಟರು. ಕಚನು ನಿರುಪಾಯನಾಗಿ, ತನಗೆ ಬಂದ ಆಪತ್ತಿಗಾಗಿ ಭಯಚಕಿತನಾದನು.

ದೇವಕಾರ್ಯ ಸಾಧನೆಗೆ ಉಂಟಾದ ಆ ವಿಘ್ನಕ್ಕಾಗಿ ಕಳವಳಗೊಂಡನು. ತನ್ನ ಪ್ರಿಯಗೆಳತಿಯಾದ ದೇವಯಾನೆಯನ್ನಾದರೂ ಆ ಅಪಾಯ ವೇಳೆಯಲ್ಲಿ ನೆನೆದುಕೊಳ್ಳದಿರಲಿಲ್ಲ. ಅಷ್ಟರಲ್ಲಿ ಆ ದುರುಳ ರಕ್ಕಸರು, ಭಯಂಕರ ಗರ್ಜನೆಮಾಡಿ,—'ಎಲವೋ ಪೋರಾ ನೀನಾರೋ, ಇಲ್ಲಿಗೇಕೆ ಬಂದೆಯೋ! ನಿನ್ನನ್ನಾರೋ ಕಳುಹಿಸಿದವರು?' ಎಂದು ಪ್ರಶ್ನಿಸಿದರು. ಆ ಮಾತನ್ನು ಕೇಳಿ ಕಚನು,—'ಅಯ್ಯಾ ನಾನು ಬೃಹಸ್ಪತಿ ಪುತ್ರನು. ನನ್ನನ್ನು 'ಕಚ' ಎಂಬ ಹೆಸರಿನಿಂದ ಕರೆಯುವರು. ಗುರುಸೇವೆಮಾಡಿ ಕೃತಾರ್ಥನಾಗ ಬೇಕೆಂದು ಮಹಾನುಭಾವರಾದ ಶುಕ್ರಾಚಾರ್ಯರಲ್ಲಿಗೆ ಬಂದಿದ್ದೇನೆ! ನೀವಾರು! ನನ್ನನ್ನೇಕೆ ಹೀಗೆ ಮುತ್ತಿಕೊಂಡು, ಕತ್ತಿಗಳನ್ನು ತೋರು ಸುತ್ತಾ ಬೆದರಿಸುತ್ತಿರುವಿರಿ! ನನ್ನಿಂದ ನಿಮಗೇನಾಗಬೇಕು! ಒಬ್ಬರ ತಂಟೆಗೆ ಹೋಗದೆ, ನಿಮ್ಮ ಗುರುಗಳ ಸೇವೆಯಲ್ಲಿ ನಿರತನಾಗಿರುವ ನನ್ನನ್ನು ಹಿಂಸಿಸಲು ಕಾರಣವೇನು?' ಎಂದು ಪ್ರಶ್ನಿಸಿದನು.

ಆದರೆ, ಕಚನು ಹೇಳುತ್ತಿದ್ದ ಸಮಂಜಸವೂ ನ್ಯಾಯಸಮ್ಮತವೂ ಆದ ಆ ಮಾತುಗಳನ್ನು ಕೇಳುವಷ್ಟು ಸಮಾಧಾನವೆಲ್ಲಿ ಆ ಕ್ರೂರ ದೈತ್ಯರಿಗೆ? ಒಡನೆ, 'ಹೊಡೆ ಕಡಿ ಜಡಿ' ಎಂದು ಕೇಕೆ ಹಾಕುತ್ತಾ, ಕೈಯಲ್ಲಿದ್ದ ಮುಚ್ಚು ಕತ್ತಿಗಳನ್ನು ಮೇಲಕ್ಕೆತ್ತಿ,—'ನಿನ್ನನ್ನು ಕೊಲ್ಲಬೇಕಾದುದಕ್ಕೆ ಅದೇ ಕಾರಣವು! ಆ ದುರುಳ ದೇವತೆಗಳ ಕಡೆಯವನಾಗಿ ದೈತ್ಯರ ಗುರುವನ್ನು ಸೇವಿಸಲು ಬಂದದ್ದೇ ಕಾರಣವು!' ಎಂದು ನುಡಿದು, ಒಂಡೇ ಸಾರಿಗೆ ಆ ನಾಲ್ಕು ಕತ್ತಿಗಳನ್ನೂ ನಿರಪರಾಧಿಯಾದ ಅವನಮೇಲೆ ಪ್ರಯೋಗಿಸಿ ದರು. ಮುಂದೇನು! ಕ್ಷಣಮಾತ್ರದಲ್ಲಿ ಆ ಯುವಕನ ಮನೋಹರ ದೇಹವು ನಾಲ್ಕಾರು ತುಂಡುಗಳಾಗಿ ಕತ್ತರಿಸಿಹೋಯಿತು. ಒಡನೆ ಅವುಗಳ ನ್ನೆತ್ತಿಕೊಂಡು ನಡೆದು ಒಂದು ತೋಳದ ಗುಹೆಯ ಬಳಿ ಎಸೆದು, ತಮ್ಮತಮ್ಮ ಸ್ವಸ್ಥಾನಗಳಿಗೆ ಹೊರಟುಹೋದರು. ಹಸಿವೆಯಾತುರಕ್ಕೆ ಹೆಸರಾದ ಆ ಮೃಗವು ಕ್ಷಣಮಾತ್ರದಲ್ಲಿ, ಅಸ್ಥಿಕೇಶಗಳ ಸಮೇತವಾಗಿ, ಆ ಬ್ರಾಹ್ಮಣ ಪುತ್ರನ ದೇಹವನ್ನು ಭಕ್ಷಿಸಿ ನಿಶ್ಶೇಷವಾಗಿಸಿತು. ಇಂತು ಬೃಹಸ್ಪತಿ ಪುತ್ರನು ಮೃಗದ ಗರ್ಭದಲ್ಲಿ ಜೀರ್ಣವಾಗತೊಡಗಿದನು.

## ಅಧ್ಯಾಯ ೩ "ಮೃತಸಂಜೀವಿನೀ"

ಸೂರ್ಯನು ಪಶ್ಚಿಮಾಭಿಮುಖವಾಗಿ ಗಮಿಸತೊಡಗಿದ್ದನು. ಮುಂದೆಯ ಹಸುಗಳು ಕ್ರಮಕ್ರಮವಾಗಿ ಎದ್ದು ನಿದಾನವಾಗಿ ಮೇಯ್ದು ಕೊಳ್ಳುತ್ತಾ, ಅಭ್ಯಾಸ ಬಲದಿಂದ ಆಶ್ರಮಾಭಿಮುಖವಾಗಿ ನಡೆಯತೊಡಗಿ, ಸೂರ್ಯಾಸ್ತಮಯದ ವೇಳೆಗೆ ತಮ್ಮ ದೊಡ್ಡಿಗೆ ಬಂದು ಸೇರಿದುವು. ಪ್ರತಿ ದಿನವೂ ಪ್ರಾತಃಕಾಲ ಕಚನು ಪಶುಮಂದೆಯೊಂದಿಗೆ ಹೊರಡುವಾಗ ಆತನ ಸಮೀಪದಲ್ಲಿ ಬಂದು ನಿಂತು, ಪ್ರಿಯವಾಕ್ಯಗಳಿಂದ ಪ್ರೋತ್ಸಾಹಿಸಿ, ಆತನ ಮನೋಹರ ರೂಪವನ್ನು ತನ್ನ ನೇತ್ರಪಾತ್ರೆಗಳಲ್ಲಿ ತುಂಬಿಕೊಂಡು, ಸಾವಕಾಶವಮಾಡದೆ ಹಿಂದಿರುಗಬೇಕೆಂದು ಆಶ್ವಾಸನವನ್ನಿತ್ತು, ತನ್ನಾ ಪ್ರಾಣ ಮನೋಹರನನ್ನು ಕಳುಹಿಸುತ್ತಾ, ದಿನದ ಮೂವತ್ತು ಗಳಿಗೆಯೂ ಅವನ ಯೋಚನೆಯಲ್ಲೇ ಇದ್ದು,—'ಎಂದಿಗೆ ಸಾಯಂಕಾಲವಾದೀತು, ಎಂದಿಗೆ ಪುನಃ ಈ ನನ್ನ ಪ್ರಿಯ ವಯಸ್ಯನನ್ನು ಕಂಡೇನು' ಎಂದು ಹಂಬಲಿಸುತ್ತಾ, ಸಾಯಂಕಾಲದಲ್ಲಿ ಸಮಿತ್ಕುಶಾದಿಗಳು, ವಿವಿಧ ಪುಷ್ಪ ಫಲಗಳು, ಕಟ್ಟಿಗೆಯ ಹೊರೆ, ಮುಂತಾದುವುಗಳನ್ನು ಹೊತ್ತು ಬರುತ್ತಿದ್ದ ಅವನ ಬಳಿಗೆ ಓಡಿ ಬಂದು, ಆಯಾ ವಸ್ತುಗಳನ್ನು ಜಾಗ್ರತೆಯಿಂದ ಇಳಿಸಿಕೊಂಡು, 'ಬಹು ಆಯಾಸಪಟ್ಟೆಯಲ್ಲಾ' ಎಂದು ಪ್ರಿಯವಾಕ್ಯಗಳಿಂದ ಆದರಿಸಿ, ಆ ತನ್ನ ಹೃದಯೇಶನನ್ನು ತನ್ನಾ ವಿಶಾಲ ನೇತ್ರಗಳ ಪೂರ್ಣ ದೃಷ್ಟಿಯಿಂದಲೇ ಆಲಂಗಿಸಿ ಶ್ರಮ ಪರಿಹಾರಗೊಳಿಸುತ್ತಿದ್ದ ಆ ದೇವಯಾನಿಯು, ಇಂದು ಪಶುಮಂದೆಯೊಂದಿಗೆ ಕಚನು ಬಾರದಿದ್ದುದನ್ನು ಕಂಡು ಗಾಬರಿಯಾದಳು. ಅವನು ಏಕೆ ಬರಲಿಲ್ಲವೆಂಬುದು ತಿಳಿಯಲಿಲ್ಲ. ಅವನಿಗೆ ಏನಾಯಿತೆಂದು ತೋರಲಿಲ್ಲ. ಕತ್ತಲಾದರೂ ಬಾರದೆ, ಎಲ್ಲಿ ನಿಂತನೆಂಬುದು ಬುದ್ಧಿಗೆ ಸ್ಫುರಿಸಲಿಲ್ಲ. ಅತಿಶಯ ಗಾಬರಿ ತೋರಿತು. ಹೆಂಗರುಳಲ್ಲವೆ! ಪಾಪ, ಅಳತೊಡಗಿದಳು. ಓಡಿ, ತಂದೆಯ ಬಳಿಗೆ ನಡೆದು,—'ಅಪ್ಪಾ, ಕತ್ತಲಾಯಿತು. ಈ ದಿನ ಇನ್ನೂ ಕಚ ಬರಲಿಲ್ಲ. ದಿನವೂ ಸಂಜೆಯ ಹೊತ್ತಿಗೆ ಹಸುಗಳ ಮಂದೆಯೊಂದಿಗೆ ಬರುತ್ತಿದ್ದ ಕಚನು ಈ ದಿನ ಏಕೋ ಬರಲಿಲ್ಲ. ಅಕಟಾ, ಏನಾಗಿದ್ದೀತು! ಕಾಡಿನಲ್ಲಿ ಏನಪಾಯವಾಯಿತೋ! ಎಲ್ಲಿ ಎಡಹಿ ಬಿದ್ದನೋ! ಯಾವ ಕಾಡುಮೃಗಗಳ ಬಾಯಿಗೆ ತುತ್ತಾದನೋ! ನೀರ್ಕುಡಿಯಲು

ಹೋಗಿ, ಎಲ್ಲಿ ನದಿಕೆರೆಗಳಲ್ಲಿ ಮುಗುಚಿಬಿದ್ದು ಮುಳುಗಿದನೋ! ಅಯ್ಯೋ!- ಆ ನನ್ನ ಪ್ರಾಣಪ್ರಿಯನಿಗೆ ಏನಾಯಿತೆಂದು ಯಾರು ಹೇಳುವರು! ಆತನ ಆ ಸುಂದರ ಮುಖವನ್ನು ನಾನೆಂತು ಪುನಃ ಕಂಡೇನು?' ಎಂದು ವಿಲಪಿಸತೊಡಗಿದಳು.

ಶುಕ್ರಾಚಾರ್ಯರಿಗೆ ದೇವಯಾನೆಯೊಬ್ಬಳೇ ಮಗಳು! ಅವಳ ಮೇಲೆ ಅವರಿಗೆ ಪ್ರೇಮ ಬಹಳ! ಅವರು ಆ ಕನ್ಯೆಯನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಪೋಷಿಸುತ್ತಿದ್ದರು. ಅವಳ ಇಷ್ಟಕ್ಕೆ ವಿರೋಧವಾದ ಯಾವುದನ್ನೂ ಎಂದೂ ಮಾಡುತ್ತಿರಲಿಲ್ಲ. ಅವಳು ಏನು ಬೇಕೆಂದರೆ, ಅದನ್ನು ಬಹು ಪ್ರಯತ್ನಪೂರ್ವಕವಾದರೂ ತಪ್ಪದೆ ತಂದುಕೊಟ್ಟು ಅವ ಳಿಗೆ ಪ್ರಿಯವನ್ನುಂಟುಮಾಡುವರು. ಅಂತಹ ತಮ್ಮ ಪ್ರಿಯಪುತ್ರಿಯು, ತನ್ನ ಸರ್ವಸ್ವವೂ ಸೂರೆಹೋಯಿತೇ ಎಂಬಂತೆ, ಉಚ್ಚಸ್ವರದಿಂದ ರೋದಿಸುತ್ತಿ ದ್ದುದನ್ನು ಕೇಳಿದೊಡನೆಯೇ, ಅವರ ಹೃದಯಕೋಶವೇ ಒಡೆದು ಹೋದಂತೆ ಗಾಬರಿಪಟ್ಟು ಅವರು 'ಏನು ಏನು ಕಚನು ಬರಲಿಲ್ಲ? ಏಕೆ? ಇರಲಿ ಅಳಬೇಡ, ಸ್ವಲ್ಪ ಸಮಾಧಾನವಾಗು! ಅವನು ಎಲ್ಲಿದ್ದರೂ ಹುಡುಕಿಸಿ ಬರಮಾಡುತ್ತೇನೆ.' ಎಂದು ನುಡಿದು ಆಕೆಯ ಅಳುವನ್ನು ಸುಮ್ಮನಾಗಿಸಿ, ಜ್ಞಾನದೃಷ್ಟಿಯಿಂದ ನೋಡಲು, ನಡೆದ ಕೃತ್ಯವು ಯಥಾಸ್ಥಿತವಾಗಿ ದೃಷ್ಟಿ ಗೋಚರವಾಯಿತು. ದುರುಳ ದೈತ್ಯರು, ಅವನನ್ನು ಹಿಡಿದು ಕಡಿದು ತೋಳ ಗಳಿಗೆ ತಿನ್ನಿಸಿದರೆಂಬುದು ತಿಳಿದುಹೋಯಿತು. ಅದ್ಯಂತವಾಗಿ ದೈತ್ಯರ ಸ್ವಭಾವವನ್ನು ಬಲ್ಲವರಾಗಿದ್ದ ಅವರು, ಆ ಕಾರ್ಯಕ್ಕಾಗಿ ಆಶ್ಚರ್ಯಗೊಳ್ಳ ಲಿಲ್ಲ. ಅಲ್ಲದೆ ಅವರಿಗೆ ಕೋಪವೂ ಉಂಟಾಗಲಿಲ್ಲ. ಕೊಲೆ ಕೊಳ್ಳೆ ಸುಲಿಗೆ ಮೋಸ ಕಾಪಟ್ಯಾದಿಗಳು ದೈತ್ಯರಿಗೆ ಜನ್ಮದೊಂದಿಗೇ ಬಂದ ಗುಣಗಳೆಂಬುದು ಅವರಿಗೆ ತಿಳಿಯದಿರಲಿಲ್ಲ. ಆದುದರಿಂದ ಆಗ ನಡೆದುಹೋಗಿದ್ದ ಆ ಕಾರ್ಯ ಕ್ಕಾಗಿ ಕೋಪಗೊಳ್ಳದೆ ಹುಸಿನಗುವನ್ನು ನಕ್ಕು, –'ಮಗೂ ದೇವಯಾನೆ ಯೋಚಿಸಬೇಡ. ಸಮಾಧಾನದಿಂದಿರು. ಇನ್ನು ಸ್ವಲ್ಪ ಹೊತ್ತಿನೊಳ ಗಾಗಿ, ನಿನ್ನ ಪ್ರಿಯಮಿತ್ರನು ತಪ್ಪದೆ ಇಲ್ಲಿಗೆ ಬರುವಂತೆ ಮಾಡುವೆನು' ಎಂದು ನುಡಿದು, ಏಕಾಂತ ಸ್ಥಳಕ್ಕೆ ನಡೆದು, ಶುದ್ಧಾಚಮನ ಮಾಡಿ, ಮೃತಸಂಜೀವಿ ನೀಮಂತ್ರ ಪುರಶ್ಚರಣೆಯಿಂದ ಜಲವನ್ನು ಅಭಿಮಂತ್ರಿಸಿ, ಕಚನು ಹೋಗಿದ್ದ

ದಿಕ್ಕಿಗೆಸೆದು—'ಕುಮಾರಾ ಕಚಾ, ಹೊರಟು ಬಾ' ಎಂದು ಕೂಗಿದರು. ಒಡನೆ ಕೇಳುವುದೇನು! ಆ ಅದ್ಭುತ ಮಂತ್ರಶಕ್ತಿಯಿಂದ, ಕಚನು ತನ್ನ ದೇಹಮಾಂಸವನ್ನು ತಿಂದಿದ್ದ ಆ ತೋಳದ ಹೊಟ್ಟೆಯಲ್ಲಿ ರೂಪುಗೊಂಡು, ಅದರ ಉದರವನ್ನು ಭೇದಿಸಿಕೊಂಡು ಹೊರಹೊರಟು, ಸಮೀಪದ ಕೊಳದಲ್ಲಿ ಮಿಂದು, ಬಹು ಶೀಘ್ರಕಾಲದಲ್ಲೇ ಆಶ್ರಮವನ್ನು ಸೇರಿ, ಆಚಾರ್ಯರಿಗೆ ವಂದಿಸಿದನು. ದೇವಯಾನೆಯು, ಆತನನ್ನು ಕಂಡು ಪರಮಾನಂದದಿಂದ ಆವಿರಳ ಹರ್ಷಾಶ್ರುಗಳನ್ನು ಸುರಿಸಿ, ದುಃಖಶಮನ ಮಾಡಿಕೊಂಡಳು. ಮತ್ತು ಅವನನ್ನು ಕುರಿತು—'ಗುರುಪುತ್ರಾ, ಇದೇನು ಇಂದು ದಿನವೂ ಬರುತ್ತಿದ್ದಂತೆಯೇ ಸಂಜೆಯವೇಳೆಗೆ ಪಶುಮಂದೆಯೊಂದಿಗೆ ಬರಲಿಲ್ಲವೇಕೆ? ಸಾವಕಾಶಕ್ಕೆ ಕಾರಣವೇನು?' ಎಂದು ಕೇಳಿದಳು. ಕಚನು, ಕಾಡಿನಲ್ಲಿ ಹಸುಗಳನ್ನು ಮೇಯಿಸಿಕೊಂಡಿದ್ದ ತನ್ನನ್ನು ದೈತ್ಯರು ಬಂದು, ಪರಿಚಯ ಕೇಳಿ, ತರುವಾಯ ವಧಿಸಿದರೆಂದು ನಡೆದ ಸಂಗತಿಯನ್ನೆಲ್ಲ ಯಥಾಸ್ಥಿತವಾಗಿ ತಿಳಿಸಿದನು. ಅದನ್ನು ಕೇಳಿ, ಆತನಿಗುಂಟಾದ ಕಷ್ಟಕ್ಕಾಗಿ ಮರುಗಿ ಅಂದು ಸಮ್ಮನಾದಳು.

ಕಚನು ಮಾರನೆಯ ದಿನ ಎಂದಿನಂತೆ ಎದ್ದು, ತನ್ನ ನಿತ್ಯಕೃತ್ಯಗಳನ್ನೆಲ್ಲ ಮುಗಿಸಿಕೊಂಡು, ಪುನಃ ಪಶುಮಂದೆಯನ್ನು ಬಿಟ್ಟುಕೊಂಡು ಹೊರಟನು. ದೇವಯಾನೆಯು ಆ ದಿನ ಆತನಿಗೆ ಮತ್ತಾವ ಬಗೆಯ ಅಪಾಯವು ಪ್ರಾಪ್ತವಾಗಲಿರುವುದೋ, ಎಂದು ಹೆದರಿದ್ದಳು. ಬಹು ಜಾಗರೂಕನಾಗಿರೆಂದು, ಆತನಿಗೆ ಪುನಃ ಪುನಃ ಹೇಳಿಕೊಂಡು ಕಳುಹಿಸಿದಳು. ಅಪಾಯ ಸಂಭವಿಸಲಿರುವುದೆಂದು ತಿಳಿದಿದ್ದರೂ, ವಿಧಾಯಕ ಕೃತ್ಯಗಳನ್ನು ನೆರವೇರಿಸದೆ ಇಲ್ಲಲು ಸಾಧ್ಯವಿಲ್ಲವಷ್ಟೆ! ಕಚನು ಯಥಾಪೂರ್ವವಾಗಿ ವನದಲ್ಲಿ ತನ್ನ ಕೆಲಸದಲ್ಲಿ ನಿರತನಾಗಿದ್ದನು. ದೈತ್ಯರು ತಮ್ಮಿಂದ ಹತನಾದ ಅವನು ಪುನಃ ಗುರುಕೃಪೆಯಿಂದ ಬದುಕಿಬಂದುದನ್ನು ತಿಳಿದು, ರೋಷಾವೇಶಯುಕ್ತರಾಗಿ, ಆ ದಿನ ಪುನಃ ಬಂದು ಏಕಾಂಗಿಯಾಗಿದ್ದ ಅವನನ್ನು ಮುತ್ತಿಕೊಂಡು, ಖಡ್ಗಹತಿಯಿಂದ ಒಂದೇಸಾರಿಗೆ ವಧಿಸಿಬಿಟ್ಟರು. ಅಷ್ಟು ಮಾತ್ರವಲ್ಲ — ದೇಹದ ಮಾಂಸಖಂಡಗಳನ್ನು ಹಲಸಿನಕಾಯಿ ಕೊಚ್ಚುವಂತೆ ಕೊಚ್ಚಿ ಅದನ್ನೂ, ಎಲುಬನ್ನು ಗಂಧದಂತೆ ಅರೆದು ಅದನ್ನೂ ಸಮುದ್ರ

ಜಲದೊಳಗೆ ಕಲಸಿಬಿಟ್ಟು—'ಇನ್ನು ಶತ್ರು ನಾಶವಾಯಿತು' ಎಂದು ಕೊಂಡರು.

ಆ ದಿನ ಸಾಯಂಕಾಲವೂ ಪಶುಮಂದೆಯೊಂದಿಗೆ ಕಚನು ಮನೆಗೆ ಬರಲಿಲ್ಲ. ದೇವಯಾನೆಯು ತಂದೆಯ ಬಳಿಗೆ ಹೋಗಿ, ದೈತ್ಯರು ಪುನಃ ಅವನನ್ನು ವಧಿಸಿರಬಹುದೆಂದು ತಿಳಿಸಿ, ಮೇಲೆ ಮೇಲೆ ತನಗೆ ಪ್ರಾಪ್ತ ವಾಗುತ್ತಿದ್ದ ಹಿಂಸೆಗಾಗಿ ಅತಿಶಯ ಮರುಗಿದಳು. ಶುಕ್ರಾಚಾರ್ಯರು ಜ್ಞಾನದೃಷ್ಟಿಯಿಂದ ನೋಡಿ, ನಡೆದ ಸಂಗತಿಯನ್ನು ಮಗಳಿಗೆ ತಿಳಿಸಿ, ಬೆದರಬೇಡವೆಂದು, ಮಂತ್ರಪ್ರಯೋಗದಿಂದ ಪುನಃ ಅವನನ್ನು ಬದುಕಿಸಿ, ಬರಮಾಡಿದರು. ಮೂರನೆಯ ದಿನವೂ ಕಚನು ಎಂದಿನಂತೆ, ಪಶು ಮಂದೆಯ ಹಿಂದೆ ಹೊರಟುದನ್ನು ದೈತ್ಯರು ನೋಡಿ ಹತಾಶರಾದರು. ಮಾಂಸವನ್ನು ನುಚ್ಚು ನುಚ್ಚು ಮಾಡಿ, ಎಲುಬನ್ನು ಗಂಧದಂತೆ ಅರೆದು ಸಮುದ್ರ ಜಲದಲ್ಲಿ ಕದಡಿದ್ದರೂ, ಅವನನ್ನು ಬದುಕಿಸಿದ ತಮ್ಮ ಗುರು ಗಳ ಮಂತ್ರಶಕ್ತಿಯು ಅವರನ್ನು ಮೂಗ್ತರನ್ನಾಗಿ ಮಾಡಿತು. ಆ ತಮ್ಮ ಶತ್ರುವನ್ನು ಹೇಗೆ ತೀರಿಸಿ ನಿಶ್ಚಿಂತರಾಗುವುದೆಂಬುದು ಅವರಿಗೆ ತೋರದಾ ಯಿತು. ಕೊನೆಗೆ ಅವರಲ್ಲೊಬ್ಬನು, ಅವನನ್ನು ಸುಟ್ಟು, ಆ ಬೂದಿ ಯನ್ನು ಶುಕ್ರಾಚಾರ್ಯರು ಪಾನಮಾಡುವ ಮದಿರೆಯಲ್ಲಿ ಬೆರೆಸಿ, ಅದು ಅವರ ಉದರವನ್ನು ಸೇರುವಂತೆ ಮಾಡಿಬಿಟ್ಟರೆ, ಮುಂದೆ ಅವನನ್ನು ಬದು ಕಿಸುವ ಮಾರ್ಗವಿರುವುದಿಲ್ಲವೆಂದು ಸೂಚಿಸಿದನು. ಆ ಉಪಾಯವು ಎಲ್ಲ ರಿಗೂ ಸಾಧುವೆಂದು ತೋರಿತು. ಆ ದಿನ ನಾಲ್ವರು ದೈತ್ಯರು ಹೊರಟು, ತನ್ನ ನಿತ್ಯವೃತ್ತಿಯಂತೆ ಕಾಡಿನಲ್ಲಿದ್ದ ಅವನನ್ನು ಕೊಂದು, ದೇಹವನ್ನು ಭಸ್ಮಮಾಡಿ, ಆ ಬೂದಿಯನ್ನು ತಂದು ಮದ್ಯದೊಂದಿಗೆ ಬೆರೆಸಿ, ಶುಕ್ರಾ ಚಾರ್ಯರಿಗೆ ಭೋಜನೋತ್ತರ ಕುಡಿಯಲಿತ್ತರು. ಎಂದಿನಂತೆ ಕುಡಿವ ಆ ಮದ್ಯದಲ್ಲಿ ಯಾವ ವಿಶೇಷವನ್ನೂ ಕಾಣಲರಿಯದೆ, ಆಚಾರ್ಯರು ಅದನ್ನೂ ಕುಡಿದರು. ಭಸ್ಮಸ್ವರೂಪಿ ಕಚನು ಇಂತು ದೈತ್ಯ ಗುರುವಿನ ಉದರವನ್ನೇ ಸೇರಿಬಿಟ್ಟನು !

ದೇವಯಾನೆಯು ಆ ದಿನವೂ ಕಚನಿಗೆ ತಪ್ಪದೆ ಅಪಾಯ ಸಂಭವಿಸು ವುದೆಂದು ಯೋಚಿಸಿದ್ದಂತೆಯೇ ಆಯಿತು. ಕಚನು ಮನೆಗೆ ಬರಲಿಲ್ಲ.

ಪುನಃ ಕಣ್ಣೀರಿಡುತ್ತ ತಂದೆಯ ಬಳಿಗೆ ನಡೆದು — ಅಕಟಾ, ಪುನಃ ದುರುಳ ದೈತ್ಯರು. ಆ ಮುನಿಕುಮಾರನ ಪ್ರಾಣಕ್ಕೆ ಮುಗಿದರೆಂಬುದಕ್ಕೆ ಸಂದೇಹ ವಿಲ್ಲ. ಪ್ರಿಯಜನಕಾ, ಇಂತಹ ದುರುಳರ ಸಹವಾಸವನ್ನು ಬಿಟ್ಟು ಹೋಗಿ ವಾಸಿಸಲು ನಮಗೆಲ್ಲೂ ಸ್ಥಳವಿಲ್ಲವೆ! ಇದೇನನ್ಯಾಯ! ಇಂತಹ ಅನ್ಯಾಯ ಮಯಸ್ಥಳದಲ್ಲಿ ವಾಸಿಸಲು ನಿನಗೆ ಬೇಸರವುಂಟಾಗುವುದಿಲ್ಲವೆ?' ಎಂದಳು. ಶುಕ್ರಾಚಾರ್ಯರು ಸ್ವಲ್ಪ ವಿಷಾದಪಟ್ಟು. ಪುನಃ ತಮ್ಮ ಪ್ರಿಯಶಿಷ್ಯನಿಗೆ ಏನಾಗಿರಬಹುದೆಂದು ಜ್ಞಾನದೃಷ್ಟಿಯಿಂದ ನೋಡಲು, ಈ ಸಾರಿ ನಡೆ ದಿರುವ ಸಂಗತಿಯು ಎಂತಹ ಅಪಾಯಕರವಾದುದೆಂಬುದು ಗೋಚರ ವಾಯಿತು. ಆ ಸಂಗತಿಯನ್ನು ಮಗಳಿಗೆ ತಿಳಿಸಿ,—'ಪುತ್ರೀ ಈಗ ಅವನು ದುರುಳರ ಕುಮಂತ್ರದಿಂದ ಭಸ್ಮಸ್ವರೂಪವಾಗಿ ನನ್ನ ಉದರವನ್ನೇ ಪ್ರವೇ ಶಿಸಿದ್ದಾನೆ. ಅವನು ಬದುಕಬೇಕಾದರೆ ನಾನು ಸಾಯಬೇಕಾಗುತ್ತದೆ. ಮುಂದೇನು ಮಾಡಲು ಸಾಧ್ಯ?' ಎಂದರು. ಅದನ್ನು ಕೇಳಿ ಗುರು ಪುತ್ರಿಯು,—'ತಾತಾ, ಅದು ಎಂತಾದರಾಗಲಿ, ನಾನು ಆ ನನ್ನ ಗೆಳೆ ಯನನ್ನು ಕಾಣದೆ ಕ್ಷಣಮಾತ್ರವೂ ಜೀವಿಸಲಾರೆನು. ನನಗೆ ನಿನ್ನ ಪ್ರಾಣವು ಹೇಗೆ ಪ್ರಿಯಕರವಾದುದೋ, ಆತನ ಪ್ರಾಣವೂ ಹಾಗೆಯೇ ಪ್ರೀತಿಪಾತ್ರ ವಾದುದು. ಈ ಸಂದರ್ಭದಲ್ಲಿ ನಿಮ್ಮಿಬ್ಬರಿಗೂ ಅಪಾಯವುಂಟಾಗದಂತೆ ಜೀವಿಸುವ ಪರಿಯನ್ನು ಯೋಚಿಸು" ಎಂದು ಅಂಗಲಾಚಿಕೊಂಡಳು.

ಶುಕ್ರಾಚಾರ್ಯರು, ದೈತ್ಯರು ತಮ್ಮ ದುರ್ಮಾರ್ಗತನದಿಂದ ತಾವೇ ಕೆಡುವರೆಂದುಕೊಂಡು,—'ತಮ್ಮ ವಿದ್ಯಾಪ್ರಭಾವದಿಂದ ತಮ್ಮ ಉದರಸ್ಥ ನಾದ ಕಚನನ್ನು ಒದುಕಿಸಿ,—'ಅಯ್ಯಾ ಕುಮಾರಾ, ಈಗ ನೀನು ಹೊರಕ್ಕೆ ಬರಲು, ನನ್ನ ಉದರವನ್ನು ಭೇದಿಸದೆ ಬೇರೆ ಮಾರ್ಗವಿಲ್ಲ. ಹಾಗಾದರೆ ನಾನು ಬದುಕುವ ಆಸೆಯಿಲ್ಲ. ಈ ಸಂದರ್ಭದಲ್ಲಿ ಏನು ಮಾಡೋಣ!'' ಎಂದರು. ಕಚನು,—'ಸ್ವಾಮೀ ಕಾಲಕರ್ಮ ಸಂಯೋಗದಿಂದ ಎಂತೂ ನಾನು ತಮ್ಮ ಉದರವನ್ನು ಸೇರಿದ್ದೇನೆ. ಪಿತೃಸ್ವರೂಪರಾದ ತಾವು ಹೇಗೆ ಅನುಗ್ರಹಿಸಿದರೆ, ಹಾಗೆ ನಡೆಯಲು ಸಿದ್ಧನಾಗಿದ್ದೇನೆ" ಎಂದು ನುಡಿದನು. ಆಗ ಶುಕ್ರಾಚಾರ್ಯರು ಬಹು ದೀರ್ಘವಾಗಿ ಯೋಚಿಸಿ,—'ಮಗೂ, ಈಗ ಒಂದೇ ಉಪಾಯವಿದೆ. ನೀನು ಬೃಹಸ್ಪತಿ ಪುತ್ರನಾದುದೇ ನಿಶ್ಚಯವಾದರೆ,

ಇಗೋ ನಾನೀಗ ನಿನಗೆ ಈ ವಿದ್ಯೆಯನ್ನು ಉಪದೇಶ ಮಾಡುತ್ತೇನೆ. ತರುವಾಯ ನೀನು ನನ್ನ ಉದರವನ್ನು ಭೇದಿಸಿಕೊಂಡು ಹೊರಕ್ಕೆ ಬಂದು, ಕೃತಜ್ಞನಾಗಿ ಪುನಃ ನನ್ನನ್ನು ಬದುಕಿಸು'' ಎಂದರು. ಕಚನು ಹಾಗೇ ಆಗ ಲೆಂದು ನುಡಿದನು. ಆಚಾರ್ಯರು ಪ್ರಯೋಗಪೂರ್ವಕ ಮೃತಸಂಜೀವಿನೀ ವಿದ್ಯೆಯನ್ನು ಅವನಿಗೆ ಉಪದೇಶಿಸಿದರು. ತರುವಾಯ ಕಚನು ತನ್ನಾ ಗುರುವಿನ ಉದರವನ್ನು ಭೇದಿಸಿಕೊಂಡು ಹೊರಕ್ಕೆ ಬಂದು, ಅಮೌಲ್ಯವೂ, ಅಪೂ ರ್ವವೂ ಆದ ಆ ವಿದ್ಯಾಮಹಿಮೆಯಿಂದ ಅತಿಶಯ ತೇಜಸ್ವಿಯಾಗಿ, ದೇವ ಯಾನೆಯ ಕಣ್ಣಗಳಿಗೆ ಹಬ್ಬವನ್ನುಂಟುಮಾಡಿದನು.



**ಅಧ್ಯಾಯ ೪** **"ಹಾಳುಭಾವಿಯಲ್ಲಿ"**

ಪರಮ ತಪೋಧನನಾದ ಭಾರ್ಗವನ ಗರ್ಭವನ್ನು ಭೇದಿಸಿಕೊಂಡು ಹೊರಕ್ಕೆ ಬಂದ ಕಚನು, ಗತಪ್ರಾಣನಾಗಿ ಬಿದ್ದಿದ್ದ ತನ್ನ ಆಚಾರ್ಯನನ್ನು ಕಂಡು, ಕನಿಕರದಿಂದ ಒಡನೆ ಸ್ನಾನಾದಿಗಳನ್ನಾಚರಿಸಿ, ಶುದ್ಧಾಚಮನ ಮಾಡಿ ಆತನಿಂದ ತನಗೆ ಉಪದೇಶಿಸಲ್ಪಟ್ಟಿದ್ದ ಅಮೃತ ಸಮಾನವಾದ ಆ ಮೃತ ಸಂಜೀವಿನೀ ಮಂತ್ರವನ್ನೇ ಪುರಶ್ಚರಣೆ ಮಾಡಿ, ವೇದರಾಶಿಯೋ ಎಂಬಂತೆ ಪೂಜ್ಯನಾದ ಆತನನ್ನು ಪುನಃ ಬದುಕಿಸಿದನು. ಗತಪ್ರಾಣನಾಗಿದ್ದ ತನ್ನ ಪ್ರಿಯ ಜನಕನು ಪುನರ್ಜೀವಿತನಾದುದನ್ನು ಕಂಡ ದೇವಯಾನೆಯು ಪರಮಾನಂದದಿಂದ ಆತನ ಪಾದಗಳಿಗೆ ನಮಸ್ಕರಿಸಿದಳು. ಕಚ ಬ್ರಹ್ಮ ಚಾರಿಯೂ, ಆ ತನ್ನ ಗುರುವರ್ಯನ ಪಾದಗಳಿಗೆ ನಮಿಸಿ,—'ಮಹಾನು ಭಾವರೇ, ವಿದ್ಯಾವಿಹೀನನಿಗೆ ಅಮೃತಸಮಾನವಾದ ವಿದ್ಯಾದಾನಮಾಡು ವಂತಹ ಪುರುಷನನ್ನು ತಂದೆತಾಯಿಗಳಿಗೆ ಸಮಾನನೆಂದು ಹಿರಿಯರು ಹೇಳುವರು. ಹೀಗಿರುವಲ್ಲಿ ನನ್ನನ್ನು ಹೊಟ್ಟೆಯಲ್ಲಿ ಧರಿಸಿ, ವಿದ್ಯಾದಾನ ಮಾಡಿ ಧನ್ಯನನ್ನು ಮಾಡಿದ ತಮ್ಮ ವಿಷಯದಲ್ಲ ಯಾವ ಬಗೆಯ ಕೃತಜ್ಞತೆ ಯನ್ನು ತೋರಿಸಬೇಕೋ ತೋರದಾಗಿದೆ. ಮಹಾತ್ಮರೇ, ತಮ್ಮಂತೆ ಭೂತದಯಾಪರರೂ, ಸಾತ್ವಿಕಶಿರೋಮಣಿಗಳೂ ಧರ್ಮಮಾರ್ಗೈಕತತ್ಪ

ರರೂ ಆದ ಮಹಾನುಭಾವರ ವಿಷಯದಲ್ಲಿ ಕೃತಘ್ನನಾಗಿ ದ್ರೋಹವನ್ನಾಚರಿಸುವ ಪಾಪಿಯು ಶಾಶ್ವತವಾಗಿ ನರಕ ಕೂಪದಲ್ಲಿ ಬೀಳುವನು ; ಇದಕ್ಕೆ ಸಂಶಯವಿಲ್ಲ" ಎಂದು ನುಡಿದು ಪುನಃ ಪುನಃ ನಮಸ್ಕರಿಸಿದನು. ಶುಕ್ರಾಚಾರ್ಯರು, ವೇದಜ್ಞನೂ, ತಪಸ್ವಿಯೂ ಕೃತಜ್ಞನೂ ಆದ ಆ ಬೃಹಸ್ಪತಿ ಪುತ್ರನನ್ನು ಕಂಡು,—'ಮಗೂ ಕಚ, ದೇವಕಾರ್ಯ ಸಾಧನೆಗಾಗಿ ಬಹು ಕಷ್ಟಸಹನೆಮಾಡಿ ಕೊನೆಗೂ ಈ ವಿದ್ಯೆಯನ್ನು ಸಾಧಿಸಿದ ನಿನ್ನನ್ನು ಕಂಡು ನನಗೆ ಪರಮಾನಂದವಾಗಿದೆ. ಪರೋಪಕಾರ ಪರಾಯಣನಾದ ನಿನ್ನ ಕೀರ್ತಿಯು ಲೋಕದಲ್ಲಿ ಶಾಶ್ವತವಾಗಿ ನಿಲ್ಲುವುದು. ಇನ್ನು ನೀನು, ನಿನ್ನವರಲ್ಲಿಗೆ ಸುಖವಾಗಿ ಹಿಂದಿರುಗಿ, ಗೃಹಸ್ಥಾಶ್ರಮಿಯಾಗಿ ಯಜ್ಞಯಾಗಾದಿಗಳನ್ನು ಮಾಡಿ ಧರ್ಮವನ್ನಾರ್ಜಿಸು. ಈ ಮೃತಸಂಜೀವಿನೀ ವಿದ್ಯೆಯು ದೇವಲೋಕಕ್ಕೆ ಉಪಕೃತವಾಗಲಿ" ನಿನಗೆ ಸಕಲವಿಧ ಶ್ರೇಯಸ್ಸುಗಳೂ ಉಂಟಾಗುವುವು. ಕಂದಾ ಸುಖವಾಗಿರು" ಎಂದು ಆಶೀರ್ವದಿಸಿದರು. ಕಚನೂ ಅವರ ಅಪ್ಪಣೆ ಪಡೆದು ಹೊರಟು, ದೇವಯಾನೆಯನ್ನು ಕಾಣಬೇಕೆಂದು ಆಕೆಯಿದ್ದೆಡೆಗೆ ಹೊರಟನು.

ಕಚನಿಗೆ ಮೃತಸಂಜೀವಿನೀ ಮಂತ್ರೋಪದೇಶವಾದುದರಿಂದ, ದೇವ ಸೈನ್ಯಕ್ಕೆ ಪ್ರಾಪ್ತವಾದ ಬೆಂಬಲದ ಸಹಜಸ್ವರೂಪವಾದರೂ ಅವರಿಗೆ ಮನಸ್ಸಿಗೆ ಹೊಳೆಯದಿರಲಿಲ್ಲ. ಅದರಿಂದ ತಮ್ಮ ಶಿಷ್ಯವರ್ಗದವರಾದ ದೈತ್ಯಕುಲದ ಬಲಪರಾಕ್ರಮಗಳಾದರೂ ಎಷ್ಟು ಪ್ರಮಾಣದಿಂದ ಕುಂದಿದುವೆಂಬುದು ಅವರ ಗಮನಕ್ಕೆ ಬಂದಿತು. ಆಗ ಅವರು ಇಷ್ಟಕ್ಕೆಲ್ಲಾ ತಮ್ಮ ಬುದ್ಧಿಯು ಮದ್ಯದ ಆಕರ್ಷಣೆಗೆ ಒಳಗಾಗಿ ಭ್ರಾಂತಿಗೊಂಡುದೇ ಕಾರಣವೆಂದು ಯೋಚಿಸಿ, ಅತಿಶಯ ಕಳವಳಪಟ್ಟು, ಮುಂದೆ ಬ್ರಾಹ್ಮಣ ವರ್ಗಕ್ಕೆ ಕ್ಷೇಮವನ್ನು ಚಿಂತಿಸಿ—'ಇಗೋ ನಾನೀಗ ಹೇಳುತ್ತಿರುವ ಮಾತುಗಳನ್ನು ಸಕಲ ಭೂತಗಳೂ ಕೇಳಲಿ! ಇಂದುಮೊದಲು ಬ್ರಾಹ್ಮಣನಾದವನು ಸುರಾಪಾನವನ್ನು ಮಾಡಿದರೆ, ಅವನು ತನ್ನ ಬ್ರಾಹ್ಮಣ್ಯವನ್ನು ಹೋಗಲಾಡಿಸಿಕೊಂಡು, ಬ್ರಾಹ್ಮಣ ವಿಹಿತ ಕರ್ಮಗಳಿಂದ ಬಹಿಷ್ಕೃತನಾಗುವನಲ್ಲದೆ, ಬ್ರಹ್ಮಹತ್ಯ ಮಾಡಿದವನೋಪಾದಿಯಲ್ಲಿ ಇಹಪರಗಳಲ್ಲೂ ಗತಿಯನ್ನು ಹಾಳುಮಾಡಿಕೊಳ್ಳುವನು" ಎಂದು ನುಡಿದರು. ಮತ್ತು

ಅಲ್ಲೇ ಇದ್ದ ಕೆಲಮಂದಿ ದೈತ್ಯಮುಖ್ಯರನ್ನು ಕರೆದು, — ಎಲೈ ಮೂಢ ಮತಿಗಳಿರಾ, ಬೃಹಸ್ಪತಿ ಕುಮಾರನಾದ ಆ ಬ್ರಹ್ಮಚಾರಿಯ ವಿಷಯದಲ್ಲಿ ನೀವು ಮೇಲೆ ಮೇಲೆ ಆಚರಿಸುತ್ತಿದ್ದ ದ್ರೋಹಗಳೇ, ಅವನಿಗೆ ಸಾಧಕವಾಗಿ ಪರಿಣಮಿಸಿದುವು. ಇಂದು ಆತನು ಮೃತಸಂಜೀವಿನೀ ವಿದ್ಯೆಯನ್ನು ಕೈಗೊಂಡು ಬ್ರಹ್ಮಸಮಾನನಾಗಿ ಶೋಭಿಸುತ್ತಿರುವನು. ನಿಮ್ಮ ದುಡುಕು ತನವೇ ನಿಮಗೆ ದ್ರೋಹಮಾಡಿತು. ನಿಮ್ಮ ದ್ರೋಹವೇ ನಿಮ್ಮನ್ನು ಕೆಡಿಸಿತು'' ಎಂದು ನುಡಿದರು. ದೈತ್ಯರಾದರೂ ಕೈಮೀರಿ ಹೋದ ಆ ವಿಚಾರದಲ್ಲಿ ಏನೂ ಮಾಡಲಾರದೆ, ತಮ್ಮ ದುರ್ವಿಧಿಯನ್ನು ನಿಂದಿಸಿಕೊಂಡು ಸುಮ್ಮನಾದರು.

ಇತ್ತ ಕಚನು, ದೇವಯಾನೆಯನ್ನು ಕಂಡು, ಎಂದಿನಂತೆ ವಂದಿಸಿ ' ಸೋದರಿ, ನಾನಿಲ್ಲಿಗೆ ಯಾವ ಉದ್ದೇಶದಿಂದ ಬಂದೆನೋ ಆ ಕಾರ್ಯವು, ಆಚಾರ್ಯರ ಪರಮಾನುಗ್ರಹದಿಂದಲೂ ನಿನಗೆ ಈ ದೀನನ ವಿಷಯದಲ್ಲಿದ್ದ ನಿಷ್ಕಲ್ಮಷ ಪ್ರೇಮದಿಂದಲೂ ಫಲಕಾರಿಯಾಯಿತು. ದೇವಕಾರ್ಯವು, ಇಂತು ಸುಲಲಿತರೀತಿಯಿಂದ ನೆರವೇರಿದುದಕ್ಕಾಗಿ ಪರಮಸಂತುಷ್ಟನಾದೆನು. ಮಾತ್ರವಲ್ಲ, ಆ ನನ್ನ ದೇವಬಂಧುಗಳ ಪರವಾಗಿ ನಿನ್ನನ್ನೂ ಸಹಸ್ರಶಃ ವಂದಿಸುತ್ತೇನೆ. ನನ್ನ ವಿಷಯದಲ್ಲಿ ನೀನು ಇಟ್ಟಿದ್ದ ಪವಿತ್ರ ಪ್ರೇಮಕ್ಕೆ ಪ್ರತಿಯಾಗಿ ನಾನು ಏನನ್ನು ಕೊಟ್ಟು ನನ್ನ ಕೃತಜ್ಞತೆಯನ್ನು ತೋರ್ಪಡಿಸಲಿ! ಪ್ರಿಯಸೋದರಿ-ಒಂದಲ್ಲ ಎರಡಲ್ಲ ಮೂರುಬಾರಿ, ನಾಮಾವಶೇಷನಾಗಿದ್ದ ನನ್ನನ್ನು ನಿನ್ನ ತಂದೆಯಿಂದ ಬದುಕಿಸಿ, ಪ್ರಾಣದಾನಮಾಡಿದ. ನಿನ್ನ ಋಣವನ್ನು ನಾನು ಎಷ್ಟು ಜನ್ಮಗಳಲ್ಲಿ ನಿನ್ನ ಉದರದಲ್ಲಿ ಪುತ್ರನಾಗಿ ಹುಟ್ಟಿ ತೀರಿಸಲಿ ! ನಾನಿನ್ನೇನು ಹೆಚ್ಚು ಹೇಳಲಿ ! ನನಗಿನ್ನು ಅಪ್ಪಣೆಯನ್ನು ಕೊಡು ನಾನು ಹೋಗಿ ಬರುವೆನು ! ಈ ದೀನನ ವಿಷಯದಲ್ಲಿ ಈವರೆಗೆ ತೋರಿಸುತ್ತಿದ್ದ ನಿನ್ನ ನಿಷ್ಕಳಂಕ ಪ್ರೇಮವೇ ಎಂದೆಂದಿಗೂ ಇರಲಿ!'' ಎಂದು ಹಸ್ತಗಳನ್ನು ಮುಗಿದು, ಹೊರಡಲನುವಾದನು.

ಇಷ್ಟುಹೊತ್ತೂ ಕಚನು ಹೇಳುತ್ತಿದ್ದ ಮಾತುಗಳನ್ನೆಲ್ಲ ತಲೆ ಬಗ್ಗಿಸಿ ಕೇಳುತ್ತಿದ್ದ ದೇವಯಾನೆಯು, ದೀರ್ಘವಾದೊಂದು ನಿಟ್ಟುಸಿರುಬಿಟ್ಟು,

ಆತನು ಹೊರಡಲುನುವಾದೊಡನೆಯೇ ತಲೆಯೆತ್ತಿ ಒಂದುಬಾರಿ ಆತನ ಮುಖವನ್ನು ನೋಡಿದಳು. ಆ ಒಂದು ನೋಟವು ಬಹು ವಿಧಾರ್ಥಗಳನ್ನು ಸೂಚಿಸುತ್ತಿದ್ದಿತಾದರೂ, ನಿಷ್ಕಳಂಕ ಹೃದಯನಾಗಿದ್ದ ಕಚನು ಯಾವ ಭಾವಾಂತರವನ್ನೂ ಹೊಂದದೆ, ಮುಂದೇನು ಹೇಳುವಳೋ ಎಂದು ಹಾಗೆಯೇ ನಿಂತಿದ್ದನು. ಆಗ ದೇವಯಾನಿಯು, ಅಷ್ಟು ದಿನ ತನ್ನೊಡನಾಡಿಯಾಗಿದ್ದು, ಅಂದು ತನ್ನನ್ನು ಅಗಲಿಹೋಗುತ್ತಿರುವ ಆತನನ್ನು ಕಂಡು, ಮಾತನಾಡಲು ಕುತ್ತಿಗೆಯ ನರಗಳು ಉಬ್ಬಿ, ಗಂಟಲು ಕಟ್ಟಿಹೋಗುವಂತಿರಲು ಆತನನ್ನು ಕುರಿತು — "ಗುರುಪುತ್ರಾ, ಅಂಗೀರಸ ಮುನಿಯ ಮೊಮ್ಮಗನೂ ದೇವಗುರುವಾದ ಬೃಹಸ್ಪತ್ಯಾಚಾರ್ಯರ ಪುತ್ರನೂ, ಸದಾಚಾರಸಂಪನ್ನನೂ, ವಿದ್ಯೆಯಿಂದಲೂ, ಇಂದ್ರಿಯನಿಗ್ರಹ, ತಪಸ್ಸಮೃದ್ಧಿ, ಮೃತಸಂಜೀವಿನೀ ವಿದ್ಯಾಲಾಭ ಮುಂತಾದುವುಗಳಿಂದಲೂ, ಶೋಭಿಸುತ್ತಿರುವ ನಿನ್ನನ್ನು ಎಷ್ಟೋ ದಿನಗಳಿಂದಲೂ ನನ್ನ ಆರಾಧ್ಯಮೂರ್ತಿಯಾಗಿ ನನ್ನ ಹೃದಯದಲ್ಲಿ ಧರಿಸಿದ್ದೇನೆ. ಈವರೆಗೆ ನೀನು ಬ್ರಹ್ಮಚರ್ಯವ್ರತನಿಷ್ಠನಾಗಿದ್ದು,ಗುರು ಶುಶ್ರೂಷಾತತ್ಪರನಾಗಿದ್ದುದರಿಂದ ನಿನ್ನನ್ನು ಪ್ರಶ್ನಿಸಲಿಲ್ಲ. ಪ್ರಾಣಮನೋಹರ, ನನ್ನನ್ನು ಪಾಣಿಗ್ರಹಣ ಮಾಡಿ ಕೃತಾರ್ಥಳನ್ನಾಗಿಸು. ಈ ತನುವು ನಿನ್ನ ಪಾದಸೇವೆಗಾಗಿ ಮೀಸಲಾಗಿರುವುದು. ದೀನಳ ಈ ಪ್ರಾರ್ಥನೆಯನ್ನು ನಿರಾಕರಿಸಬೇಡ" ಎಂದು ಅಂಗಲಾಚಿಕೊಂಡಳು.

ದೇವಯಾನಿಯ ಆ ಮಾತುಗಳನ್ನು ಕೇಳಿ ಕಚನು ಗಡಗಡನೆಂದು ನಡುಗಿಹೋದನು. ಹೃದಯವು ತಲ್ಲಣಿಸಿತು. 'ಶಾಂತಪಾಪಂ' ಎಂದು ಕಿವಿಗಳನ್ನು ಮುಚ್ಚಿಕೊಂಡು,—'ಗುರುಪುತ್ರೀ, ಸೋದರೀ ಎಂತಹ ಧರ್ಮವಿರುದ್ಧವಾದ ಮಾತುಗಳನ್ನಾಡುತ್ತಿರುವೆಯಲ್ಲಾ ! ಗುರುಪುತ್ರಿಯು ಸಾಕ್ಷಾತು ಸೋದರೀ ಸದೃಶಳಲ್ಲವೆ! ಅಷ್ಟುಮಾತ್ರವಲ್ಲ—ನೀನು ಯಾವ ಗರ್ಭದಿಂದ ಜನನಹೊಂದಿದೆಯೋ, ಆ ಉದರದಲ್ಲೇ ನಾನೂ ವಾಸಿಸಿ ಬಂದವನಾದುದರಿಂದ, ನಾನು ಕೇವಲ ಧರ್ಮದೃಷ್ಟಿಯಿಂದ ಮಾತ್ರವಲ್ಲ—ವ್ಯವಹಾರ ದೃಷ್ಟಿಯಿಂದಲೂ ನಿನ್ನ ಅನುಜನಾದೆನಲ್ಲವೆ? ಹೀಗಿರುವಲ್ಲಿ ನನ್ನ ವಿಷಯದಲ್ಲಿ ಈಪರಿಯಲ್ಲಿ ಯೋಚಿಸಬಹುದೆ? ಬೇಡ-ಬೇಡ! ನನಗೆ

ಅಪ್ಪಣೆಕೊಡು, ಹೋಗುತ್ತೇನೆ. ನಿನಗೆ ಶುಭವಾಗಲಿ" ಎಂದು ನುಡಿದು ಎರಡು ಹೆಜ್ಜೆಗಳನ್ನಿಟ್ಟನು.

ಆಗ ದೇವಯಾನೆಯು, ಆತನು ನ್ಯಾಯಸಮ್ಮತವಾಗಿ ಆಡುವ ಮಾತುಗಳನ್ನು ಕೇಳಿ, ಮುಂದೆ ಮಾರ್ಗತೋರದೆ — 'ಪ್ರಿಯಾ, ನೀನು ಇಲ್ಲಿಗೆ ಬಂದಾಗಿನಿಂದಲೂ, ನಿನ್ನ ಮೋಹನ ಮೂರ್ತಿಯಿಂದ ಆಕರ್ಷಿತ ಹೃದಯಳಾಗಿ ನಾನು ತಪಿಸುತ್ತಿದ್ದುದರಿಂದಲೇ ಅಲ್ಲವೆ, ಮೂರುಸಾರಿ ನಿನ್ನನ್ನು ದೈತ್ಯರು ಸಂಹರಿಸಿದ್ದಾಗಲೂ ಬದುಕಿಸಿಕೊಂಡುದು! ಲೋಕದಲ್ಲಿ ಸಜ್ಜನನಾದವನು, ಜಗದ ಸಮಸ್ತ ಅವಿವಾಹಿತ ಹೆಣ್ಣುಮಕ್ಕಳನ್ನೂ ಮಧ್ಯಪ್ರಾಯದ ಸ್ತ್ರೀಯರನ್ನೂ ಸಹೋದರಿಯರಂತೆಯೂ, ತನಗಿಂತಲೂ ಹಿರಿಯ ವಯಸ್ಸಿನ ಸ್ತ್ರೀಯರನ್ನು ತಾಯಿಯರಂತೆಯೂ ಕಾಣುವುದು ಧರ್ಮವಾಗಿರುವಂತೆಯೇ ನೀನೂ ನನ್ನನ್ನು ಈವರೆಗೂ ಆ ಭಾವನೆಯಿಂದ ಕಾಣುತ್ತಿದ್ದುದರಲ್ಲಿ ದೋಷವಿಲ್ಲವೆನ್ನೋಣ! ಆದರೆ, ಈಗ ನಾನು, ನನ್ನ ಮನಃಪೂರ್ವಕವಾಗಿ ನಿನ್ನನ್ನು ಹೃದಯಾರಾಧ್ಯ ಮೂರ್ತಿಯನ್ನಾಗಿ ವರಿಸಿರುವುದರಿಂದ, ನಿನ್ನನ್ನೇ ನಂಬಿ ಅನುರಾಗಪೂರ್ವಕ ಬಂದಿರುವ ಯುವತಿಯಾದ ನನ್ನನ್ನು ತ್ಯಜಿಸುವುದು ಧರ್ಮವಾಗಲಾರದು! ಪ್ರಿಯಾ, ನಿಶ್ಚಯವಾಗಿಯೂ ನನ್ನ ಈ ಪ್ರಾರ್ಥನೆಯನ್ನು ನಿರಾಕರಿಸಬೇಡ. ನಾನು ನಿನಗೆ ಉಪಕಾರ ಮಾಡಿದನೆಂಬ ಭಾವವು ನಿನ್ನ ಮನಸ್ಸಿನಲ್ಲಿದ್ದರೆ, ಇಗೋ ಇದೊಂದು ಮಾರ್ಗದಿಂದಲ್ಲದೆ, ಅನ್ಯಥಾ ನನಗೆ ಕೃತಜ್ಞತೆಯನ್ನು ತೋರಿಸಲಾರೆ' ಎಂದಳು. ಕೇವಲ ಧರ್ಮವಿರುದ್ಧವಾದ ಆ ಮಾತುಗಳಿಗೆ ಕಚನು ಬಹುಮಟ್ಟಿಗೆ ಮನನೊಂದು— 'ದೇವಯಾನೆ, ಪರಮ ತಪೋಧನರಾದ ಶುಕ್ರಾಚಾರ್ಯರ ಪವಿತ್ರ ಗರ್ಭಸಂಭೂತಳಾದ ನೀನು, ಇಂತಹ ನ್ಯಾಯವಿರುದ್ಧವಾದ ಯೋಚನೆ ಮಾಡುವೆಯೆಂದು ನಾನು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಜಿತೇಂದ್ರಿಯನಲ್ಲದ ಯಾವನೊಬ್ಬನು ನಿನ್ನನ್ನೇ ಯಾಚಿಸಿಕೊಳ್ಳಬೇಕಾದ ಇಂತಹ ವಿಷಯದಲ್ಲಿ, ನೀನೇ ಇಷ್ಟು ಬಗೆಯಿಂದ ಕೇಳಿಕೊಳ್ಳುತ್ತಿದ್ದರೂ, ಧರ್ಮಭೀತನಾದ ನಾನು ಇದಕ್ಕೆ ಒಪ್ಪಲಾರೆನು. ಕ್ಷಮಿಸು" ಎಂದನು.

ಕಚನ ಈ ನಿರ್ಧಾರದ ಮಾತುಗಳು ದೇವಯಾನೆಗೆ ನಿರಾಶೆಯನ್ನುಂಟುಮಾಡಿದುವು. ಆತನು ತನಗೆ ಸ್ವಾಧೀನನಾಗಲಾರನೆಂಬುದು ನಿಶ್ಚಯವಾಯಿತು. ಆಗಲಾಕೆಯು ತಡೆಯಲ್ಪಟ್ಟ ನಾಗಸರ್ಪದಂತೆ ಬುಸುಗುಟ್ಟುತ್ತ

"ನಾನು ಧರ್ಮಕಾಮಗಳನ್ನು ಒಯಸಿ ಅನುರೂಪನೂ ಪ್ರಿಯವಯಸ್ಯನೂ ಆದ ನಿನ್ನನ್ನು ಕಾಮಿಸಿದೆನಲ್ಲದೆ ಬೇರಲ್ಲ. ನಿನಗೆ ಅನೇಕ ಸಂದರ್ಭಗಳಲ್ಲಿ ಸಹಾಯಕಳಾಗಿ ಇಷ್ಟು ದಿನಗಳಿಂದ ಪ್ರಿಯಗೆಳತಿಯಾಗಿ ಕೂಡಿಯಾಡಿ, ಈಗ ಇಷ್ಟು ಬಗೆಯಿಂದ ಪ್ರಾರ್ಥಿಸಿಕೊಂಡರೂ, ನೀನು ನನ್ನನ್ನು ನಿರಾಕರಿಸಿದೆಯಾದ್ದರಿಂದ, ಯಾವ ನನ್ನ ಸಂಬಂಧದಿಂದ ನೀನು ಆ ಮೃತಸಂಜೀವಿನೀ ವಿದ್ಯೆಯನ್ನು ಗಳಿಸಿದೆಯೋ ಅದು ನಿನಗೆ ಫಲಿಸದೆ ಹೋಗಲಿ!" ಎಂದು ಶಾಪಕೊಟ್ಟಳು. ಕಚನು ಕಾಮುಕಳೂ ಅವಿಚಾರಿಯೂ ಆದ ಆ ಸ್ತ್ರೀಯಳ ಕೋಪವು, ಅಷ್ಟುಮಾತ್ರದಲ್ಲೇ ಪರಿಣಾಮವಾದುದಕ್ಕಾಗಿ ಒಂದು ಬಗೆಯಿಂದ ಸಮಾಧಾನವನ್ನೇ ಹೊಂದಿ, ಹಸನ್ಮುಖದಿಂದ 'ಸೋದರೀ, ನಿನ್ನ ಪವಿತ್ರಪ್ರೇಮ ಮೂಲವಾಗಿಯೇ ಲಭ್ಯವಾಗಿದ್ದ ಆ ವಿದ್ಯೆಯ ಪ್ರಯೋಜನವನ್ನು ನೀನೇ ಹೀಗೆ ಪ್ರತಿಬಂಧಿಸಿದುದು ಸಮವಲ್ಲ. ಆದರೂ ಮಾಡುವುದೇನು! ನೀನು ಕೊಟ್ಟ ಶಾಪಕ್ಕೆ ಧರ್ಮದ ತಳಹದಿಯಿಲ್ಲವಾದುದರಿಂದ ಅದಕ್ಕೆ ನಾನು ಇಲ್ಲೇ ಪ್ರತಿಭಟಿಸಿ ಹೇಳುತ್ತಿದ್ದೇನೆ. ನನ್ನಲ್ಲಿ ಆ ವಿದ್ಯೆಯು ಫಲಿಸದಿದ್ದರೂ, ಅದನ್ನು ನಾನು ಯಾರಿಗೆ ಉಪದೇಶಿಸುವೆನೋ ಅವರಲ್ಲಿ ಫಲಿಸುವುದು. ಮತ್ತೇನೆಂದರೆ, ಬ್ರಹ್ಮಕುಲಕ್ಕೆ ಸ್ವಾಭಾವಿಕವಾಗಿರಬೇಕಾದ ಇಂದ್ರಿಯನಿಗ್ರಹಾದಿಗಳೂ, ಸ್ತ್ರೀ ಜನಕ್ಕೆ ಲಕ್ಷಣವಾದ ಲಜ್ಜೆಯೂ ಸಾತ್ವಿಕ ಕಾಮವೂ ನಿನ್ನಲ್ಲಿ ತೋರಿಬರದೆ, ರಾಜಸಸ್ವರೂಪದಿಂದ ಅವುಗಳನ್ನು ನೀನು ಪ್ರದರ್ಶಿಸಿದೆಯಾದುದರಿಂದ. ನಿನಗೆ ಬ್ರಾಹ್ಮಣಯುವಕನೊಂದಿಗೆ ವಿವಾಹವಾಗದೆ, ಕ್ಷತ್ರಿಯನೇ ನಿನಗೆ ವರನಾಗುವನು. ನೀನು ಒಬ್ಬ ಕ್ಷತ್ರಿಯನನ್ನೇ ವರಿಸಿ ವಿವಾಹವಾಗಲುಳ್ಳವಳು" ಎಂದು ಪ್ರತಿಶಾಪವನ್ನಿತ್ತು, ತನ್ನಿಚ್ಛೆಯಿಂದ ನಭೋಮಾರ್ಗದಲ್ಲಿ ಹೊರಟು ದೇವಲೋಕವನ್ನು ಸೇರಿದನು. ಅಲ್ಲಿ ದೇವತೆಗಳೆಲ್ಲರೂ, ಬಹು ಸಂಖ್ಯೆಯಿಂದ ನೆರೆದು, ತಮ್ಮ ಮೇಲ್ಮೆಗಾಗಿ ಅಸಹ್ಯ ದುಃಖಯಾತನೆಗಳನ್ನು ಸಹಿಸಿ ಅಮೌಲ್ಯ ವಿದ್ಯೆಯನ್ನು ಗಳಿಸಿ ತಂದ ಆತನನ್ನು ಬಹು ಬಗೆಯಿಂದ ಹೊಗಳಿ, ಬಹುಮಾನ ಮಾಡಿ ಆದರಿಸಿದರು. ದೇವಯಾನಿಯು, ಬಹುದಿನಗಳಿಂದ ನಿರೀಕ್ಷಿಸಿಕೊಂಡಿದ್ದ ತನ್ನ ಆಸೆಯು, ಕೇವಲ ಶಾಪ-ಪ್ರತಿಶಾಪಗಳಲ್ಲಿ ಪರ್ಯವಸಾನವಾದುದಕ್ಕಾಗಿ ಅತಿಶಯ ತಪಿಸಿ, ಕೆಲಕಾಲ ನಿರ್ವಿಣ್ಣಳಂತಿದ್ದಳು!

ಹೀಗೆ ಕೆಲದಿನಗಳು ಕಳೆದಿರಲು, ಮುಂದೊಂದುದಿನ, ಅಸುರಶ್ರೇಷ್ಠನಾದ ವೃಷಪರ್ವರಾಜನ ಮಗಳಾದ ಶರ್ಮಿಷ್ಠೆಯು, ತನ್ನ ಪ್ರಿಯಗೆಳತಿಯಾದ ದೇವಯಾನೆಯು ವ್ಯಸನಾಕ್ರಾಂತಳಾಗಿರುವಳೆಂದು ಕೇಳಿ, ತನ್ನ ಪರಿವಾರದೊಂದಿಗೆ, ಆಕೆಯ ಬಳಿಗೆ ಬಂದು, ಬಹು ಬಗೆಯಿಂದ ಆದರಿಸಿದಳು. ತರುವಾಯ ಆಕೆಯ ಮನರಂಜನೆಗಾಗಿ ಎಲ್ಲರೂ, ಜಲಕ್ರೀಡೆಗೆ ಹೋಗಬೇಕೆಂದು ಯೋಚನೆ ಬರಲು ಸಕಲರೂ ಹೊರಟು, ಕುಮುದ ಕಲ್ಹಾರಾದಿ ಜಲಪುಷ್ಪಗಳಿಂದ ಮನೋಹರವಾಗಿ, ಒಂದೇ ಸಮನಾದ ಸ್ಫಟಿಕ ಶಿಲೆಯ ಮೆಟ್ಟಿಲುಗಳಿಂದ ನೇತ್ರಾನಂದಕರವಾಗಿದ್ದ ದೈತ್ಯರಾಜನ ಉದ್ಯಾನದಲ್ಲಿದ್ದ ಒಂದು ಸರೋವರದ ಬಳಿಗೆ ಬಂದರು. ಅಲ್ಲಿ ಸಖಿಯರೆಲ್ಲರೂ ಸಹಕರಿಸುತ್ತಿರಲು ಶರ್ಮಿಷ್ಠೆಯೂ, ಆಕೆಯು ಉಪಚರಿಸುತ್ತಿರಲು ದೇವಯಾನೆಯೂ, ತಮ್ಮ ವಸ್ತ್ರಗಳನ್ನು ಕಳೆದು ಅಲ್ಲೇ ಮೆಟ್ಟಿಲುಗಳ ಮೇಲಿಟ್ಟು ವೈಯುಬ್ಬಿ ನೀರಿನಲ್ಲಿ ಬಿದ್ದು, ಭೂಲೋಕಕ್ಕೆ ಬಂದ ನಾಗಕನ್ಯೆಯರೋ ಎಂಬಂತೆ ವಿಹರಿಸತೊಡಗಿದರು. ಒಬ್ಬರ ಮೇಲೊಬ್ಬರು ನೀರನ್ನೆರೆಚುತ್ತ, ಬಗೆಬಗೆಯ ಗತಿಗಳನ್ನನುಸರಿಸಿ ಈಜುತ್ತ, ಕೈಗೆ ಸಿಕ್ಕ ಕಮಲ ಕಲ್ಹಾರ ಪುಷ್ಪಗಳನ್ನು ಕಿತ್ತು ಒಬ್ಬರ ಮೇಲೊಬ್ಬರು ಬಿಸುಡುತ್ತ ಹೀಗೆ ಬಹುಹೊತ್ತು ವಿನೋದದಿಂದ ಜಲಕ್ರೀಡೆಯಾಡಿದರು. ಅಷ್ಟರಲ್ಲಿ, ಆ ಮಾರ್ಗವಾಗಿ ಅಂತರಿಕ್ಷದಲ್ಲಿ ಪಾರ್ವತೀಪರಮೇಶ್ವರರು ವಿಮಾನಾರೂಢರಾಗಿ ಹೋಗುತ್ತಿದ್ದುದು ಕಾಣಿಸಿತು. ಒಡನೆ ಲಜ್ಜಾಭರಿತರಾದ ಆ ಯುವತಿಯರು, ಮುಂದೆ ವಸ್ತ್ರಹೀನರಾಗಿ ನೀರಲ್ಲಿರಲಾರದೆ ಮೇಲಕ್ಕೆದ್ದು ತಮ್ಮ ತಮ್ಮ ವಸ್ತ್ರಗಳನ್ನು ಧರಿಸಿಕೊಳ್ಳಲನುವಾದರು. ಆ ಗಲಭೆಯಲ್ಲಿ ಶರ್ಮಿಷ್ಠೆಯು, ದೇವಯಾನೆಯ ಸೀರೆಯು ಜಾಗ್ರತೆಯಾಗಿ ಕೈಗೆ ಸಿಕ್ಕಲು ಅದನ್ನೇ ತೆಗೆದುಕೊಂಡು ಉಟ್ಟುಕೊಂಡಳು. ಅದನ್ನು ಕಂಡ ದೇವಯಾನೆಯು ಒಡನೆ ಹುಬ್ಬುಗಂಟಿಕ್ಕಿ ತನ್ನ ಸಖಿಯರನ್ನು ಕುರಿತು,—“ನೋಡಿದಿರಾ, ಈ ಶರ್ಮಿಷ್ಠೆಯ ಕುಚೇಷ್ಠೆಯನ್ನು! ಕುಲಜ್ಯೇಷ್ಠೆಯೂ, ಗುರುಪುತ್ರಿಯೂ ಆದ ನನ್ನ ವಿಷಯದಲ್ಲಿ ಎಂತಹ ಹುಡುಗಾಟವನ್ನಾಚರಿಸಿದಳು. ನೋಡಿದಿರಾ! ಬ್ರಾಹ್ಮಣರ ವಸ್ತು ವಸ್ತ್ರಗಳನ್ನು ಯಾವ ಭಾವದಿಂದ ಕಾಣಬೇಕೆಂಬುವ ವಿಚಾರವೂ ಇವಳಿಗೆ ಬಾರದೆ, ಬೇಕೆಂದು ಈ ಸಂದರ್ಭದಲ್ಲಿ ವಿವಸ್ತ್ರಳಾಗಿ

ರುವ ನನ್ನನ್ನು ಅವಮಾನಗೊಳಿಸಬೇಕೆಂದು ಇವಳು ಮಾಡಿದ ಕುತ್ಸಿತ ಚರ್ಯೆಯನ್ನು ಕಂಡಿರಲ್ಲವೆ!' ಎಂದಳು. ಶರ್ಮಿಷ್ಠೆಯು ಅವಳ ಬಾಲ್ಯ ಸ್ನೇಹಿತಳೇ ಆಗಿದ್ದರೂ, ಅವಳ ವಿಷಯದಲ್ಲಿ ದೇವಯಾನೆಗಿದ್ದ ಪ್ರೀತಿಯು ಅಕೃತ್ರಿಮವಾದುದೇ ಆಗಿದ್ದರೂ ಆಗ ಕಾಲಪ್ರೇರಣೆಯಿಂದಲೋ ಎಂಬಂತೆ, ದೇವಯಾನೆಯ ಕೋಪವು ಗಳಿಗೆಗಳಿಗೆಗೆ ಏರುತ್ತಾ ಹೋಗಿ, ಅವಳು ಪುನಃ ತನ್ನಾ ಗೆಳತಿಯನ್ನು ನಿಂದಿಸತೊಡಗಿದಳು.—'ನಾನು ಮೊದಲಿನಿಂದಲೂ ನೋಡುತ್ತಲೇ ಇದ್ದೇನೆ. ಈ ಶರ್ಮಿಷ್ಠೆಗೆ ತಾನು ರಾಜನ ಮಗಳೆಂಬ ಅಹಂಕಾರವೊಂದು ನೆತ್ತಿಯಲ್ಲಿ ಹೊಕ್ಕಿದೆ! ಆದರೇನು. ಅವಳು ರಾಜನ ಮಗಳಾದರೇನು! ರಾಜರು ಬ್ರಾಹ್ಮಣರಾದ ನಮಗೆ ಶಿಷ್ಯವೃತ್ತಿಯಲ್ಲಿರತಕ್ಕವರಲ್ಲವೆ! ಆದುದರಿಂದ, ನನಗೆ ಗೌಡಿಯಾಗಿರಬೇಕಾದ ಇವಳಿಗೆ ನನ್ನೊಂದಿಗೆ ಇಂತಹ ಕುಚೇಷ್ಟೆಯು ಸಹಜವಾದುದಲ್ಲ. ಇನ್ನಾದರೂ ತಿಳಿದುಕೊಳ್ಳಲಿ! ಬ್ರಾಹ್ಮಣರು ಕುಲಜ್ಯೇಷ್ಠರೂ ಶ್ರೇಷ್ಠರೂ ಎಂಬುದನ್ನು! ಅವರನ್ನು ಎಷ್ಟೆಷ್ಟು ಮಟ್ಟಿಗೆ ಗೌರವಿಸಿ ಸೇವಿಸುತ್ತಿದ್ದರೆ, ಮಿಕ್ಕವರಿಗೆ ಅಷ್ಟಷ್ಟು ಮಟ್ಟಿನ ಸುಖಸೌಲಭ್ಯಗಳು ಲಭ್ಯವಾಗುವುವು ಎಂಬುದನ್ನು! ಹೀಗಿರುವಲ್ಲಿ ಇವಳು ಹೆಮ್ಮೆಯಿಂದ ಈ ದಿನ ಆಚರಿಸಿದ ಕೃತ್ಯವು ನನ್ನ ದೇಹರಕ್ತವನ್ನು ಕೋಪಶಿಖೆಯಿಂದ ಕಾಯಿಸಿ ಕುದಿಯಿಸಿದಂತೆ, ಬ್ರಾಹ್ಮಣರ ಶಾಂತವೃತ್ತಿಯನ್ನು ಪರಕೀಯರು ಎಂದು ತಮ್ಮ ಹೆಮ್ಮೆಯಿಂದ ತಳಮಳಗೊಳಿಸುವರೋ ಅಂದೇ ಲೋಕದಲ್ಲಿ ಅಶಾಂತಿಯೂ ಸಕಲವಿಧ ದುರ್ದೆಸೆಗಳೂ ತಲೆದೋರುವುವು'' ಎಂದು ನುಡಿದು, ಆ ಶರ್ಮಿಷ್ಠೆಯನ್ನು ದುರುದುರನೆ ನೋಡಿದಳು.

ದೇವಯಾನೆಯು ತಡೆಬಡೆಯಿಲ್ಲದೆ ನುಡಿಯುತ್ತಿದ್ದ ಮಾತುಗಳು ಆ ರಾಜಪುತ್ರಿಯ ಸಮಾಧಾನವನ್ನು ಹಾರಿಸಿದುವು. ವಿನೋದದಿಂದ ಜಲಕ್ರೀಡೆ ಯಾಡುತ್ತಿದ್ದು, ಆತುರದಿಂದ ಮೇಲಕ್ಕೆದ್ದು ಹೊರಟು, ಪ್ರಮಾದದಿಂದ ಆಕೆಯ ಬಟ್ಟೆಯನ್ನುಟ್ಟ ತನ್ನ ವಿಷಯದಲ್ಲಿ, ಪೂರ್ವ ಸ್ನೇಹವನ್ನಾಗಲೀ, ರಾಜಪುತ್ರಿಯೆಂಬ ಗೌರವವನ್ನಾಗಲೀ ವಹಿಸದೆ, ಅಷ್ಟು ಹೀನವಾಕ್ಯಗಳಿಂದ ನಿಂದಿಸಿದುದನ್ನು ಕಂಡು ಕೋಪಗೊಂಡಳು. ದೇಹವೆಲ್ಲವೂ ಕೋಪದಿಂದ ಶಾಖವಾಗಿ ರಕ್ತವು ಬಿಸಿಯಾಯಿತು. ತುಟಿಗಳನು

ಕಚ್ಚುತ್ತಾ, ಹಲ್ಲುಗಳನ್ನು ಕಡಿಯುತ್ತಾ, ಆ ದೈತ್ಯಪುತ್ರಿಯು, ಎಲ್ಲರೂ ಕೇಳುತ್ತಿರಲು ದೇವಯಾನೆಯನ್ನು ಕುರಿತು,—"ಎಲೇ ಭಿಕ್ಷುಕಿ, ಏನೆಂದು ಬೊಗಳುತ್ತಿರುವೆಯೇಂ! ದೈತ್ಯರಾಜಪುತ್ರಿಯಾದ ನಾನೆಲ್ಲಿ? - ಬಡಬ್ರಾಹ್ಮಣನ ಮಗಳಾದ ನೀನೆಲ್ಲಿ! ನನ್ನ ತಂದೆಯಾದ ವೃಕ್ಷಪರ್ವನು ಸಿಂಹಾಸನದಮೇಲೆ ಕುಳಿತಿದ್ದಾಗ, ಹೊಗಳುಭಟ್ಟನಂತೆ ಕೈ ಜೋಡಿಸಿ ಕೆಳಗೆ ನಿಂತಿರುವ ಬಡ ಹಾರುವನ ಮಗಳಾದ ಇವಳ ಹೆಮ್ಮೆಯ ಮಾತುಗಳನ್ನು ಕೇಳಿರೇ! ಮುಚ್ಚು-ಬಾಯಿಮುಚ್ಚು, ಎಲೇ, ಕಾಗೆಗಳಂತೆ ನಮ್ಮ ಮನೆಯ ಅನ್ನಕ್ಕೆ ಬಾಯ್ದೆರೆದುಕೊಂಡು ಬಿದ್ದಿರುವ ನಿನಗೆಷ್ಟು ಹರಟೆ! ತಾರತಮ್ಯವನ್ನರಿಯದೆ ಬೊಗಳುತ್ತಿರುವ ಇವಳೂ ಸರಿ-ತೃಣವೂ ಸರಿ; ಇವಳ ಕೋಪದಿಂದ ನನಗಾಗುವ ನಷ್ಟವೇನು?" ಎಂದು ನುಡಿದು, ಉಕ್ಕುತ್ತಿದ್ದ ಕೋಪವನ್ನು ತಡೆದುಕೊಳ್ಳಲಸಾಧ್ಯವಾಗಿ, ತನ್ನ ದಾಸಿಯರ ಸಹಾಯದಿಂದ ವಿವಸ್ತ್ರಳಾಗಿದ್ದ ಆ ಶುಕ್ರಪುತ್ರಿಯನ್ನು ತಳ್ಳಿಕೊಂಡುಹೋಗಿ, ಸಮೀಪದಲ್ಲೇ ಇದ್ದ ಒಂದು ಹಾಳುಭಾವಿಯಲ್ಲಿ ಎತ್ತಿಹಾಕಿ, ತನ್ನ ಮಿಕ್ಕ ಸಖಿಯರೊಂದಿಗೂ ದಾಸಿಯರೊಂದಿಗೂ ಹೊರಟು ಅರಮನೆಯನ್ನು ಸೇರಿದಳು.



## ಅಧ್ಯಾಯ ೫ "ಮಾನ ಹೋದ ಮೇಲೆ ಪ್ರಾಣದಿಂದೇನು?"

ಪೂರ್ವಯುಗಗಳಲ್ಲಿ ಭೂಮಂಡಲವನ್ನು ಪಾಲಿಸಿದ ಷಟ್ಚಕ್ರವರ್ತಿಗಳಂತೆಯೇ, ನಹುಷ ಮಹಾರಾಯನೂ ಸುಪ್ರಸಿದ್ಧನು. ಆತನು ನೂರು ಅಶ್ವಮೇಧ ಯಾಗಗಳನ್ನು ಮಾಡಿ, ಅವುಗಳ ಫಲಸ್ವರೂಪವಾಗಿ ದೇವೇಂದ್ರ ಪದವಿಯನ್ನು ಪಡೆದನು. ಮನುಷ್ಯನು ಪ್ರಯತ್ನ ಮಾಡಿದರೆ ಒಂದು ವೇಳೆ ಸಪ್ತಸಾಗರ ಸಮೇತವಾದ ಭೂಮಂಡಲವನ್ನೇ ಜಯಿಸಬಹುದಾದರೂ, ತನ್ನನ್ನು ತಾನು ಜಯಿಸಿಕೊಳ್ಳುವುದು ಅದಕ್ಕಿಂತಲೂ ಕಷ್ಟತರವಾದುದೆಂಬುದನ್ನು ನಹುಷನ ಚರಿತ್ರೆಯು ತಿಳಿಸುವುದು. ನಹುಷ ಚಕ್ರವರ್ತಿಯು ದೇವೇಂದ್ರ ಪದವಿಯನ್ನು ಜಯಿಸಿ ಗಳಿಸಿದನಾದರೂ, ಇಂದ್ರಿಯ ಗ್ರಾಮವೊಂದನ್ನು ಜಯಿಸಲು ಅಸಮರ್ಥನಾಗಿದ್ದುದರಿಂದ, ಅಂತಹ ಮಹತ್ಪದವಿ

ಯಿಂದಲೂ ಪತನ ಹೊಂದಿ, ನೆಲದ ಮೇಲೆ ಹರಿದಾಡುವ ತಿರ್ಯಗ್ಜಂತುವಿನ ಸ್ಥಿತಿಗೆ ಬಿದ್ದನು. ಇಂದ್ರಪತ್ನಿಯಾದ ಶಚೀದೇವಿಯನ್ನು ಕಾಮಿಸಿ. ಆ ತನ್ನ ಕಾಮಾಂಧತೆಯಲ್ಲಿ ಯುಕ್ತಾಯುಕ್ತ ವಿಚಾರವಿಹೀನನಾಗಿ, ಸಪ್ತರ್ಷಿಗಳೇ ತನ್ನ ಪಾಲಕಿಯನ್ನು ಹೊತ್ತು ಆಕೆಯ ಬಳಿಗೆ ತನ್ನನ್ನು ಕರೆದೊಯ್ಯಬೇಕೆಂದು ಆಜ್ಞಾಪಿಸಿದನು. ಮದಾಂಧತೆಯಿಂದ ಕೊಬ್ಬಿದ ದುರ್ಜನರು ಅಧಿಕಾರ ಪೀಠವನ್ನು ಏರಿದ್ದಾಗ ಸಾಧುಪ್ರಜೆಗಳು ಅವರ್ಣನೀಯ ದುಃಖ ಸಂಕಟಗಳ ಪಾಲಾಗುವುದರಲ್ಲಿ ಸಂದೇಹವೇನು ? ಆ ಕಾಮುಕನ ಆಜ್ಞೆಯನ್ನು ವಿಧಿಯಿಲ್ಲದೆ ಪಾಲಿಸಬೇಕಾಗಿ ಬಂದುದರಿಂದ, ಮಹಾಮಹಿಮಾಶಾಲಿಗಳಾದ ಆ ಏಳುಮಂದಿ ಮಹರ್ಷಿಗಳೂ-ಅಗಸ್ತ್ಯರೂ ಅವನು ಕುಳಿತ ಪಾಲಕಿಯನ್ನು ತಮ್ಮ ಭುಜಗಳಮೇಲೆ ಹೊತ್ತು ಒಯ್ಯತೊಡಗಿದರು. ವೃದ್ಧರೂ ದೇಹಶಕ್ತಿಹೀನರೂ ಆದ ಆ ಮಹರ್ಷಿಗಳು ನಡೆವುದರಲ್ಲಿ ಸ್ವಾಭಾವಿಕವಾಗಿಯೇ ಸಾವಕಾಶವಾಗುತ್ತಿತ್ತು. ಆ ನಿಧಾನವೂ ಕಾಮಜ್ವರಪೀಡಿತನಾದ ನಹುಷನಿಗೆ ಸಹನೆಯಾಗಲಿಲ್ಲ.—'ಸರ್ಪ-ಸರ್ಪ' ಎಂದರೆ 'ಜಾಗ್ರತೆ ಜಾಗ್ರತೆ ನಡೆಯಿರಿ' ಎಂದು ನುಡಿಯುತ್ತ ತನ್ನ ಕಾಲನ್ನು ಝಾಡಿಸಿದನು. ಆ ಪಾದವು ಅಗಸ್ತ್ಯಮಹರ್ಷಿಗಳಿಗೆ ತಗುಲಿತು. ಒಡನೆ ಆ ದುರ್ಮದಾಂಧನ ವಿಷಯದಲ್ಲಿ ಕೋಪವೂ ತಮ್ಮ ಸ್ಥಿತಿಯ ವಿಷಯದಲ್ಲಿ ಕ್ಲೇಶವೂ ಮಿತಿಮೀರಿದುದರಿಂದ, ಅವರು ಒಡನೆ – 'ಸರ್ಪೋಭವ' ಎಂದು ಶಪಿಸಿ, ಪಾಲಕಿಯನ್ನು ಎತ್ತಿಹಾಕಿ ಯಥೇಚ್ಛವಾಗಿ ಹೊರಟುಹೋದರು. ಹೀಗೆ ನಹುಷನು ಮಹೇಂದ್ರ ಪದವಿಯನ್ನು ಪಡೆದಿದ್ದರೂ ಕಾಮಾತಿರೇಕದಿಂದ ಮನುಷ್ಯತ್ವವನ್ನೂ ಕಳೆದುಕೊಂಡು, ಅಜಗರಸ್ವರೂಪಿಯಾಗಿ ನೆಲದಮೇಲೆ ಹರಿದುಹೋದನು !

ನಹುಷನು ಹೀಗೆ ನಷ್ಟವಾದ ತರುವಾಯ, ಆತನ ಮಕ್ಕಳಾದ ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯತಿ, ಕೃತಿ, ಎಂಬ ಆರು ಮಂದಿಯಲ್ಲಿ ಹಿರಿಯನಾದ ಯತಿ ಎಂಬುವನು, ರಾಜ್ಯಾಧಿಕಾರವು ತಮ್ಮ ತಂದೆಯ ವಿಷಯದಲ್ಲಿ ಉಂಟುಮಾಡಿದ ಅನರ್ಥವನ್ನು ಕಂಡು, ಮಹಾ ಪಾಪಕಾರಿಯಾದ ಈ ಅಧಿಕಾರ ಪದವಿಗಳಿಂದಲೇ ದೂರವಾಗಿರಬೇಕೆಂದೆಣಿಸಿ ವಿರಕ್ತನಾಗಿರಲು ನಿಶ್ಚಯಿಸಿದನು. ತರುವಾಯ ಯಯಾತಿಯು ತನ್ನ ಮಿಕ್ಕ ನಾಲ್ವರು

ತಮ್ಮಂದಿರಿಗೂ ರಾಜ್ಯದ ಕೆಲಕೆಲ ಭಾಗಗಳನ್ನು ಹಂಚಿಕೊಟ್ಟು, ತಾನು ತಂದೆಯ ಸಿಂಹಾಸನವನ್ನೇರಿ ರಾಜ್ಯಭಾರಮಾಡಿಕೊಂಡಿದ್ದನು. ಹೀಗಿರುವಲ್ಲಿ ಒಂದುದಿನ ಆತನು ಬೇಟೆಗೆಂದು ಹೊರಟು ಕಾಡಿನಲ್ಲಿ ಸಂಚರಿಸುತ್ತಿರುವಲ್ಲಿ, ರಥದ ಕುದುರೆಗಳು ಬಾಯಾರಿಕೆಯಿಂದ ತಲ್ಲಣಿಸುತ್ತಿರುವುದನ್ನು ಕಂಡು, ಸಮೀಪದಲ್ಲೆಲ್ಲಾದರೂ ನೀರು ಸಿಕ್ಕಬಹುದೋ ಎಂದು ಹುಡುಕುತ್ತಾ ಏಕಾಂಗಿಯಾಗಿ ಬರುತ್ತಿರಲು ಮಾರ್ಗದಲ್ಲಿ ಅಕಸ್ಮಾತ್ತಾಗಿ ದೇವಯಾನೆಯು ತಳ್ಳಲ್ಪಟ್ಟಿದ್ದ ಹಾಳುಭಾವಿಯು ದೃಷ್ಟಿಗೋಚರವಾಯಿತು.

ಬಾವಿಯಲ್ಲಿ ನೀರಿದೆಯೋ ಎಂದು ಬಗ್ಗಿನೋಡಿದ ರಾಜನು ದಿವ್ಯಲಾವಣ್ಯವತಿಯೂ, ನವಯೌವ್ವನವತಿಯೂ ಆದ ದೇವಯಾನೆಯನ್ನು ಕಂಡು, ಪರಮಾಶ್ಚರ್ಯಪಟ್ಟು,—'ಎಲೌ ಲತಾಂಗಿಯೇ, ನೀನಾರು ! ಹಂಸತೂಲಿಕಾತಲ್ಪದಲ್ಲಿ ಕುಳಿತು ದಾಸದಾಸಿಯರಿಂದ ಸೇವೆಗೊಳ್ಳಲರ್ಹಳಾದ ನಿನಗೆ ಯೋಚಿಸಲೂ ಅಶಕ್ಯವಾದ ಇಂತಹ ದುರ್ಗತಿ ಬರಲು ಕಾರಣವೇನು ! ನಿನಗೆ ಯಾರು ಈ ದುಸ್ಥಿತಿಯನ್ನುಂಟುಮಾಡಿದವರು!'' ಎಂದು ಪ್ರಶ್ನಿಸಿದನು. ಆ ಮಾತನ್ನು ಕೇಳಿದ ಆ ಭಾರ್ಗವಪುತ್ರಿಯು, ನವಚೇತನ ಬಂದಂತಾಗಲು ತಲೆಯೆತ್ತಿ ಮೇಲೆನೋಡಿ,—'ನನಗೆ ಉಟ್ಟುಕೊಳ್ಳಲು ಒಂದು ವಸ್ತ್ರವನ್ನು ಕೊಟ್ಟರೆ ಹೊರಕ್ಕೆ ಬಂದು ನನ್ನ ವಿಚಾರವನ್ನೆಲ್ಲಾ ತಿಳಿಸುತ್ತೇನೆ'' ಎಂದಳು. ಯಯಾತಿಯು, ಆ ಯುವತಿಗೆ ಪ್ರಾಪ್ತವಾದ ಸ್ಥಿತಿಗಾಗಿ ಅತಿಶಯ ಕನಿಕರಪಟ್ಟು, ತನ್ನ ಉತ್ತರೀಯವನ್ನೇ ಕೆಳಕ್ಕೆ ಎಸೆದನು. ತರುವಾಯ ಆಕೆಯು ತನ್ನ ದಕ್ಷಿಣ ಹಸ್ತವನ್ನು ನೀಡಲು, ಯಯಾತಿರಾಜನು ಆ ಶುಭಹಸ್ತವನ್ನು ಹಿಡಿದು ಮೇಲಕ್ಕೆತ್ತಿಕೊಂಡನು. ಹೀಗೆ ಮಹದಾಪತ್ತಿನಿಂದ ವಿಮುಕ್ತಳಾಗಿ ಮೇಲೆ ನಿಂತ ದೇವಯಾನೆಯು ಆ ಕ್ಷತ್ರಿಯೋತ್ತಮನ ರೂಪನ್ನೂ ಯೌವನವನ್ನೂ, ಆಜಾನುಬಾಹು ದಿವ್ಯವಿಗ್ರಹವನ್ನೂ ಕಂಡು ಪರಮಾನಂದಪಟ್ಟು—'ಓ ವೀರಾ ದೈತ್ಯರಾಜನ ಮಗಳೂ ನನ್ನ ಜತೆಗಾತಿಯೂ ಆದ ಶರ್ಮಿಷ್ಠೆಯಿಂದ ನನಗೆ ಈ ದುರ್ಗತಿಯು ಪ್ರಾಪ್ತವಾವಾಯಿತು. ಅದು ಅಂತಿರಲಿ. ಈಗ ನೀನು ನನ್ನ ದಕ್ಷಿಣ ಹಸ್ತವನ್ನು ಹಿಡಿದು ಮರಣೋನ್ಮುಖಳಾಗಿದ್ದ ನನ್ನನ್ನು ಉದ್ಧರಿಸಿದೆಯಾದುದರಿಂದ ನೀನೇ ನನ್ನನ್ನು ವಿವಾಹವಾಗಿಯೂ ರಕ್ಷಿಸಬೇಕು' ಎಂದಳು. ಯಯಾತಿಯು

ಶುಕ್ರಪುತ್ರಿಯು ಆ ಮಾತನ್ನು ಕೇಳಿ ಅತ್ಯಂತ ಕೌತುಕಪಟ್ಟು, —'ಎಲೌ ನೀನು ಬ್ರಾಹ್ಮಣಕನ್ಯೆಯು ನಾನು ಕ್ಷತ್ರಿಯನು. ನೀವು ನನಗೆ ಪೂಜಾ ಯೋಗ್ಯರಲ್ಲದೆ, ಭೋಗಯೋಗ್ಯರಲ್ಲ! ಇಂತಹ ಅನ್ಯಾಯ ಮಾರ್ಗಕ್ಕೆ ನನ್ನ ಮನಸ್ಸು ಎಂದಿಗೂ ಪ್ರವೇಶಿಸದು' ಎಂದು ನುಡಿದನು. ಆಗ ಆಕೆಯು 'ರಾಜಾ ಆ ವಿಷಯದಲ್ಲಿ ನೀನು ಯೋಚಿಸಬೇಕಾದುದಿಲ್ಲ. ಬೃಹಸ್ಪತಿ ಪುತ್ರನಾದ ಕಚನು ನನಗೆ ಬ್ರಾಹ್ಮಣ ವರನೊಂದಿಗೆ ವಿವಾಹವಾಗಕೂಡ ದೆಂದೂ, ಕ್ಷತ್ರಿಯನೇ ನನಗೆ ವರನಾಗಬೇಕೆಂದೂ ಶಾಪವನ್ನು ಕೊಟ್ಟಿ ದ್ದಾನೆ. ಅದರಲ್ಲೂ ನನ್ನ ಹಸ್ತವು ಪ್ರಾರಂಭಕ್ಕೆ ನಿನ್ನಿಂದಲೇ ಹಿಡಿಯ ಲ್ಪಟ್ಟಿತಾದ್ದರಿಂದ, ಅದನ್ನು ಪುನಃ ಮತ್ತೊಬ್ಬನು ಗ್ರಹಣಮಾಡತಕ್ಕದು ಯೋಗ್ಯವಲ್ಲ. ಹೀಗೆ ನಮ್ಮ ದಾಂಪತ್ಯವು ದೈವಕೃತವಾಗಿ ಏರ್ಪಟ್ಟುದೇ ಆದುದರಿಂದ ಈ ವಿಚಾರದಲ್ಲಿ ಸಂದೇಹಗೊಳ್ಳದೆ ನನ್ನನ್ನು ಪತ್ನಿಯನ್ನಾಗಿ ಸ್ವೀಕರಿಸು" ಎಂದಳು. ಯಯಾತಿರಾಜನು ಕ್ಷತ್ರಿಯನಾದ ತನಗೆ ಬ್ರಾಹ್ಮಣ ಕುವರಿಯಾದ ಅವಳಲ್ಲಿ ವಿವಾಹವು ಶಾಸ್ತ್ರವಿರುದ್ಧವಾದುದಾದರೂ ಆಕಸ್ಮಿಕವಾಗಿ ಉಂಟಾದ ಘಟನೆಗಳಿಂದಲೂ, ತನಗೆ ಆಕೆಯಲ್ಲಿ ಅನು ರಾಗವುಂಟಾದುದರಿಂದಲೂ, ದೇವೇಚ್ಛೆಯಿದ್ದಂತಾಗಲೆಂದು ಆಕೆಯ ಮಾತಿಗೆ ಸಮ್ಮತಿಸಿ, ಆದರೂ ಶುಕ್ರಾಚಾರ್ಯರು ಏನೆನ್ನುವರೋ ಎಂದು ಭಯಪಟ್ಟುಕೊಂಡೇ ಆಕೆಯ ಅನುಮತಿಯನ್ನು ಪಡೆದು ಹೊರಟು ಹೋದನು. ದೇವಯಾನಿಯು ಮಾನರಕ್ಷಣೆಗಾಗಿ ಕೊಟ್ಟ ರಾಜನ ಉತ್ತರೀಯವೊಂದನ್ನು ಸುತ್ತಿಕೊಂಡು, ಅದೇ ಬಾವಿಯ ದಡದ ಮೇಲೆಯೇ ಕುಳಿತುಕೊಂಡಿದ್ದಳು.

ಇತ್ತ ಶುಕ್ರಾಚಾರ್ಯರು ತಮ್ಮ ಮಗಳು ಜಲಕೇಳಿಗೆಂದು ಹೋಗಿ ಬಹಳ ಹೊತ್ತಾದರೂ ಬಾರದಿದ್ದುದರಿದದ ಏನಪಾಯವುಂಟಾಯಿತೋ ಎಂದು ಗಾಬರಿಗೊಂಡು, ಅವಳನ್ನು ಹುಡುಕಿಕೊಂಡು ಬರಲು, ಅವಳ ದಾಸಿಯೊಬ್ಬಳನ್ನು ಕಳುಹಿಸಿದಳು. ದಾಸಿಯು ಅಲ್ಲಲ್ಲಿ ಹುಡುಕುತ್ತ, ಊರ ಹೊರಗಿನ ಉದ್ಯಾನದ ಹೊರಗಿದ್ದ ಹಾಳುಬಾವಿಯ ದಡದಲ್ಲಿ, ಪಂಚೆಯೊಂ ದನ್ನುಟ್ಟು ರೋದಿಸುತ್ತಾ ಕುಳಿತಿದ್ದ ತನ್ನ ಒಡೆತಿಯನ್ನು ಕಂಡು, ಬಹು ಗಾಬರಿಯಿಂದ ಹತ್ತಿರಕ್ಕೆ ಓಡಿಬಂದು ಆ ಸ್ಥಿತಿಗೆ ಕಾರಣವನ್ನು ಕೇಳಿ

ಆಚಾರ್ಯರು ಬಹು ವ್ಯಸನಾಕ್ರಾಂತರಾಗಿರುವುದರಿಂದ ಕೂಡಲೇ ಆಶ್ರಮಕ್ಕೆ ಹೊರಡೆಂದು ಒತ್ತಾಯ ಪಡಿಸಿದಳು. ಆದರೆ ದೇವಯಾನಿಯು, ಶರ್ಮಿಷ್ಠೆಯಿಂದ ತನಗೆ ಆ ದುರ್ಗತಿಯು ಪ್ರಾಪ್ತವಾಯಿತೆಂದೂ, ತಾನು ಪ್ರಾಣವಿರುವವರೆಗೂ ಇನ್ನು ವೃಷಪರ್ವನ ನಗರದಲ್ಲಿ ಕಾಲಿಡಲಾರೆನೆಂದೂ ಹೇಳಿ, ತಮ್ಮ ತಂದೆಯನ್ನೇ ಅಲ್ಲಿಗೆ ಬರಹೇಳೆಂದು ದಾಸಿಯನ್ನು ಕಳುಹಿಸಿದಳು.

ತಮ್ಮ ಏಕಮಾತ್ರ ಪ್ರೇಮಪುತ್ರಿಗೆ ಪ್ರಾಪ್ತವಾದ ಅನಿರೀಕ್ಷಣೀಯ ದುಸ್ಥಿತಿಯು ದೈತ್ಯಗುರುವಾದ ಅವರಿಗೆ ಅತಿಶಯ ಸಂತಾಪವನ್ನುಂಟು ಮಾಡಿತಾದರೂ ಒಡನೆ ತಮ್ಮ ಮಗಳನ್ನು ನೋಡಬೇಕೆಂಬ ಆತುರವು ಅಧಿಕವಾಗಲು, ಶುಕ್ರಾಚಾರ್ಯರು ಓಡುತ್ತೋಡುತ್ತ ದಾಸಿಯೊಂದಿಗೆ ಆ ಭಾವಿಯ ಬಳಿಗೆ ಬಂದರು. ದೇವಯಾನಿಯು ತನಗೂ ಶರ್ಮಿಷ್ಠೆಗೂ ನಡೆದ ಮಾತುಕಥೆಗಳನ್ನೂ, ತನ್ನ ಮಾತಿಗೆ ಪ್ರತೀಕಾರವಾಗಿ ಆಕೆಯು ತನ್ನನ್ನು ನಿರ್ವಾಣಸ್ಥಿತಿಯಲ್ಲಿ ಬಾವಿಗೆ ತಳ್ಳಿ ಹೊರಟು ಹೋದುದನ್ನೂ ತಿಳಿಸಿ, ಕಂಬನಿಯು ಸಾರೋದ್ಧಾರವಾಗಿ ಸುರಿಯುತ್ತಿರಲು, ಎಳೆ ಮಗು ಏನಂತ್ಹೆ ಹೋ ಎಂದು ಅಳತೊಡಗಿದಳು. ತಾನು ಸ್ತುತಿಪಾಠಕನೆಂದೂ, ರಾಜಸಿಂಹಾಸನದ ಕೆಳಗೆ ನಿಂತು ಓಲೈಸುವ ಪರದೇಶಿ ಕ್ಷುದ್ರಹಾರುವನೆಂದೂ ಬೈದ ಆ ರಾಜಪುತ್ರಿಯ ಮಾತುಗಳು ಆತನ ಹೃದಯವನ್ನು ಕೊರೆಯತೊಡಗಿದವು. ಅದಕ್ಕೆ ಏನಾದರೂ ಪ್ರತೀಕಾರ ಮಾಡಬೇಕೆಂಬ ಯೋಚನೆಯು ಮೇಲೆ ಮೇಲೆ ಮನಸ್ಸಿನಲ್ಲಿ ತೋರತೊಡಗಿತು. ಆದರೂ ಪ್ರಾಜ್ಞನಾದ ಆತನು, ಹೆಣ್ಣುಮಕ್ಕಳ ವ್ಯಾಜ್ಯದ ಆ ಮಾತನ್ನೇ ಪ್ರಧಾನಮಾಡಿಕೊಂಡು, ರಾಜ್ಯಕ್ಕೆ ಕೇಡೆಣಿಸುವುದು ತಕ್ಕದಲ್ಲವೆಂದು ಯೋಚಿಸಿಕೊಂಡು ಮಗಳನ್ನು ಕುರಿತು-'ಪುತ್ರೀ ಸಮಾಧಾನಳಾಗು. ಶರ್ಮಿಷ್ಠೆಯು ಏನೂ ತಿಳಿಯದ ಹುಡುಗಿ. ಕೇವಲ ರಾಜವೈಭವದಲ್ಲಿ ಅರಮನೆಯಲ್ಲಿ ಬೆಳದ ಅವಳಿಗೆ ಪ್ರಪಂಚ ವಿಚಾರದಲ್ಲಿ ಏನು ತಿಳಿದಿದೆ! ಅವಳು ಭಿಕ್ಷುಕನೆಂದರೆ ನಾನು ಭಿಕ್ಷುಕನಲ್ಲ - ಅವಳು ಐಶ್ವರ್ಯವಂತನೆಂದರೆ ನಮಗೆ ಐಶ್ವರ್ಯ ಬರಲಿಲ್ಲ. ಬ್ರಾಹ್ಮಣರು ತನ್ನ ಧರ್ಮರಕ್ಷಣೆಯಲ್ಲಿ ನಿರತನಾಗಿರುವವರೆಗೂ ಯಾರಿಗೂ ಎಂದೂ ತಲೆ ತಗ್ಗಿಸಬೇಕಾದುದಿಲ್ಲ. ಹಾಗೆಯೇ, ಅವಳ ತಂದೆಗೆ ನಾನು ವಿಧೇಯಸೇವಕನಾಗಿರುವುದಂತಿರಲಿ! ಅವಳ ತಂದೆ ಮಾತ್ರವಲ್ಲ-ಅಶೇಷ

ದೈತ್ಯಕುಲವೂ ನಿನ್ನ ತಂದೆಯ ಪಾದಾಕ್ರಾಂತವಾಗಿದೆಯೆಂದು ತಿಳಿ. ಕೋಪವು ಮಹದನರ್ಥಗಳನ್ನುಂಟುಮಾಡುವುದು. ಕೋಪವನ್ನು ಬಿಡು. ಬಾ ಆಶ್ರಮಕ್ಕೆ ಹೋಗೋಣ!" ಎಂದು ಎಷ್ಟೋ ಬಗೆಯಿಂದ ಸಮಾಧಾನ ಹೇಳಿದರು.

ಆದರೆ ಅಂತಹ ಅಪಮಾನಕರವಾದ ಮಾತುಗಳನ್ನು ಕೇಳಿಯೂ ಸಹಿಸಿಕೊಂಡು, ಲಜ್ಜೆಯಿಲ್ಲದೆ ಮೂಗುಕೋದವಳಂತಿರುವುದು, ಪರ್ಶಿಕೆಯ ರಕ್ತದ ಆಯುವತಿ ದೇವಯಾನಿಗೆ ಸರಿದೋರಲಿಲ್ಲ. ಅಂತಹ ಅಪಮಾನವನ್ನು ಸಹಿಸಿಕೊಂಡು, ಮುಂದೆ ಬದುಕಿರುವುದಕ್ಕಿಂತಲೂ, ಪ್ರಾಣತ್ಯಾಗ ಮಾಡಿಕೊಳ್ಳುವುದೇ ಲೇಸೆನ್ನಿಸಿತು. ಆಗಲಾಕೆಯು ಸಂತಾಪಾಧಿಕ್ಯದಿಂದ ದೇಹದ ರಕ್ತವು ಬಿಸಿಯಾಗಲು, ಕತ್ತಿನನರಗಳು ಉಬ್ಬಿ ಮಾತು ತೊದಲುತ್ತಿರಲು, ಕಣ್ಣುಗಳಿಂದ ಸಾರೋದ್ಧಾರವಾಗಿ ನೀರು ಸುರಿಯುತ್ತಿರಲು, ತಂದೆಯನ್ನು ಕುರಿತು — 'ಜನಕಾ, ಕೊಡಲಿಯನ್ನು ಹಿಡಿದು ಕತ್ತರಿಸಿದ ವನವು ಪುನಃ ಚಿಗುರಬಲ್ಲದು. ಹರಿತವಾದ ಕತ್ತಿಯನ್ನು ಹಿಡಿದು ಮಾಡಿದ ದೇಹದ ಗಾಯವು ವಾಸಿಯಾಗಿ ಮೊದಲಿನಂತಾಗಬಹುದು. ಆದರೆ ಮನುಷ್ಯನ ನಾಲಿಗೆಯೆಂಬ ಧನುಸ್ಸಿನಿಂದ ಹೊರಟ ಮಾತುಗಳೆಂಬ ಕ್ರೂರವಾದ ಬಾಣಗಳು ಮನಸ್ಸಿನಲ್ಲಿ ಉಂಟುಮಾಡುವ ಗಾಯಗಳು ಮಾತ್ರ ಎಂದಿಗೂ ವಾಸಿಯಾಗಲಾರವು. ಗರ್ವೋದ್ಧತಳಾಗಿ ಅವಳು ನನಗೆ ಆಡಿದ ಅಪಮಾನಕರವಾದ ಮಾತುಗಳಿಗೆ ತಕ್ಕ ಪ್ರತೀಕಾರವಾಗದಿದ್ದರೆ, ನಾನು ಅವಳ ತಂದೆಯಿಂದ ಆಳಲ್ಪಡುತ್ತಿರುವ ಈ ಪಟ್ಟಣದೊಳಕ್ಕೆ ಕಾಲನ್ನಿಡಲಾರೆನು.-ಆಹಾರವನ್ನೂ ಗ್ರಹಣಮಾಡಲಾರೆನು. ಈ ತುಚ್ಛ ಶರೀರವನ್ನು ಹೀಗೆಯೇ ವಿಸರ್ಜಿಸುತ್ತೇನೆ. ಸರೀಕರೆದುರಿಗೆ ಮಾನ ಹೋದಮೇಲೆ ಇನ್ನು ಈ ತುಚ್ಛ ಪ್ರಾಣದಿಂದತಾನೇ ಪ್ರಯೋಜನವೇನು? ನೀನು ದೈತ್ಯೇಶ್ವರನಾದ ಈ ವೃಷಪರ್ವನನ್ನೇ ಓಲಗಿಸಿಕೊಂಡು ಸಮಾಧಾನದಿಂದ ಆತನ ಸಭಾಭೂಷಣನಾಗಿ ಇರಬಹುದು." ಎಂದು ನುಡಿದು ಆತನ ಕಡೆಗೆ ಬೆನ್ನುತಿರುಗಿಸಿಕೊಂಡು ಕುಳಿತುಬಿಟ್ಟಳು.



ಅಧ್ಯಾಯ ೬ "ವಿವಾಹ"

ಮಾನಹಾನಿಯನ್ನು ಸಹಿಸಲಾರದೆ ಪ್ರಾಣ ಬಿಡಲು ಸಿದ್ಧಳಾದ ತಮ್ಮ ಮಗಳಿಗೆ, ಪ್ರಾಪ್ತವಾದ ಅಪಮಾನದ ಪರಮಾವಧಿಯು ಎಷ್ಟೆಂಬುದು ಆಗ ಆಚಾರ್ಯರಿಗೆ ತಿಳಿಯಿತು. ಒಡನೆ ದೈತ್ಯಕುಮರಿಯಾಡಿದ ಅಹಂಕಾರದ ಮಾತುಗಳು ಚಾಟಿಯಿಂದ ಹೊಡೆದಂತೆ, ಚೂರಿಯಿಂದ ತಿವಿದಂತೆ ಅವರನ್ನು ನೋಯಿಸಿದುವು. ಆಂತಹ ದುರ್ಮದಾಂಧರಿಗೆ ಸಹಾಯಕರಾಗಿರುವುದು ಸಹ ಪಾಪಸಾಧನವೆಂದು ಅವರಿಗೆ ತೋರಸಾಗಿತು. ಅವಳ ಅಹಂಕಾರಕ್ಕೆ ಹೇಗೆ ಪ್ರತೀಕಾರಮಾಡಿ, ತಮ್ಮ ಪ್ರಿಯಕುಮರಿಯ ಮನೋರಂಜನೆ ಮಾಡಬಹುದೆಂದು ಸ್ವಲ್ಪಹೊತ್ತು ಯೋಚಿಸಿ, ಒಡನೆ ಮಾಡಬೇಕಾದ ಕಾರ್ಯವನ್ನು ನಿರ್ಧರಿಸಿ, ತಮ್ಮ ಮಗಳನ್ನು ಕುರಿತು — 'ಪುತ್ರೀ, ದೇವಯಾನೀ ಏಳು. ನನ್ನ ಪ್ರಾಣಾಧಿಕಳಾದ ನಿನ್ನ ಮನಸ್ಸನ್ನು ನೋಯಿಸಿದವರೊಂದಿಗೆ ನನಗೆ ಸಹಕಾರವೆಂದರೇನು! ಅವರೊಂದಿಗೆ ನಾನು ಸಮಾಧಾನದಿಂದಿರುವುದೆಂದರೇನು? ಏಳು. ಹೋಗೋಣ. ಬ್ರಾಹ್ಮಣರು ತಪೋಧನರೆಂಬುದನ್ನು ಅರಿಯೆಯಾ! ಅವರಿಗೆ ಅನುಪಮಮೌಲ್ಯವಾದ ತಪಸ್ಸಲ್ಲದೆ, ಈ ಸ್ಥೂಲಧನವು ಧನವಲ್ಲ. ಅವರು ಅದಕ್ಕಾಗಿ ಲಕ್ಷ್ಯಕೊಡುವುದಿಲ್ಲ. ನಾನೂ ಅಂತಹ ಇವರ ಧನಕನಕಗಳಿಗೆ ಲುಬ್ಧನಾಗಿ ಇಲ್ಲಿ ನಿಂತಿದ್ದೇನೆಂದು ತಿಳಿದೆಯಾ! ಏಳು. ನನ್ನ ಗುಣವನ್ನು ಅರಿಯೆಯಾ? ಚಿಂತಿಸಬೇಡ. ಏಳು ಕರ್ಮಕ್ಕೆ ತಕ್ಕ ಫಲಾನುಭವವು ಎಂದಿಗೂ ಯಾರಿಗೂ ಏನಾದರೂ ತಪ್ಪದು" ಎಂದು ನುಡಿದು, ಕೇವಲ ಒಂದು ಉತ್ತರೀಯವನ್ನು ಮಾತ್ರ ಉಟ್ಟುಕೊಂಡಿದ್ದ ಆಕೆಯೊಂದಿಗೆ ಹೊರಟು, ತರುವಾಯ ಇಬ್ಬರೂ ದೇವಲೋಕಾಭಿಮುಖವಾಗಿ ಪ್ರಯಾಣ ಮಾಡತೊಡಗಿದರು.

ಅಷ್ಟರಷ್ಟರಲ್ಲಿ ಈ ವಾರ್ತೆಯು ದೈತ್ಯರಾಜ ವೃಷಪರ್ವನಲ್ಲಿಗೆ ಹೋಯಿತು. ದೈತ್ಯ ಕುಲಸಂರಕ್ಷಕರಾದ ಆಚಾರ್ಯರು, ಶತ್ರುಪಾಳಯಕ್ಕೆ ಹೊರಟುದನ್ನು ಕೇಳಿ, ಅವನು ಗಡಗಡನೆಂದು ನಡುಗಿಹೋದನು. ಒಡನೆ ಕ್ಷಣಮಾತ್ರವೂ ಸಾವಕಾಶವಿಲ್ಲದೆ, ಪತ್ನಿಯೊಂದಿಗೆ ಪೂಜಾದ್ರವ್ಯಗಳನ್ನು ತೆಗೆಸಿಕೊಂಡು ಊರು ಬಿಟ್ಟು ಸ್ವಲ್ಪ ದೂರ ನಡೆದಿದ್ದ ಆಚಾರ್ಯರ ಎದುರಿಗೆ ಹೋಗಿ-ಅಡ್ಡಗಟ್ಟಿ ನಿಂತು, ವಿಧ್ಯುಕ್ತವಾಗಿ ಅರ್ಘ್ಯಪಾದ್ಯಾದಿಗಳನ್ನು

ನಡೆಯಿಸಿ, —“ತೀರ್ಥರೂಪಸದೃಶರಾದ ಆಚಾರ್ಯರೇ! ಈ ದೀನನನ್ನು ಅನಾಥನನ್ನಾಗಿ ಇಲ್ಲಿ ಬಿಟ್ಟು ಎಲ್ಲಿಗೆಂದು ಪ್ರಯಾಣ ಹೊರಟಿರಿ!! ಇದೇನಿದು ಅನಾಹುತವು? ಮಹಾಮಹಿಮರೂ, ಶಾಪಾನುಗ್ರಹಶಕ್ತಿಸಂಪನ್ನರೂ ಆದ ತಾವು ಹೀಗೆ ಉಟ್ಟ ಬಟ್ಟೆಯಿಂದ ಹೊರಡುವುದೆಂದರ ಇದಕ್ಕರ್ಥವೇನು! ಆಜ್ಞಾಧಾರಕನಾದ ನಾನಿರುವಾಗ ನನಗೆ ತಿಳಿಸಿದರೆ ಅಸಮಾಧಾನಕ್ಕೆ ಕಾರಣವನ್ನು ವಿಚಾರಿಸಿ ತಮ್ಮ ಮನೋಭೀಷ್ಟವನ್ನು ನೆರವೇರಿಸಲಾರೆನೇ! ಇದು ಸತ್ಯವು” ಎಂದು, ನಡುವನ್ನು ಕಟ್ಟಿಕೊಂಡು, ಅಂಜಲೀಬದ್ಧನಾಗಿ ಪ್ರಾರ್ಥಿಸಿದನು. ದೈತ್ಯಕುಲ ಸಾರ್ವಭೌಮನಾದ ಆತನು ಹಾಗೆ ಅಂಗಲಾಚಿಕೊಳ್ಳುತ್ತಿರುವುದನ್ನು ಕಂಡು, ಆಚಾರ್ಯರು ತಮ್ಮ ಕೆಲಸಕ್ಕೆ ಕಾರಣವನ್ನು ಹೇಳಲೆಳಸಿ ಇಂತೆಂದರು.

“ವೃಷಪರ್ವಾ, ಲೋಕದಲ್ಲಿ ಕತ್ತಿಯಿಂದ ಕಡಿದ ಗಾಯವು ಮಾಯುವುದು, ಆದರೆ ಮರ್ಮಭೇದಕಗಳಾದ ಮಾತುಗಳೆಂಬ ಶಸ್ತ್ರಗಳಿಂದ ಮನಸ್ಸಿನಲ್ಲಾದ ಗಾಯುಗಳು ಮಾತ್ರ ಎಂದಿಗೂ ಮಾಯುವ. ನಿನ್ನ ಮಗಳು ಶರ್ಮಿಷ್ಠೆಯು, ತನ್ನ ಗೆಳತಿಯೇ ಆದ ಈಕೆಯನ್ನು ತಿರಿದುಂಬ ಬಡಹಾರುವನ ಮಗಳೆಂದೂ, ರಾಜನಾದ ನಿನ್ನ ಸಭೆಯಲ್ಲಿ ಆಜ್ಞಾಧಾರಕನಾಗಿ ಕೈಕಟ್ಟಿಕೊಂಡು ನಿಂತಿರುವ ಬಡಬ್ರಾಹ್ಮಣನ ಮಗಳಾದ ಭಿಕ್ಷುಕಿಯೆಂದೂ ಹೀಗೆ ಮನಸ್ಸಿಗೆ ಬೈದು, ನಿರ್ವಾಣವಾಗಿ ಹಾಳು ಭಾವಿಯಲ್ಲಿ ನೂಕಿ ಹೊರಟು ಹೋದಳಂತೆ! ಆ ಅಪಮಾನದಿಂದ ಮನನೊಂದಿರುವ ಈಕೆಯು ನಿನ್ನೀ ರಾಜ್ಯದೊಳಕ್ಕೆ ಕಾಲಿಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾಳೆ. ಚಿಂತಾಗ್ನಿಯಿಂದ ಬೆಂದುಹೋಗಿರುವ ಈಕೆಯ ಅಂತಃಕರಣವನ್ನು, ನನ್ನ ಸೌಮ್ಯವಾಕ್ಯಗಳು ಶಮನಗೊಳಿಸಲಾರದೆ ಹೋದುವು. ಪ್ರಾಣಸದೃಶಳಾದ ಈ ನನ್ನ ಕುವರಿಯನ್ನು ಈಗಲ ನಾನಿರಲಾರೆನು. ಇದು ನಿಶ್ಚಯ. ಇನ್ನು ಹೆಚ್ಚು ಮಾತುಕಥೆಗಳಿಂದ ಫಲವೇನು! ನಾನು ನಿನ್ನೀ ರಾಜ್ಯದಲ್ಲಿರಬೇಕೆಂಬುದು ನಿನ್ನ ಇಷ್ಟವಾಗಿದ್ದರೆ, ಇಗೋ ಈಕೆಯ ಅಭೀಷ್ಟವೇನೋ ಅದನ್ನು ನೆರವೇರಿಸು. ಅದು ಅಸಾಧ್ಯವಾದಲ್ಲಿ, ಮುಂದೆ ದೈತ್ಯಕುಲಕ್ಕೂ ನನಗೂ ಯಾವ ಬಗೆಯ ಸ್ನೇಹ ಸಹಕಾರ ಸಹಾನುಭೂತಿಗಳೂ ಇರಲಾರವೆಂದು ತಿಳಿ” ಎಂದು ನುಡಿದರು.

ವೃಷಪರ್ವನು, ತನ್ನ ಒಬ್ಬಳೇ ಮಗಳ ಅದೃಷ್ಟ ಪಕ್ಷಿಯು ಕತ್ತು, ಕೋಪಾಗ್ನಿಯಿಂದ ಸಂತಪ್ತಳಾಗಿರುವ, ಪೂರ್ವ ವಯಸ್ಸಿನ ಆ ಬಾಲಿಕೆಯ ಹಿಡಿಯಲ್ಲಿ ಸಿಕ್ಕಿಬಿದ್ದುದಕ್ಕಾಗಿ ಪಶ್ಚಾತ್ತಾಪಗೊಂಡನಾದರೂ, ಮುಂದೆ ಏನು ಮಾಡಲೂ ತೋರದೆ ಆಕೆಯ ಬಳಿಗೆ ನಡೆದು -- 'ಗುರುಪುತ್ರೀ! ಇದೇನು! ನಿಮಗೆ ನನ್ನಲ್ಲೂ ಸಂಕೋಚವೇ! ನನ್ನ ಮಗಳು ನಿಮ್ಮಲ್ಲಿ ಮಾಡಿರುವ ಸರ್ವಾಪರಾಧಗಳಿಗೂ ನಾನು ಕ್ಷಮಾಪಣೆ ಕೇಳಿಕೊಳ್ಳುತ್ತೇನೆ. ಆ ಮುದ ಹುಡುಗಿಯ ದುಡುಕುತನಕ್ಕಾಗಿ ಕೋಪಿಸದೆ ನನ್ನನ್ನೂ — ನನ್ನ ರಾಜ್ಯದ ಕ್ಷೇಮವನ್ನೂ ಕೃಪಾದೃಷ್ಟಿಯಿಂದ ನೋಡಿರಿ! ನಿಮ್ಮ ಮನಸ್ಸಿನಲ್ಲಿರುವ ಅರ್ಥವೇನೆಂಬುದನ್ನು ತಿಳಿಸಿರಿ. ನಿಸ್ಸಂದೇಹವಾಗಿ ಅದನ್ನು ನಡೆಯಿಸಿಕೊಡುವೆನು'' ಎಂದು ಬಹು ವಿನೀತನಾಗಿ ಪ್ರಾರ್ಥಿಸಿದನು. ದೈತ್ಯರಾಜನ ಆಧೀನವಾಣಿಯನ್ನು ಕೇಳಿದ ದೇವಯಾನೆಯು, ತನ್ನ ನಿಶ್ಚಯದಿಂದ ಲೇಶಮಾತ್ರವೂ ಹಿಂದಿರುಗಲರಿಯದೆ—'ರಾಜಾ ನನ್ನ ಅಭೀಷ್ಟವೊಂದುಂಟು. ಯಾವಳು ನನ್ನನ್ನು ನಾಯಿಗಿಂತಲೂ ಕಡೆಯಾಗೆಣಿಸಿ, ಎಂದಿಗೂ ಮರೆಯಲಾಗದ ಅಪಮಾನವನ್ನೂ, ಮೃತ್ಯುಕಾರಿಯಾದ ಅಪಾಯವನ್ನೂ ನನ್ನ ವಿಷಯದಲ್ಲಿ ಆಚರಿಸಿದಳೋ ಆ ಶರ್ಮಿಷ್ಠೆಯು ತನ್ನ ಸಹಸ್ರಮಂದಿ ದಾಸಿಯರೊಂದಿಗೆ ಬಂದು ಗೌಡಿಯಾಗಿ ನನ್ನ ಸೇವೆಗೆ ನಿಲ್ಲಬೇಕು. ಅಲ್ಲದೆ, ನಾನು ವಿವಾಹಿತಳಾಗಿ ಪತಿಗೃಹಕ್ಕೆ ಹೋದಾಗ ಅಲ್ಲಿಗೂ ಬಂದು, ನನ್ನನ್ನು ಓಲೈಸಿಕೊಂಡಿರಬೇಕು. ಹಾಗಾದರೆ ನಾನಿಲ್ಲಿ ಇರಲುಳ್ಳವಳು'' ಎಂದು ನುಡಿದಳು. ತನ್ನ ಮಗಳ ಮುಂದಿನ ಶ್ರೇಯಸ್ಸಿಗೆಲ್ಲ ಕುಠಾರಸ್ವರೂಪವಾದ ಈ ವಾರ್ತೆಯನ್ನು ಕೇಳಿದೊಡನೆಯೇ ಕ್ಷಣಕಾಲ ಸ್ತಂಭಿತನಾಗಿದ್ದ ವೃಷಪರ್ವರಾಜನು ಮುಂದಿನ ಯಾವ ಕಾರ್ಯಕ್ಕಾದರೂ ಅದೊಂದೇ ಮಾರ್ಗವಾದುದರಿಂದ, ಅನ್ಯಥಾ ಉಪಾಯಹೀನನಾಗಿ ತನ್ನ ಮಗಳನ್ನು ಕರೆಯಿಸಿ, ಗುರುಪುತ್ರಿಯ ಇಷ್ಟವನ್ನು ತಿಳಿಸಿ—ಆಕೆಯ ಊಳಿಗಕ್ಕೆ ನಿಯಮಿಸಿದನು. ಶರ್ಮಿಷ್ಠೆಯೂ, ತನ್ನ ದುಡುಕುತನದ ಫಲವಾಗಿ ಪ್ರಾಪ್ತವಾದ ಆ ಶಿಕ್ಷೆಯನ್ನು ಪ್ರತಿಮಾತನಾಡದೆ ಒಪ್ಪಿಕೊಂಡಳು. ಹಾಗೆ, ತನ್ನ ಸಹಸ್ರಮಂದಿ ದಾಸಿಯರೊಂದಿಗೆ ಬಂದು ಸೇವೆಗೆ ನಿಂತ ಆ ದೈತ್ಯ ರಾಜಪುತ್ರಿಯನ್ನು ಕಂಡು, ದೇವಯಾನೆಯು— 'ಇದೇನಿದು, ವಿಚಿತ್ರ ಸಂಗತಿ! ಹೊಗಳುಭಟ್ಟನಂತೆ ಸ್ತುತಿಸಿ,

ನಮಸ್ಕರಿಸಿ-ತಿರುಪೆಯುವವನಂತೆ ಯಾಚಿಸಿ ಬದುಕುವ ಬಡ ಬ್ರಾಹ್ಮಣನ ಮಗಳಿಗೆ ನಿನ್ನಂತಹ ರಾಜಪುತ್ರಿಯು ದಾಸಿಯಾಗುವುದೆಂದರೇನು!'' ಎಂದು ಮರ್ಮೋದ್ಘಾಟನೆಯ ಮಾತುಗಳನ್ನಾಡಿದಳು. ಶರ್ಮಿಷ್ಠೆಯು —''ಅಮ್ಮ ಕಷ್ಟ ಸುಖಗಳು ಶಾಶ್ವತಗಳಾದುವಲ್ಲ. ದಾಸ್ಯವು ಎಂತಹ ನೀಚಕೃತ್ಯವಾದರೂ, ದೈತ್ಯಕುಲದ ಮತ್ತು ನಮ್ಮ ತಂದೆಯ ರಾಜ್ಯದ ಕ್ಷೇಮಲಾಭಗಳನ್ನು ಸಾಧಿಸಲು ನಾನು ನನ್ನ ಸಕಲ ಸಖೀಜನರೊಂದಿಗೆ ನಿನ್ನ ಊಳಿಗವನ್ನು ಕೈಕೊಂಡು ನಡೆಸುತ್ತೇನೆ. ಇದು ಸತ್ಯವು'' ಎಂದು ನುಡಿದಳು. ದೇವಯಾನಿಗೆ ಪರಮಾನಂದವಾಯಿತು. ಶುಕ್ರಾಚಾರ್ಯರಿಗೂ, ತಮ್ಮ ಮಗಳಿಗೆ ಸಂತೋಷವುಂಟಾದುದರಿಂದ ಅತ್ಯಂತ ಸಮಾಧಾನವೆನಿಸಿತು.

ಮುಂದೊಂದು ದಿನ ದೇವಯಾನಿಯು, ಶರ್ಮಿಷ್ಠೆಯೂ ಇತರ ಅನೇಕಾನೇಕಮಂದಿ ದಾಸಿಯರೂ ಪಾದಸೇವೆ ಮಾಡುತ್ತಿರಲು, ಉದ್ಯಾನದಲ್ಲೊಂದು ತೂಗುಮಂಚದಮೇಲೆ ಕುಳಿತು ವಿನೋದಗೊಳ್ಳುತ್ತಿದ್ದಳು. ಆ ವೇಳೆಗೆ ನಹುಷಪುತ್ರನಾದ ಯಯಾತಿರಾಯನು ಹಿಂದಿನಂತೆಯೇ ಬೇಟೆಗೆಂದು ಬಂದು, ದೇವಕನ್ಯೆಯೋ ಎಂಬಂತೆ ಉಯ್ಯಾಲೆಯಲ್ಲಿ ಕುಳಿತಿದ್ದ ದೇವಯಾನಿಯನ್ನೂ, ಆಕೆಯ ಪಾದಸೇವೆಯಲ್ಲಿದ್ದ ಅಪ್ಸರ ಸುಂದರಿಯೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದ ಶರ್ಮಿಷ್ಠೆಯನ್ನೂ ಕಂಡು ಬಹು ಸೋಜಿಗಗೊಂಡನು. ದೇವಯಾನಿಯು, ಆತನ ರೂಪು ಯೌವನ ರಾಜತೇಜಗಳನ್ನು ಕಂಡು ಮೋಹಿಸಿದ್ದಂತೆಯೇ ಆತನೂ, ಶರ್ಮಿಷ್ಠೆಯನ್ನು ಕಂಡು ಮೋಹಿಸಿದ್ದನು. ಸ್ವಲ್ಪ ಹೊತ್ತಿನಲ್ಲಿಯೇ ಸಮೀಪಕ್ಕೆ ಬಂದ ಆತನನ್ನು ಯಯಾತಿರಾಯನೆಂದು ತಿಳಿದು ದೇವಯಾನಿಯು, ಒಡನೆ ಮೇಲಕ್ಕೆದ್ದು ಉಪಚರಿಸಿ, ಹಿಂದೆ ತನಗೆ ಕೊಟ್ಟಿದ್ದ ವಾಗ್ದಾನವನ್ನು ಸಾರ್ಥಕಗೊಳಿಸಲು ಈಗ ತನ್ನನ್ನು ಮದುವೆಯಾಗಬೇಕೆಂದು ಕೇಳಿಕೊಂಡಳು. ಯಯಾತಿಯು ಪುನಃ-ಆಕೆಯು ಬ್ರಾಹ್ಮಣ ಕನ್ಯೆಯಾದುದರಿಂದ, ತಂದೆಯಾದ ಶುಕ್ರಾಚಾರ್ಯರು ಸಮ್ಮತಿಪಟ್ಟು ಕನ್ಯಾದಾನ ಮಾಡಿಕೊಟ್ಟರಲ್ಲದೆ, ಮದುವೆಯಾಗಲಾರೆನೆಂದು ಹೇಳಿಬಿಟ್ಟನು. ಆ ಮಾತನ್ನು ಕೇಳಿದ ದೇವಯಾನಿಯು, ತನ್ನ ತಂದೆಗೆ ಹೇಳುಕಳುಹಿಸಿ, ಅತನು ಬಂದ ಮೇಲೆ, ರಾಜನನ್ನು ಆತನಿಗೆ ದರ್ಶನ ಮಾಡಿಸಿ—'ತಂದೆಯೇ ಈತನು ನಹುಷಪುತ್ರನಾದ ಯಯಾತಿರಾಜನು. ಹಿಂದೊಂದು ವೇಳೆ ನಾನು ಭಾವಿಯಲ್ಲಿ

ಬಿದ್ದು ಕಷ್ಟಪಡುತ್ತಿದ್ದಾಗ ಈತನೇ ಮೇಲಕ್ಕೆತ್ತಿ ವಸ್ತ್ರವಿತ್ತು ಮಾನಸಂ ರಕ್ಷಣೆ ಮಾಡಿದಾತನು. ಕನ್ಯೆಯಾದ ನನ್ನೀ ದಕ್ಷಿಣ ಹಸ್ತವನ್ನು ಈತನೇ ಮೊದಲು ಹಿಡಿದವನಾದುದರಿಂದ ಅದನ್ನು ಪುನಃ ಮತ್ತಾರೂ ಗ್ರಹಣ ಮಾಡುವುದು ಯೋಗ್ಯವೆನಿಸಲಾರದು. ಈತನೇ ನನ್ನ ಪತಿಯಾಗಬೇಕೆಂದು ನಾನು ಅಂದೇ ಸಂಕಲ್ಪ ಮಾಡಿರುವೆನು. ಅದಕ್ಕೆ ತಾವಾದರೂ ಸಮ್ಮತಿಸ ಬೇಕು" ಎಂದು ಪ್ರಾರ್ಥಿಸಿದಳು. ಶುಕ್ರಾಚಾರ್ಯರೂ ಜ್ಞಾನದೃಷ್ಟಿ ಯಿಂದ ಆಕೆಯ ಭವಿಷ್ಯದ್ಗತಿಯನ್ನೂ, ಕಚನ ಶಾಪವೃತ್ತಾಂತವನ್ನೂ ತಿಳಿದು, ಅದು ದೈವಸಂಕಲ್ಪದಿಂದಲೇ ಏರ್ಪಟ್ಟಿದೆಂದು ಯೋಚಿಸಿದವ ರಾಗಿ ಬ್ರಾಹ್ಮಣಕನ್ಯೆ ಮತ್ತು ಕ್ಷತ್ರಿಯ ವರನ ಆ ಮಿಶ್ರ ವಿವಾಹಕ್ಕೆ ಸಮ್ಮತಿಸಿದರು. ವಿವಾಹಕ್ಕೆ ಬೇಕಾದ ಸಕಲ ಸಂಭಾರಗಳೂ ಸಿದ್ಧಗೊಳಿಸ ಲ್ಪಟ್ಟು ಮುಂದೊಂದು ಶುಭ ಮುಹೂರ್ತದಲ್ಲಿ ದೇವಯಾನೆ ಯಯಾತಿ ಯರ ವಿವಾಹವು ಬಹು ವಿಜೃಂಭಣೆಯಿಂದ ನಡೆದುಹೋಯಿತು. ಶುಕ್ರಾ ಚಾರ್ಯರು ತರುವಾಯ ವೃಷಪರ್ವ ಪುತ್ರಿಯಾದ ಶರ್ಮಿಷ್ಠೆಯನ್ನೂ ಅತನಿಗೇ ಕೊಡಿಸಿ ಆ ವಿವಾಹವನ್ನೂ ನೆರವೇರಿಸಿಬಿಟ್ಟರು. ಹೀಗೆ ಯಯಾತಿ ಮಹಾರಾಜನು ದೇವಕನ್ಯೆಯರಂತೆ ರೂಪವಂತರಾದ ಈರ್ವರು ಪತ್ನಿಯ ರನ್ನೂ, ಅವರೊಂದಿಗೆ ಬಂದ ಸಹಸ್ರಾರು ಮಂದಿ ದಾಸೀಜನಗಳನ್ನೂ ಕರೆದುಕೊಂಡು ತನ್ನ ರಾಜ್ಯವನ್ನು ಹೊಕ್ಕನು.

ಯಯಾತಿಯು, ತನಗೆ ದೇವಯಾನೆಯು ಲಭ್ಯವಾದುದಕ್ಕಿಂತಲೂ, ಶರ್ಮಿಷ್ಠೆಯೊಂದಿಗೆ ತನ್ನ ವಿವಾಹವಾದುದಕ್ಕಾಗಿ ಹೆಚ್ಚು ಸಮಾಧಾನಗೊಂಡಿ ದ್ದನು. ಆದರೆ, ತನ್ನ ರಾಜಧಾನಿಗೆ ಹೊರಡುವ ಮುಂಚೆ ಇಬ್ಬರು ಪತ್ನಿ ಯರೊಂದಿಗೂ ಹೋಗಿ ಗುರುವರ್ಯರಾದ ಶುಕ್ರಾಚಾರ್ಯರ ಪಾದಕ್ಕೆ ನಮಿಸಿ ನಿಂತಿರಲು, ಮಹಾನುಭಾವರಾದ ಅವರು ಆ ದಂಪತಿ ಗಳನ್ನು ಆಶೀರ್ವದಿಸಿ, ಯಯಾತಿಯನ್ನು ಬೇರೆಯಾಗಿ ಕರೆದು—'ರಾಜಾ, ನಿನಗೆ ಶರ್ಮಿಷ್ಠೆಯು ವಿವಾಹಮೂಲಕ ಪತ್ನಿಯಾಗಿರುವಳೇ ಆದರೂ, ಅವಳು ದೇವಯಾನೆಗೆ ಪೂರ್ವಸಂಕೇತಪ್ರಕಾರ ಕೇವಲ ದಾಸಿ ಮಾತ್ರ ಳಾದ್ದರಿಂದ ಅವಳೊಂದಿಗೆ ಎಂದೂ ಸಂಗಮಿಸದಂತೆ ಮಾತ್ರ ಜಾಗ್ರತೆ ಯಾಗಿರು. ನೀನು ಅವಳೊಂದಿಗೆ ಸಕಲವಿಧ ವಿಹಾರಗಳನ್ನೂ ಅನುಭವಿಸ ಬಹುದಾದರೂ, ಏಕಶಯ್ಯಾ ವಿಹಾರ ಮಾತ್ರ ಕೂಡದು. ಎಚ್ಚರಿಕೆ.

'ಇದನ್ನು ವಿಚಾರಿ ನಡೆಸೀಯೆ.' ಎಂದು ಎಚ್ಚರಿಸಿ ಕಳುಹಿಸಿದ್ದನು. ರಾಜಧಾನಿಗೆ ಬಂದಮೇಲಂತೆ, ಯಯಾತಿರಾಜನು, ಅರೆಮನಸ್ಸಿನಿಂದಲೇ ಆ ಇಬ್ಬರಿಗೂ ಬೇರೆ ಬೇರೆ ಅರಮನೆಗಳನ್ನು ಕಟ್ಟಿಸಿ, ಅವುಗಳಲ್ಲಿ ಸುಖವಸತಿಗೆ ಬೇಕಾದ ಸಮಸ್ತ ಸಂಭಾರಗಳನ್ನೂ ಸಿದ್ಧಗೊಳಿಸಿಟ್ಟನು.

ಧರ್ಮದಿಂದ ರಾಜ್ಯಭಾರ ಮಾಡುತ್ತಲಿದ್ದ ಯಯಾತಿ ರಾಜನಿಗೆ ದಾಂಪತ್ಯ ಧರ್ಮವನ್ನನುಸರಿಸಿ, ದೇವಯಾನಿಯಲ್ಲಿ ಯದು ತುರ್ವಸು ಎಂಬಿಬ್ಬರು ಪುತ್ರರು ಉದಯಿಸಿದರು. ತನ್ನ ಕಣ್ಣೆದುರಿಗೇ, ತನ್ನ ಪತಿಯೊಂದಿಗೆ ಸಕಲವಿಧ ವಿಹಾರಗಳನ್ನೂ ಮನದಣಿಯೆ ಅನುಭವಿಸುತ್ತಿದ್ದ ದೇವಯಾನಿಯನ್ನು ಕಂಡು, ಶರ್ಮಿಷ್ಠೆಯು, ತನಗೆ ಆ ತನ್ನ ವಿವಾಹಿತ ಪತಿಯು ಪಾದಸೇವೆ ಮಾಡಲೂ ಲಭ್ಯವಿಲ್ಲವಲ್ಲಾ ಎಂದು ಅಸಹ್ಯ ದುಃಖಕ್ಕೆಡೆಯಾಗಿದ್ದಳು. ಹೀಗಿರುವಲ್ಲಿ ಒಂದಾನೊಂದು ದಿನ ಸ್ತ್ರೀ ಧರ್ಮದಂತೆ ಋತುಸ್ನಾನ ಮಾಡಿದ್ದ ಶರ್ಮಿಷ್ಠೆಯು ಅಂತಃಪುರಕ್ಕೆ ವಿಹಾರಾರ್ಥವಾಗಿ ಬಂದಿದ್ದ ಯಯಾತಿರಾಜನು, ಪುತ್ರಾರ್ಥಿಯಾಗಿ ತನ್ನನ್ನು ಯಾಚಿಸಿದ ಆ ದೈತ್ಯರಾಜಪುತ್ರಿಗೆ ಮನಸೋತನು. ಆ ವೇಳೆಯಲ್ಲಿ ಶುಕ್ರಾಚಾರ್ಯರ ಭಯಂಕರ ಆಜ್ಞೆಯು ಆತನಿಗೆ ಜ್ಞಾಪಕ ಬಂದಿತಾದರೂ, ಋತುಸ್ನಾತಳಾದ ಪತ್ನಿಯು ಪುತ್ರಾರ್ಥಿಯಾಗಿ ಯಾಚಿಸುವಾಗ ಗರ್ಭಾದಾನ ಮಾಡದಿರುವುದು ಪಾಪಹೇತುವೆಂಬ ಧರ್ಮಸೂಕ್ಷ್ಮವನ್ನು ಅರಿತವನಾಗಿ ಆಕೆಯೊಂದಿಗೆ ಸಂಗಮಿಸಿದನು. ಶರ್ಮಿಷ್ಠೆಗೆ ಆ ಮೂಲಕ ಗರ್ಭನಿಂತು ನವಮಾಸಗಳು ಕಳೆದ ಮೇಲೆ ಮುಂದೊಂದು ಶುಭದಿನದಲ್ಲಿ ಒಬ್ಬ ಪುತ್ರನು ಉದಯಿಸಿದನು. ಇದರಂತೆಯೇ ಆಕೆಯ ಉದರದಲ್ಲಿ ಮುಂದೆ ಇನ್ನಿಬ್ಬರು ಮಕ್ಕಳೂ ಜನಿಸಿದರು. ಆ ಮೂರು ಮಂದಿಗೂ, ಕ್ರಮವಾಗಿ ದೃಹ್ಯನು, ಅನುವು, ಪೂರುವು ಎಂದು ನಾಮಕರಣಮಾಡಿ, ಶರ್ಮಿಷ್ಠೆಯು ಅವರ ಬಾಲಲೀಲಾವಿನೋದಗಳಿಂದ ಕಾಲಯಾಪನೆ ಮಾಡುತ್ತ ಪರಮಾನಂದದಿಂದ ಇದ್ದಳು.

ಹೀಗಿರುವಲ್ಲಿ ತನ್ನ ಗೆಳೆತಿಯಾದ ಶರ್ಮಿಷ್ಠೆಯನ್ನು ನೋಡಿ ಬಹು ಕಾಲವಾದುದರಿಂದ, ನೋಡಿ ಮಾತನಾಡಿಸಿಕೊಂಡು ಬರೋಣವೆಂದು ದೇವಯಾನಿಯು ಒಂದಾನೊಂದುದಿನ, ತನ್ನ ಇಬ್ಬರು ಪುತ್ರರನ್ನೂ ಕರೆದುಕೊಂಡು ಪತಿಯೊಂದಿಗೆ ರಥಾರೂಢಳಾಗಿ, ಆಕೆಯ ಅರಮನೆಗೆ ಬಂದಳು. ಅಲ್ಲಿ ತನ್ನ ಪತಿಯಂತೆಯೇ ರೂಪುಲಾವಣ್ಯಗಳಿಂದ ಒಪ್ಪುತ್ತಿದ್ದ ಇತರ

ಮೂವರು ಬಾಲಕರನ್ನು ಕಂಡು, ಅವರು ಯಾರೆಂದು ವಿಚಾರಿಸಲು, ಅವರು ಮೂವರೂ ಶರ್ಮಿಷ್ಠೆಯ ಪುತ್ರರೆಂಬ ರಹಸ್ಯವು ಹೊರಪಟ್ಟಿತು. ತನ್ನ ತಂದೆ ಶುಕ್ರಾಚಾರ್ಯರು, ಶರ್ಮಿಷ್ಠೆಯೊಂದಿಗೆ ಸಂಗಮಿಸಬಾರದೆಂದು ಬಹು ಖಂಡಿತವಾದ ಆಜ್ಞೆ ಮಾಡಿದ್ದುದನ್ನೂ ದುರ್ಲಕ್ಷಿಸಿ, ತನ್ನ ಪತಿಯು ಅವಳೊಂದಿಗೂ ಕಾಮೋಪಭೋಗ ಮಾಡಿದನೆಂದು ತಿಳಿದೊಡನೆಯೇ ದೇವಯಾನಿಯ ಮನಸ್ಸಿನಲ್ಲಿ, ಸಾಪತ್ನೀ ಮಾತ್ಸರ್ಯಾಗ್ನಿಯು ತಲೆದೋರಿತು. ಮುಂದೆ ಒಂದು ಕ್ಷಣಕಾಲವೂ ಅಲ್ಲಿ ನಿಲ್ಲಲು ಅವಳಿಗೆ ಸಮಾಧಾನವಾಗಲಿಲ್ಲ. ತನ್ನ ಸರ್ವಸ್ವವೂ ಸೂರೆಹೋಯಿತೋ ಎಂಬಷ್ಟು ವ್ಯಸನವು ಪ್ರಾಪ್ತವಾಗಿ, ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಲಾರಂಭವಾಯಿತು. ಒಡನೆ ಹಿಂದಿರುಗಿ, ತನ್ನ ಅರಮನೆಗೂ ಬರದೆ, ರಾಜಧಾನಿಯನ್ನೂ ಪ್ರವೇಶಿಸದೆ, ನೇರವಾಗಿ ತನ್ನ ತಂದೆಯ ಆಶ್ರಮದ ಮಾರ್ಗವನ್ನು ಹಿಡಿದಳು. ಯಯಾತಿರಾಜನು, ಈ ಮೂರ್ಖಹೆಂಗಸು ತನ್ನ ತಂದೆಯ ಎದುರಿಗೆ ಈ ವೃತ್ತಾಂತವನ್ನು ಹೇಳುವುದರಿಂದ ತಪ್ಪದೆ ಏನೋ ಒಂದು ಪ್ರಮಾದ ಸಂಭವಿಸುವುದೆಂದು ಬಹು ಭೀತನಾದನು. ಲೋಕಸಾಮಾನ್ಯವಾದ ತನ್ನ ಆ ಲೋಪವನ್ನೊಂದನ್ನು ಮರೆತು ಕ್ಷಮಿಸಿಬಿಡೆಂದು ಎಷ್ಟೋ ಬಗೆಯಿಂದ ಹೇಳಿಕೊಂಡನು. ಮುಂದೆ ಎಂದೂ, ಶರ್ಮಿಷ್ಠೆಯ ಮುಖಾವಲೋಕನ ಮಾಡುವುದಿಲ್ಲವೆಂದು, ಅಂಗಲಾಚಿಕೊಂಡನು. ಆದರೂ ಏನೂ ಪ್ರಯೋಜನವಾಗಲಿಲ್ಲ. ದೇವಯಾನಿಯು, ಈದ ಹುಲಿಯಂತೆ ರೋಷಾನ್ವಿತಳಾಗಿ, ಸರ್ಪದಂತೆ ಬೊರೆಯುತ್ತ ಹೋಗಿ, ತನ್ನ ತಂದೆಯನ್ನು ಕಂಡು, ರಾಜಧಾನಿಯಲ್ಲಿ ನಡೆದ ಪ್ರಮಾದ ಕಾರ್ಯವನ್ನೂ, ತನ್ಮೂಲಕ ತನಗುಂಟಾದ ಮನೋವ್ಯಥೆಯನ್ನೂ ವಿಸ್ತಾರವಾಗಿ ವಿವರಿಸಿದಳು! ಒಂದಿಗೇ ಹೋಗಿದ್ದ ಯಯಾತಿಯೂ, ಋತುಕಾಲದಲ್ಲಿ ಆಕೆಯ ಚಿತ್ತವೃತ್ತಿಯನ್ನನುಸರಿಸಿ ಧಾರ್ಮಿಕ ಮನೋಭಾವದಿಂದ ನಡೆದ ತನ್ನ ವೃತ್ತಿಯು ಅಪರಾಧವಾಗಿದ್ದರೆ, ಇದೊಂದು ಬಾರಿ ಅದನ್ನು ಕ್ಷಮಿಸಿಬಿಡಬೇಕೆಂದು ಎಷ್ಟೋ ಬಗೆಯಿಂದ ಹೇಳಿಕೊಂಡನು. ಆದರೂ ಫಲವಾಗಲಿಲ್ಲ.—'ಎಲೈ ಕಾಮುಕನೇ, ಕಾರಣಾಂತರದಿಂದ ಬೇಡವೆಂದು ನಾನು ಪ್ರತಿಬಂಧಿಸಿದ್ದರೂ, ಅದನ್ನು ಮೀರಿ ಈ ಮಿಥ್ಯಾಚಾರವನ್ನು ಮಾಡಿದುದರಿಂದ ನಿನ್ನನ್ನು ವೃದ್ಧಾಪ್ಯವು ಬಂದು ಬಾಧಿಸಲಿ' ಎಂದು ಶಾಪಕೊಟ್ಟರು.

ಶುಕ್ರಾಚಾರ್ಯರ ಆ ಶಾಪವು ಯಯಾತಿಯನ್ನು ನಡುಗಿಸಿಬಿಟ್ಟಿತು. ಆ ಶಾಪ ಮಹಿಮೆಯೆಂಥಾದ್ದೋ! ಮುಂದೆ ಸ್ವಲ್ಪಹೊತ್ತಿನೊಳಗಾಗಿಯೇ ಅತನಿಗೆ ದುರ್ಧರ ವೃದ್ಧಾಪ್ಯವು ಬಂದು ವ್ಯಾಪಿಸಿತು. ದೇಹ ಚರ್ಮವೆಲ್ಲ ಸುಕ್ಕುಬಿದ್ದು ಹೋಯಿತು. ಮಾಂಸಖಂಡಗಳು ಕ್ಷಯಿಸಿಹೋದುವು. ಇಂದ್ರಿಯ ಪಾಟವವು ತಪ್ಪಿಹೋಯಿತು. ದೇಹದ ಎಲುಬುಗಳು ಮೇಲೆದ್ದು ಕಾಣಿಸಿಕೊಳ್ಳತೊಡಗಿದುವು. ಹಲ್ಲುಗಳು ಬಿದ್ದು, ಮುಖವು ಅಸಹ್ಯವಾಗಿ ತೋರಿತು. ಸ್ವಲ್ಪಹೊತ್ತಿಗೆ ಮುಂಚೆ, ದಿವ್ಯ ಸೌಂದರ್ಯದಿಂದ ವಿರಾಜಿಸುತ್ತಿದ್ದ ಯಯಾತಿರಾಜನ ದೇಹವು, ಉತ್ತರ ಕ್ಷಣದಲ್ಲೇ ನೋಡಲು ಅಸಹ್ಯವೆನಿಸುವಂತೆ ಮಾರ್ಪಟ್ಟಿತು. ವೃದ್ಧಾಪ್ಯದ ಆ ಭಯಂಕರ ಸ್ಥಿತಿಯನ್ನು ಕಂಡು, ಯಯಾತಿರಾಜನು ಮಾತ್ರವಲ್ಲ - ಅಲ್ಲೇ ನಿಂತು ನೋಡುತ್ತಿದ್ದ ದೇವಯಾನಿಯೂ, ತನ್ನ ಅವಿವೇಕವನ್ನು ಸಹಸ್ರ ಪರಿಯಿಂದ ಹಳಿದುಕೊಳ್ಳುತ್ತಾ ಮುಂದೇನು ಮಾಡುವುದೆಂದು ತೋರದಂತಾದಳು!

ರಾಜನು, ಊಹಿಸಿಕೊಳ್ಳಲೂ ಅಸಾಧ್ಯವಾಗಿದ್ದ ತನ್ನ ಈಗಿನ ಸ್ಥಿತಿಯನ್ನು ಕುರಿತು ಅತ್ಯಂತ ಚಿಂತಾಕ್ರಾಂತನಾಗಿ, ಮುಂದೆ ಮಾಡಬೇಕಾದ ಕಾರ್ಯವೇನೆಂದು ತೋರದೆ, ಕೆಲಹೊತ್ತು ಭ್ರಾಂತನಂತೆ ಸುಮ್ಮನಿದ್ದು-ತರುವಾಯ, ಶುಕ್ರಾಚಾರ್ಯರಿಗೆ ದೀರ್ಘದಂಡ ನಮಸ್ಕಾರಮಾಡಿ,—"ಮಹಾನುಭಾವರೇ, ಮುಂದೆ ನನ್ನ ಗತಿಯೇನು! ಮಕ್ಕಳೋ ಇನ್ನೂ ಚಿಕ್ಕ ವಯಸ್ಸಿನವರು. ರಾಜ್ಯವು ತಕ್ಕ ರಕ್ಷಕರಿಲ್ಲದೆ ಅನಾಯಕ ಸ್ಥಿತಿಗೆ ಬರುವುದು. ತಮ್ಮ ಪುತ್ರಿ ದೇವಯಾನಿಗೆ ಇನ್ನೂ ಮಧ್ಯಮ ವಯಸ್ಸು. ಆಕೆಯೊಂದಿಗೆ ಅನೇಕ ವಿಧವಾಗಿ ವಿಹರಿಸಬೇಕೆಂಬ ನನ್ನ ಆಸೆಯು ಇನ್ನೂ ತೀರಲಿಲ್ಲ. ಇಂತಹ ನನ್ನ ಸ್ಥಿತಿಯಲ್ಲಿ ನನಗೀ ಶಿಕ್ಷೆಯು ಕೇವಲ ಮರಣ ಸದೃಶವಲ್ಲವೆ! ಕ್ಷಮಿಸಿ, ಇದರ ಪರಿಹಾರೋಪಾಯವನ್ನು ಕರುಣಿಸಬೇಕು" ಎಂದು ಬೇಡಿದನು.

ಶುಕ್ರಾಚಾರ್ಯರು ರಾಜನ ಆ ಮಾತನ್ನು ಕೇಳಿ, ನಿಜವೆಂದು ತಿಳಿದರು! ಒಂದಿಗೇ ಅಲ್ಲೇ ಪಕ್ಕದಲ್ಲೇ ನಿಂತು, ತನ್ನ ಅವಿವೇಕದಿಂದ ನಡೆದುಹೋದ ಪ್ರಮಾದಕಾರ್ಯಕ್ಕಾಗಿ ಸಂತಾಪಗೊಂಡು ಚಿಕ್ಕಮೋರೆ ಮಾಡಿಕೊಂಡಿದ್ದ ತಮ್ಮ ಮಗಳನ್ನೂ ಕಂಡು, ಅದನ್ನು ಹೇಗಾದರೂ ಪರಿಹಾರ ಮಾಡಬೇಕೆಂದುಕೊಂಡು, ಯಯಾತಿಯನ್ನು ಕುರಿತು,—'ರಾಜಾ ನನ್ನ ಬಾಯಿಂದ ಹೊರಬಿದ್ದ ಈ ಮಾತು ವ್ಯರ್ಥವಾಗದು. ಆದರೆ, ನಿನ್ನ ಪುತ್ರರಲ್ಲಿ ಯಾರಾದರೂ, ತಮ್ಮ ಯೌವನವನ್ನು ಈ ವೃದ್ಧಾಪ್ಯಕ್ಕೆ ವಿನಿಮಯವಾಗಿ ಕೊಡಲು ಸಮ್ಮತಿಸಿದಲ್ಲಿ, ಹಾಗಾಗಬಹುದು. ಹಾಗೆ ಅವರಲ್ಲಾರಾದರೊಬ್ಬನು ಕೊಡುವುದಕ್ಕೆ ಒಪ್ಪಿದರೆ, ವಿನಿಮಯ ಕಾಲದಲ್ಲಿ ನನ್ನನ್ನು

ಸ್ಮರಿಸು. ಎಂದಿನಂತೆ ಪುನಃ ನಿನ್ನ ಯೌವನವು ನಿನಗಿದ್ದು, ನಿನ್ನ ಈ ವೃದ್ಧಾಪ್ಯವು ನಿನ್ನ ಆ ಮಗನಿಗೆ ಹೋಗುವುದು'' ಎಂದು ವಿಶಾಪ ಕೊಟ್ಟರು.

ಯಯಾತಿರಾಜನು ವ್ಯಸನಭಾರದೊಂದಿಗೆ ವೃದ್ಧಾಪ್ಯದ ಜಡತ್ವವೂ ಸೇರಲು ಅತ್ಯಂತ ಉತ್ಸಾಹಹೀನನಾಗಿ ರಾಜಧಾನಿಗೆ ಬಂದನು. ತಮ್ಮ ರಾಜನಿಗೆ ಪ್ರಾಪ್ತವಾದ ದುರವಸ್ಥೆಗಾಗಿ ಎಲ್ಲರೂ ಮರುಗಿದರು. ಆಗ ಆತನು, ತನ್ನ ಮಕ್ಕಳಲ್ಲಿ ಅನುಕ್ರಮವಾಗಿ, ಯದು, ತುರ್ವಸು, ಅನುವು, ದೃಹ್ಯನು ಈ ನಾಲ್ವರಲ್ಲಿ ಒಬ್ಬೊಬ್ಬನನ್ನೂ ಬೇರೆಬೇರೆಯಾಗಿ ಕರೆದು,— 'ಕಂದಾ, ದುರದೃಷ್ಟದಿಂದ ನನಗೆ ಇಂತಹ ದುಸ್ಥಿತಿಯು ಪ್ರಾಪ್ತಿಸಿದೆ. ನನಗಾದರೋ ಇನ್ನೂ ವಿಷಯ ಸುಖಾಭಿಲಾಷೆಯು ತೀರಲಿಲ್ಲ.—ಆದರೆ ದೇಹವು ಆ ಕಾರ್ಯಕ್ಕೆ ತಕ್ಕ ಸ್ಥಿತಿಯಲ್ಲಿಲ್ಲ. ಇದರಿಂದ ಪ್ರಾಪ್ತವಾಗಿರುವ ಮನೋವ್ಯಥೆಯು ಸಹಿಸಲಸದಳವಾಗಿದೆ. ಈ ಸಂದರ್ಭದಲ್ಲಿ, ನಿಮ್ಮಲ್ಲಿ ಯಾರಾದರೂ, ನಿಮ್ಮ ಯೌವನವನ್ನು ನನ್ನ ಈ ವೃದ್ಧಾಪ್ಯಕ್ಕೆ ವಿನಿಮಯವಾಗಿ ಕೊಟ್ಟು, ಸಹಾಯ ಮಾಡಬಲ್ಲಿರಾ!'' ಎಂದು ಕೇಳಿದನು. ಅದನ್ನು ಕೇಳಿದ ಆ ಪುತ್ರರು,—'ತಂದೆಯೇ ಈವರೆಗೆ ಎಷ್ಟೋ ಕಾಲದಿಂದ ವಿಷಯ ಸುಖಗಳನ್ನು ಅಮಿತವಾಗಿ ಅನುಭವಿಸಿರುವ ನೀನೇ ಇನ್ನೂ ತೃಪ್ತನಾಗದಿರುವಲ್ಲಿ, ಈಗತಾನೇ ಪ್ರಾಯಸ್ಥರಾಗುತ್ತಿರುವ ನಾವು ಇಂದೇ ವೃದ್ಧಾಪ್ಯವನ್ನು ಪಡೆದು ಹೇಗೆ ತೃಪ್ತರಾಗಿರಬಲ್ಲೆವು! ಇದು ನಮ್ಮಿಂದಾಗದು'' ಎಂದು ಬಿಟ್ಟರು. ಯಯಾತಿಯು ಆ ಮಾತನ್ನು ಕೇಳಿ - ತರುವಾಯ ತನ್ನ ಚಿಕ್ಕ ಮಗನಾದ ಪೂರುವನ್ನು ಕರೆದು, ಅವನಿಗೂ ಮೇಲ್ಕಂಡ ಪ್ರಶ್ನೆಯನ್ನೇ ಕೇಳಿದನು. ಅಲೌಕಿಕ ಸದ್ಗುಣನಿಧಿಯೂ ಪಿತೃಭಕ್ತನೂ, ಸಕಲ ವಿದ್ಯಾ ಪಾರಂಗತನೂ ಆದ ಆ ಪೂರುವು ಒಡನೆ ಬಹು ಸಮಾಧಾನಪಟ್ಟು,— 'ತಂದೆಯೇ, ಈ ದೇಹವು ನಿಮ್ಮಿಂದ ಬಂದುದಲ್ಲವೆ! ಇದನ್ನು ಜನ್ಮದಾತರಾದ ನಿಮ್ಮ ಸೇವೆಗಾಗಿ ಉಪಯೋಗಿಸಿ ಸವೆಯಿಸುವುದಕ್ಕಿಂತಲೂ ಶ್ರೇಯಸ್ಸಾಧನವು ಮಕ್ಕಳಿಗೆ ಬೇರೆ ಏನುಂಟು! ಧನ್ಯನಾದೆನು. ಯೌವನವನ್ನಾಗಲೀ, ದೇಹವನ್ನಾಗಲೀ, ಕೊನೆಗೆ ನನ್ನೀ ಪ್ರಾಣಗಳನ್ನಾಗಲೀ ತಮಗೆ ಯುಕ್ತ ತೋರಿದ ರೀತಿಯಲ್ಲಿ ಉಪಯೋಗಿಸಿಕೊಳ್ಳಬಹುದು'' ಎಂದನು. ಒಡನೆ, ಯಯಾತಿಯು ತನ್ನ ಮಗನ ಪಿತೃಭಕ್ತಿಗಾಗಿ ಪರಮ ಸಂತುಷ್ಟನಾಗಿ, ಶುಕ್ರಾಚಾರ್ಯರನ್ನು ಸ್ಮರಿಸಿಕೊಂಡು, ತನ್ನ ವೃದ್ಧಾಪ್ಯವು ಅವನಿಗೆ ಹೋಗಿ, ಅವನ ಯೌವನವು ತನಗೆ ಬರುವಂತೆ ಅಪೇಕ್ಷಿಸಿದನು. ಮಹರ್ಷಿಗಳ ತಪೋಮಹಿಮೆಯೆಂಥಾದ್ದೋ, ಒಡನೆಯೇ, ಅವರಲ್ಲಿ ಒಬ್ಬರೊಬ್ಬರ ಸ್ಥಿತಿಗಳು ಬದಲಾದುವು. ವೃದ್ಧನಾಗಿದ್ದ ಯಯಾತಿಯು ದಿವ್ಯ ಪ್ರಾಯದಿಂದ ಕಂಗೊಳಿಸತೊಡಗಿದನು. ಇಪ್ಪತ್ತು ವರ್ಷ ಪ್ರಾಯದಲ್ಲಿದ್ದ ಪೂರುವು ಅಸಹ್ಯ ಮುಪ್ಪಿನಿಂದ ನೆಲಹಿಡಿದು ಕುಳಿತನು.

ಯಯಾತಿರಾಜನು ತನಗೆ ಪ್ರಾಪ್ತವಾದ ಯೌವನದಿಂದ ಎಂದಿನಂತೆ ಬಲಶಾಲಿಯಾಗಿ, ದರ್ಪದಿಂದ ರಾಜ್ಯಪಾಲನೆ ಮಾಡುತ್ತ ಸತ್ಯಧರ್ಮನ್ಯಾಯಗಳನ್ನು ಸ್ಥಿರಗೊಳಿಸಿ, ಹವ್ಯಕವ್ಯಾದಿಗಳಿಂದ ದೇವರ್ಷಿ ಪಿತೃವರ್ಗಗಳನ್ನು ತೃಪ್ತಿಗೊಳಿಸುತ್ತ ದಾನಧರ್ಮಗಳಿಂದ ಭೂಸುರವರ್ಗವನ್ನು ಮೆಚ್ಚಿಸಿ, ಅಂತೆಯೇ ಉಪವನ ಸರೋವರ ಚಂದ್ರಶಾಲೆ ಮುಂತಾದ ವಿಹಾರಸ್ಥಳಗಳಲ್ಲಿ ಪತ್ನಿಯರೊಂದಿಗೆ ಬೆರೆದು ಸಕಲವಿಧ ಭೋಗಗಳನ್ನೂ ಅನೇಕ ಕಾಲ ಅನುಭವಿಸಿದನು. ಆದರೂ, ಇಂದ್ರಿಯ ಸುಖಗಳು ಆತನಿಗೆ ತೃಪ್ತಿಯನ್ನುಂಟುಮಾಡಲಿಲ್ಲ. ಕೊನೆಗೊಂದು ದಿನ ಆತನು, ಹಾಗೇ ತನ್ನ ಸ್ಥಿತಿಯನ್ನು ಕುರಿತು ಯೋಚಿಸಿಕೊಂಡು—ದೇವಯಾನಿಯನ್ನು ಕುರಿತು — "ಪ್ರಿಯೇ, ಎಷ್ಟು ಕಾಲ ಅನುಭವಿಸಿದರೂ ಈ ಕಾಮಕ್ಕೆ ತೃಪ್ತಿಯುಂಟಾಗಲರಿಯದು. ಅನುಭವಿಸಿದಷ್ಟೂ ಇನ್ನೂ ಹೆಚ್ಚಾಗುವುದೇ ಹೊರತು ಕಡಮೆಯಾಗಲಾರದು. ವಿಷಯಾಭಿಲಾಷೆಯೆಂಬುದು ಮನುಷ್ಯನಿಗೆ ಮೇಲೆ ಮೇಲೆ ದುಃಖವನ್ನು ಹೆಚ್ಚಿಸುವುದಲ್ಲದೆ ಮನಶ್ಶಾಂತಿಯನ್ನುಂಟುಮಾಡದು. ದೇಹವು ಜೀರ್ಣವಾದರೂ, ದುರ್ದಮನೀಯವಾದ ಈ ಕಾಮವು ಜೀರ್ಣವಾಗದು. ಸಮಸ್ತ ದುಃಖಗಳಿಗೂ ಇದೇ ಮೂಲವು. ಕಾಮಿಗೆ ಯುಕ್ತಾಯುಕ್ತ ವಿಚಾರವು ಹಾರಿಹೋಗುವುದು. ಪುರುಷನು, ಹೆತ್ತ ತಾಯೊಡನೆಯಾಗಲೀ, ಸೋದರಿಯೊಡನೆಯಾಗಲೀ, ಕೊನೆಗೆ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳೊಡನೆಯಾಗಲೀ ರಹಸ್ಯಸ್ಥಾನದಲ್ಲಿರುವುದು ತಕ್ಕುದಲ್ಲ. ಸಂಗದಿಂದ ಕಾಮವು ತಪ್ಪದೆ ಹುಟ್ಟುವುದು. ಅದರಿಂದ ಸಕಲಾನರ್ಥಗಳೂ ಹುಟ್ಟುವುವು. ಅದಕ್ಕಾಗಿ ಸಂಗವನ್ನು ತ್ಯಜಿಸಿ, ಮನಸ್ಸನ್ನು ಪರಮಾತ್ಮನ ಪಾದಾರವಿಂದಗಳಲ್ಲಿ ತೊಡಗಿಸುವುದೇ ಮುಖ್ಯೋಪಾಯವು. ವಿಷಯಾದಿಗಳಿಗೆ ವಶವಾಗಿ, ಸಾರಥಿಯಿಲ್ಲದ ರಥಾಶ್ವಗಳಂತೆ ಕಂಡಕಡೆಗೆ ಓಡುತ್ತಿರುವ ಇಂದ್ರಿಯಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲು ಪರಮಾತ್ಮನ ಧ್ಯಾನಕ್ಕಿಂತಲೂ ಬೇರೊಂದು ಸುಲಭೋಪಾಯವೇ ಇಲ್ಲ. ಮನಸ್ಸನ್ನು ಪರಮಾತ್ಮನ ಕಡೆಗೆ ತಿರುಗಿಸಿದೊಡನೆಯೇ ವಿಷಯಸುಖಾಭಿಲಾಷೆಯು ಹೆಸರಿಲ್ಲದೆ ಓಡಿಹೋಗುವುದು. ಇನ್ನು ಈ ಮಕ್ಕಳಾಟವು ಸಾಕು" ಎಂದು ನುಡಿದು, ತನ್ನ ಮಗನಾದ ಪೂರುವನ್ನು ಬಳಿಗೆ ಕರೆದು, —'ಮಗೂ, ನಿನ್ನ ದೇಹಸೌಖ್ಯವನ್ನು ಲೇಶಮಾತ್ರವೂ ಗಮನಿಸದೆ, ನನ್ನ ಸೌಖ್ಯಕ್ಕಾಗಿ ಅಪೂರ್ವತ್ಯಾಗ ಮಾಡಿದ ನಿನ್ನ ವಿಷಯದಲ್ಲಿ ಅಧಿಕ ತೃಪ್ತನಾಗಿದ್ದೇನೆ. ಇಗೋ, ನಿನ್ನೀ ಯೌವನದೊಂದಿಗೆ ರಾಜ್ಯವನ್ನೂ ವಹಿಸಿಕೊಡುತ್ತಲಿದ್ದೇನೆ. ತೆಗೆದುಕೋ! ಅಖಂಡ ಯೌವನದಿಂದಲೂ, ದಿವ್ಯಾರೋಗ್ಯಭಾಗ್ಯದಿಂದಲೂ ಭೂಮಿಯನ್ನು ಬಹುಕಾಲ ಧರ್ಮದಿಂದ ಪಾಲಿಸಿಕೊಂಡು, ಸಕಲವಿಧ ಶ್ರೇಯಸ್ಸುಗಳನ್ನೂ ಹೊಂದುವವನಾಗು" ಎಂದು ಆಶೀರ್ವದಿಸಿದನು. ಮಿಕ್ಕ ನಾಲ್ವರು

ಮಕ್ಕಳಿಗೂ, ಗಡಿನಾಡುಗಳನ್ನು ಕೊಟ್ಟು, ಪೂರುವಿಗೆ ಅಧೀನರಾಗಿರು ವಂತೆ ಕಟ್ಟುಮಾಡಿದನು. ಅವರಲ್ಲಿ ಯದುವಿನ ವಂಶದಲ್ಲಿ ಹುಟ್ಟಿದ ವರು ಯಾದವರೆನಿಸಿಕೊಂಡರು. ತುರ್ವಸುವಿನ ವಂಶದವರು ತುರುಷ್ಕರೆನ್ನಿಸಿ ಕೊಂಡರು. ದೃಹ್ಯನ ವಂಶದವರು ಭೋಜರೆನ್ನಿಸಿದರು. ಅನುವೆಂಬವನ ವಂಶೀಕರು ಮೊಗಲರೆನ್ನಿಸಿಕೊಂಡರು. ಪೂರುವು ಪ್ರಪಂಚಕ್ಕೇ ಅಪೂರ್ವ ವೆನಿಸುವ ಈ ಬಗೆಯ ವಿನಿಮಯರೀತಿಯಿಂದ ಪುನಃ ತನ್ನ ಯೌವನವನ್ನು ಗಳಿಸಿ ವಿವಾಹಿತನಾಗಿ ಧರ್ಮದಿಂದ ರಾಜ್ಯವಾಳಿಕೊಂಡಿದ್ದನು.

# ಉ ಪ ಸಂ ಹಾ ರ

ವಿವೇಕಯುಕ್ತನಾಗಿ, ವಿಷಯಸುಖಾಭಿಲಾಷೆಯಿಂದ ವಿಮುಖನಾದ ಯಯಾತಿರಾಜನು ದೇವಯಾನೆ ಶರ್ಮಿಷ್ಠೆಯರೊಂದಿಗೆ ವಾನಪ್ರಸ್ಥಾಶ್ರಮ ಸ್ವೀಕಾರಮಾಡಿ, ಜಿತೇಂದ್ರಿಯನಾಗಿ ಅಗ್ನಿಹೋತ್ರಾದಿ ವಿಧ್ಯುಕ್ತ ಕ್ರಿಯೆ ಗಳನ್ನು ಮಾಡುತ್ತ ಕಂದಮೂಲಫಲಾದಿಗಳನ್ನು ಭಕ್ಷಿಸಿಕೊಂಡು, ಮುಂದೆ ಕ್ರಮವಾಗಿ ಪರ್ಣಾಹಾರ ಜಲಾಹಾರ ವಾಯ್ವಾಹಾರ ನಿರಾಹಾರಗಳಿಂದ ದೇಹವನ್ನು ದಂಡಿಸಿ ಯೋಗಸಿದ್ಧಿಯನ್ನು ಪಡೆದು ಸ್ವರ್ಗಲೋಕವನ್ನೈದಿ ದನು. ಆತನ ಇಬ್ಬರು ಪತ್ನಿಯರೂ ತಮ್ಮ ಆ ಪತಿಯನ್ನು ಅನುಸರಿಸಿ ನಡೆದು ಸದ್ಗತಿಯನ್ನು ಹೊಂದಿದರು.

ನಮ್ಮ ಕಥಾನಾಯಿಕೆಯಾದ ದೇವಯಾನೆಯು ಯಾವುದೊಂದು ಕೃತಿಯಾಗಲಿ, ಸೀತೆ ಸಾವಿತ್ರಿ ದ್ರೌಪದಿಯರಂತೆ ಅನುಕರಣೀಯ ಸದ್ಗುಣ ವನ್ನು ಗೊತ್ತಾಗಿ ಪ್ರಕಟಿಸಲಾರದಾದರೂ, ಇದರಿಂದ ಸ್ತ್ರೀಯರಲ್ಲಿ ಅವಿ ಚಾರ ಪ್ರೇಮ, ಮುಂಗೋಪ, ಪತಿಗಿಂತಲೂ ತೌರುಮನೆಯವರೇ ಹೆಚ್ಚೆಂದು ತಿಳಿದಿರುವ ದುರಭಿಮಾನ, ಇತರರಿಗಿಂತಲೂ ನಾನು ಹೆಚ್ಚೆಂಬ ದುರ್ಭಾವನೆ ಈ ಮುಂತಾದ ಗುಣಗಳಿದ್ದರೆ ಸಂಸಾರದಲ್ಲಿ ಎಂತೆಂತಹ ಪ್ರಮಾದಗಳು ಸಂಭವಿಸುವುವೆಂಬುದನ್ನು ಗ್ರಹಿಸಬಹುದು. ಅಭಿವೃದ್ಧಿಗೆ ಉತ್ತಮ ಗುಣವನ್ನು ಅನುಕರಿಸಿ ನಡೆವುದು ಎಷ್ಟು ಆವಶ್ಯಕವೋ, ಅಧಮ ಗುಣವನ್ನು ನಿರಾಕರಿಸುವುದೂ ಅಷ್ಟೇ—ಅಲ್ಲ ಅದಕ್ಕಿಂತಲೂ ಹೆಚ್ಚು ಆವ ಶ್ಯಕವಾಗಿದೆ. ಆದುದರಿಂದ ಕರ್ಣಾಟಕ ಸ್ತ್ರೀಯರೂ, ಬಾಲಿಕೆಯರೂ, ಅಸಾಧುವೆಂಬಂತಹ ಈ ಬಗೆಯ ದುರ್ಗುಣಗಳನ್ನು ದೂರೀಕರಿಸಿ, ಹರ್ಷ ಪ್ರೇಮಸುಖಗಳಿಂದ ತಮ್ಮ ಉಭಯಗೃಹಗಳನ್ನೂ ಬೆಳಗಿ ಭೂತಲಸ್ವರ್ಗ ಗಳನ್ನಾಗಿಸಲಿ.

ತಥಾಸ್ತು

ಶ್ರೀರಾಮಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ
## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ: —**

ರಾಜಾ ಸರ್ ಟಿ. ಮಾಧವರಾಯರು ಮೂರು ಸಂಸ್ಥಾನಗಳಲ್ಲಿ ಮಂತ್ರಿ ಪದವಿಯನ್ನು ವಹಿಸಿ, ಆಯಾ ಸಂಸ್ಥಾನಗಳ ಆಡಳಿತಗಳನ್ನು ಉತ್ತಮಸ್ಥಿತಿಗೆ ತಂದು, ಭಾರತದೇಶದಲ್ಲಿ ರಾಜ್ಯಕಾರ್ಯಭಾರವನ್ನು ವಹಿಸಿದ ವ್ಯಕ್ತಿಶ್ರೇಷ್ಠರ ತರಗತಿಯಲ್ಲಿ ಸುಪ್ರಸಿದ್ಧರೆನ್ನಿಸಿದವರು. ಇವರು ಮಂತ್ರಿಪದವನ್ನು ವಹಿಸುವುದಕ್ಕೆ ಮುಂಚೆ, ಕೇವಲ ಅವ್ಯವಸ್ಥಿತ ಸ್ಥಿತಿಯಲ್ಲಿದ್ದು ದಂಗೆ ದರೋಡೆ, ಕೊಲೆ ಕಳವು ಮುಂತಾದುವುಗಳಿಂದಲೂ, ಅಂತಃಕಲಹ, ಪ್ರಯಾಣದ ಅನಾನುಕೂಲತೆ ಮುಂತಾದುವುಗಳಿಂದಲೂ ಅನಾಗರಿಕರ ರಾಜ್ಯಭಾರವೋ ಎಂಬಂತಿದ್ದ ಆ ಮೂರು ಸಂಸ್ಥಾನಗಳಲ್ಲೂ ಈ ಮಹನೀಯರು ದುಷ್ಟರ ಹುಟ್ಟಡಗಿಸಿ, ಶಿಷ್ಟರನ್ನು ಪ್ರೋತ್ಸಾಹಿಸಿ ಸಕಲವಿಧ ಅಭಿವೃದ್ಧಿ ಮಾರ್ಗಗಳನ್ನೂ ಆಚರಣೆಗೆ ತಂದು, ಪ್ರಜಾನೆಮ್ಮದಿಯನ್ನೂ ಶಾಂತಿಸಮಾಧಾನಗಳನ್ನೂ ನೆಲೆಗೊಳಿಸಿ ಕೀರ್ತಿಸಂಪನ್ನರಾದರು. ಇಂದು ತಿರುವಾಂಕೂರು, ಇಂದೂರು ಮತ್ತು ಬರೋಡಾ ಸಂಸ್ಥಾನಗಳು ಇರುವ ಉತ್ತಮಸ್ಥಿತಿಗೆ, ಬಹು ಅಂಶದಲ್ಲಿ ರಾಜಾ ಸರ್. ಟಿ. ಮಾಧವರಾಯರೇ ಕಾರಣರೆಂದರೆ ಅದು ಅತ್ಯುಕ್ತಿಯಲ್ಲ!

ರಾಜ್ಯಭಾರದ ಹೊರೆಯನ್ನು ವಹಿಸುವುದಕ್ಕೆ ಒಬ್ಬಾನೊಬ್ಬ ಮನುಷ್ಯನು, ದಪ್ಪನಾಗಿ ಉದ್ದವಾಗಿ ಆಜಾನುಬಾಹುವಾಗಿ ಕಾಮದೇವನಂತೆ ದಿವ್ಯಸುಂದರ ವಿಗ್ರಹನಾಗಿ ಇದ್ದರೆ ಅದು ತಕ್ಕ ಯೋಗ್ಯತೆಯಲ್ಲ. ಅಥವ ವಾಕ್ಚಾತುರ್ಯವುಳ್ಳವನಾಗಿ, ಹಸನ್ಮುಖಿಯಾಗಿ, ಉತ್ತಮ ವಸ್ತ್ರಧಾರಿಯೂ—ಉದಾರಿಯೂ ಆಗಿ ಸ್ತ್ರೀ ಜನರ ಮನರಂಜನೆ ಮಾಡಬಲ್ಲವನಾಗಿದ್ದರೆ ಅದು ತಕ್ಕ ಯೋಗ್ಯತೆಯಲ್ಲ! ಅಲ್ಲ, ಇಲಿಯಮೇಲೆ ಬೆಕ್ಕನ್ನೂ, ಬೆಕ್ಕಿನಮೇಲೆ ಇಲಿಯನ್ನೂ ಎತ್ತಿ. ಕಟ್ಟುವುದರಲ್ಲಿ ಕುಶಲನಾಗಿ, ಇಲಿಯ ಪಕ್ಷದಿಂದಲೂ ಬೆಕ್ಕಿನ ಪಕ್ಷದಿಂದಲೂ ಲಾಭದ್ರವ್ಯವನ್ನು ಪಡೆದು ಕಿಸೆಯನ್ನು ತುಂಬಿಸಿಕೊಳ್ಳುವುದರಲ್ಲಿ ನಿಪುಣನೆಂಬುದಾಗಲೀ ತಕ್ಕ ಯೋಗ್ಯತೆಯಲ್ಲ—ರಾಜ್ಯಭಾರವಾಹಕನು ವಿದ್ಯಾವಂತನಾಗಿರಬಹುದು, ಅಥವ ಧೈರ್ಯಶಾಲಿಯಾಗಿರಬಹುದು, ಅಥವ ಯುಕ್ತಿಚತುರನಾಗಿರಬಹುದು, ಅಥವ ಸಾಹಿತ್ಯಪ್ರೇಮಿಯಾಗಿರಬಹುದು, ಅಥವ ದೇಶಾಭಿಮಾನಿಯಾಗಿರಬಹುದು, ಅಥವ ಆತನು ಸ್ವಮತಾಭಿಮಾನಿಯೂ ಆಗಿರಬಹುದು! ಆದರೆ ಆ ಒಂದೊಂದು ಗುಣವೇ ಆತನನ್ನು ಆ ಉದ್ಯೋಗಕ್ಕೆ ಯೋಗ್ಯನೆಂದೆನ್ನಿಸ

ಲಾರವು. ಆತನಲ್ಲಿ ಈ ಎಲ್ಲಾ ಗುಣಗಳೂ ಉತ್ಕೃಷ್ಟ ಪ್ರಮಾಣದಲ್ಲಿ ಬೆರೆತಿರಬೇಕಲ್ಲದೆ, ಆತನು ನಿಷ್ಪಕ್ಷಪಾತಿಯಾಗಿರಬೇಕು. ಧರ್ಮಸೂಕ್ಷ್ಮವನ್ನರಿತವನಿರಬೇಕು. ಪ್ರಜಾಸೇವೆ ಪ್ರಭುಸೇವೆಗಳು ಪರಾತ್ಪರನ ಸೇವೆಯೇ ಎಂಬ ದೃಢಭಾವವುಳ್ಳವನಾಗಿರಬೇಕು. ಪ್ರಜಾ ಕಂಟಕಿಯಾದವನು ತನ್ನ ತಂದೆಯಾಗಿರಲಿ ಅಥವ ಮಗನಾಗಿರಲಿ ಅವನನ್ನು ಪ್ರಜಾಹಿತದೃಷ್ಟಿಯಿಂದ ಗಲ್ಲಿಗೇರಿಸಲು ಸಹ ಹಿಂದೆ ಮುಂದೆ ನೋಡದಂತಹ ನ್ಯಾಯನಿಷ್ಠನಿರಬೇಕು. ಮಂತ್ರಿಪದವನ್ನು ದ್ರವ್ಯಾಸೆಗಾಗಿಯಲ್ಲ, ಅಧಿಕಾರದ ಗೌರವ ಪ್ರತಿಷ್ಠೆಗಳಿಗಾಗಿಯಲ್ಲ, ಅಥವ ಸ್ವಜನದ ಹಿತಸಾಧನೆಗಾಗಿಯೂ ಅಲ್ಲ. – ತನ್ನ ಪಾಲನೆಗೊಳಪಟ್ಟ ಕೇವಲ ಮನುಷ್ಯರೇ ಏಕೆ, ಸಕಲ ಪ್ರಾಣಿಗಳ ಪಶುಪಕ್ಷ್ಯಾದಿಗಳ, ವೃಕ್ಷ ತಟಾಕಾದಿಗಳ ಕ್ಷೇಮ ಚಿಂತನೆಯನ್ನೂ ಅಭಿವೃದ್ಧಿಯನ್ನೂ ಗಮನಿಸಿ, ಅದನ್ನೊಂದು ಪರಮಾತ್ಮಯೋಗವೇ ಎಂದು ಭಾವಿಸಿ, ಅಹರ್ನಿಶಿ ಜಾಗ್ರತನಾಗಿದ್ದು ಶ್ರಮಿಸಲು ಯೋಗ್ಯನಾರೋ, ಅವನೇ ಆ ಶ್ರೇಷ್ಠ ಪೀಠದಮೇಲೆ ಕುಳ್ಳಿರಲು ಅರ್ಹನು. ಅನರ್ಹರು ಅಧಿಕಾರ ಪೀಠವನ್ನು ಏರಿದರೂ ದುರುಳರ ಕೈಯಲ್ಲಿ ರಾಜ್ಯಸೂತ್ರಗಳು ಸಿಕ್ಕಿದರೂ, ಪ್ರಜೆಗಳ ಧನಮಾನಪ್ರಾಣಗಳಿಗೆ ಕ್ಷೇಮವುಂಟಾಗಲಾರದು. ರಾಜ್ಯಭಾರದ ಅಧಿಕಾರವನ್ನು ವಹಿಸುವಿಕೆಯು ಮಕ್ಕಳಾಟಿಕೆಯಲ್ಲ! ಅದಕ್ಕೆ ಕ್ಷಮೆ ಇರಬೇಕು. ಹೃದಯಶಾಂತತೆಯಿರಬೇಕು. ನಿಷ್ಕಲ್ಮಷ ಮನಸ್ಕತೆಯಿರಬೇಕು. ಇಂದ್ರಿಯ ನಿಗ್ರಹವಿರಬೇಕು. ಅಪಾಯ ಸಂದರ್ಭದಲ್ಲಿ ದೃಢಮುಷ್ಟಿಯಿಂದ ಕಾರ್ಯಸಾಧನೆ ಮಾಡಲೂ,-ಓಡಿಹೋಗದಿರಲೂ ಹೃದಯದಲ್ಲಿ ಅಕ್ಷಯ ಧೈರ್ಯವಿರಬೇಕು. ಸಾಹಸಪರಾಕ್ರಮಗಳಿರಬೇಕು! ಸೌಂದರ್ಯ ಸೌಕುಮಾರ್ಯಾದಿಗಳೂ-ವಿನಯ ವಿಧೇಯತೆಗಳೂ ಅಲ್ಲಿ ಕೆಲಸಕ್ಕೆ ಬಾರವು!

ಈ ಮೇಲ್ಕಂಡ ಗುಣಗಳನ್ನು ಅಮಿತಪ್ರಮಾಣದಿಂದ ಗಳಿಸಿ, ಒಂದಲ್ಲ, ಎರಡಲ್ಲ, ಮೂರು ಸಂಸ್ಥಾನಗಳಲ್ಲಿ ಪ್ರಜಾಶಾಂತತೆಯನ್ನು ನೆಲೆಗೊಳಿಸಿ, ಪ್ರಜೆಗಳ ಧನಮಾನ ಪ್ರಾಣಗಳಿಗೆ ರಕ್ಷಣೆಯನ್ನು ತಂದಿತ್ತು, ಇಂತು ಕ್ಷೇಮದಾತರಾದ ಈ ಮಹನೀಯರ ಚರಿತ್ರೆಯು - ಮುಂದೆ ರಾಜಕೀಯ ವಿಚಾರಗಳಲ್ಲಿ ಕಣ್ಣುಬಿಡಲಿರುವ ನಮ್ಮ ಚಿಕ್ಕವರಿಗೆ ಆದರ್ಶಪ್ರಾಯವಾಗಲಾರದೆ! ಆದುದರಿಂದ ಗ್ರಂಥಮಾಲಾಭಿಮಾನಿಗಳು ಇದಕ್ಕೂ, ತಮ್ಮ ಗೃಹಗಳಲ್ಲಿ ಆಹ್ವಾನವಿತ್ತು ನಮ್ಮ ಪ್ರಕಟನ ಕಾರ್ಯವನ್ನು ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಬೆಂಗಳೂರು ನಗರ<br>
ತಾ|| ೨೫-೮-೧೯೨೮

ಇತಿ ಸುಜನ ವಿಧೇಯ,<br>
**ಯಂ. ರಾಮರಾವ್,**

ಶ್ರೀರಾಮಸಹಾಯಂ

ರಾಜಾ

# ಸರ್. ಟಿ. ಮಾಧವರಾವ್

**ಅಧ್ಯಾಯ ೧** **" ಜನನ - ವಿದ್ಯಾಭ್ಯಾಸ "**

ನಮ್ಮ ಮಾತೃಭೂಮಿಯಾದ ಈ ಭಾರತದೇಶವು ಪುರಾಣಯುಗದಲ್ಲೂ, ಈಚೆಗೆ ಚಂದ್ರಗುಪ್ತ ಅಶೋಕ ಪೃಥ್ವೀರಾಜ ಪ್ರತಾಪಸಿಂಹ ಮುಂತಾದ ಕ್ಷತ್ರಿಯ ವೀರರು ಆಳುತ್ತಿದ್ದ ಚಾರಿತ್ರಿಕ ಯುಗದಲ್ಲೂ, ಸುಸ್ಥಿತಿ-ಸುವ್ಯವಸ್ಥಿತ ರೀತಿಗಳಲ್ಲಿ ಇದ್ದುದಕ್ಕೆ ಕಾರಣವಿಲ್ಲದೆ ಇಲ್ಲ.—ಆ ಕಾಲದಲ್ಲಿದ್ದ ರಾಜ್ಯಾಧಿಪತಿಗಳು, ಸ್ವಯಂಶಕ್ತರೂ, ಪ್ರಜಾ ಕ್ಷೇಮವನ್ನೇ ಮುಖ್ಯವೆಂಬುದಾಗಿಯೂ, ಪ್ರಜಾಸೇವೆಯನ್ನು - ಔಪಚಾರಿಕವಾಗಿಯಲ್ಲ, ನಿಶ್ಚಯವಾಗಿಯೂ ಪರಮಾತ್ಮನ ಸೇವೆಯೆಂಬುದಾಗಿಯೂ ತಿಳಿದಿದ್ದರು. ರಾಜ್ಯಭಾರವೆಂಬುದನ್ನು ತಮ್ಮ ಸುಖೋಪಭೋಗಸಾಧನವೆಂದು ಅವರು ತಿಳಿದಿರಲಿಲ್ಲ. ರಾಜ್ಯದ ಸುವ್ಯವಸ್ಥೆಗೆ, ಯಾವಯಾವ ಜನರು ಯಾವಯಾವ ಉದ್ಯೋಗ ಮಾಡಿದರೆ, ಸಹಾಯಕವಾಗಿರುವುದೆಂಬುದನ್ನು ತಿಳಿದು ಆಯಾ ಕೆಲಸಕ್ಕೆ ಆಯಾ ಜನಗಳನ್ನು ನಿಯಮಿಸಿ ಅವರಿಂದ ಆಯಾ ಕಾರ್ಯಗಳನ್ನು ನಿರ್ವಾಹಗೊಳಿಸುತ್ತಿದ್ದುದರಿಂದ, ಆ ಕಾಲದಲ್ಲಿ ಸಕಲ ಕಾರ್ಯಗಳೂ ಸುಲಲಿತ ರೀತಿಯಿಂದ ಸಾಗುತ್ತಿದ್ದುವು. ದೇಶವೂ ಸಕಲ ವಿಧಗಳಲ್ಲೂ ಸುಭಿಕ್ಷವೆನ್ನಿಸಿದ್ದಿತು.

ದೇಹವು ರುಂಡ, ಮುಂಡ, ಕೈಕಾಲುಗಳು ಎಂಬ ವಿಭಾಗಗಳಿಂದ ಕೂಡಿದೆಯಷ್ಟೆ! ರುಂಡದಲ್ಲಿ, ಮೆದುಳು, ಕಣ್ಣುಗಳು, ಕಿವಿಗಳು ಬಾಯಿ ಮೂಗುಗಳೂ, ಮುಂಡದಲ್ಲಿ ಹೃದಯ, ಶ್ವಾಸಕೋಶಗಳು - ಉದರ ಶುದ್ಧೀ ಜನಕಾಂಗಗಳೂ ಇವೆ. ಇವುಗಳಲ್ಲದೆ ಕೈಗಳೂ ಕಾಲುಗಳೂ ಇವೆ.

ಇವಿಷ್ಟೂ ಸೇರಿ ಒಂದು ದೇಹವೆಂದಾಗಿದೆ. ಇವುಗಳಲ್ಲಿ ಒಂದನ್ನು ಅಧಿಕವೆಂದಾಗಲೀ ಮತ್ತೊಂದನ್ನು ಕನಿಷ್ಟವೆಂದಾಗಲೀ ಹೇಳಲಾಗದು. ಅಥವ ಒಂದು ಅಂಗವು ದೇಹಸೌಖ್ಯಕ್ಕೆ ಆವಶ್ಯಕವೆಂದಾಗಲೀ ಮತ್ತೊಂದು ಅಂಗವು ಅನಾವಶ್ಯಕವೆಂದಾಗಲೀ ಹೇಳಲೂ ಸಾಧ್ಯವಿಲ್ಲ. ದೇಹಸೌಖ್ಯಕ್ಕೆ ದೇಹದ ಸಮಸ್ತ ಅಂಗಗಳೂ ಅವುಗಳಿಗೆ ಉಕ್ತವಾದ - ಸ್ವಾಭಾವಿಕವಾದ ಕರ್ತವ್ಯಗಳನ್ನು ಮಾಡಲೇಬೇಕು. ಯಾವುದೊಂದು ಚಿಕ್ಕ ಅಂಗವು ತನ್ನ ಕರ್ತವ್ಯವನ್ನು ಮಾಡದಿದ್ದರೂ ಅದರಿಂದ ಆದ್ಯಂತ ದೇಹವೇ ಕಷ್ಟಕ್ಕೀಡಾಗುವುದು ತಪ್ಪದು; ಅಲ್ಲವೆ! ಒಂದು ದೇಹದ ವಿಚಾರದಲ್ಲಿ ಯಾವ ಕ್ರಮವು ಸತ್ಯವೆನ್ನಿಸುವುದೋ, ರಾಜ್ಯದ ವಿಷಯದಲ್ಲೂ ಆ ವಿಚಾರವೇ ಸತ್ಯವೆನ್ನಿಸುವುದು - ಎನ್ನಿಸಬೇಕು! ದೇಹದ ಭಾಗವೊಂದು ತನ್ನ ಕೆಲಸ ಮಾಡದಿದ್ದರೆ, ದೇಹಕ್ಕೆ ಹೇಗೆ ಅನಾರೋಗ್ಯವು ಪ್ರಾಪ್ತವಾಗುವುದೋ, ರಾಜ್ಯದ ಒಂದು ಅಂಗವಾದ ಸೇವಕ ವರ್ಗವು ತನ್ನ ಕೆಲಸವನ್ನು ಮಾಡದಿದ್ದರೆ, ರಾಜ್ಯಕ್ಕೂ ಹಾಗೆಯೇ ಅನಾರೋಗ್ಯವು ಪ್ರಾಪ್ತಿಸುವುದು. ಇದು ದೇಹವೆಂಬ ರಾಜ್ಯ - ಅದು ರಾಜ್ಯವೆಂಬ ದೇಹ; ಅಷ್ಟೆ!

ದೇಹದಲ್ಲಿ ಕೈಗಳು ಮಾಡುವ ಕೆಲಸಗಳನ್ನು ಕಾಲುಗಳಿಂದ ಮಾಡಿಸತೊಡಗಿದವನನ್ನು ನೋಡಿದರೆ ನಾವು ಅಪಹಾಸ್ಯಮಾಡಿ ನಗುವೆವಲ್ಲವೆ! ಅಥವ ಕೈಗಳಿಂದ ನಡೆದಾಡತೊಡಗುವವನನ್ನೂ, ತುತ್ತನ್ನು ಬಾಯಿಯಲ್ಲಲ್ಲದೆ ಕಿವಿಯಲ್ಲಿ ಹಾಕತೊಡಗುವವನನ್ನೂ, ಕಣ್ಣುಗಳಿಂದ ಶ್ವಾಸ ತೆಗೆದುಕೊಳ್ಳುವೆನೆಂದು ಪ್ರಯತ್ನಿಸಿ ಮೂಗುಬಾಯಿಗಳನ್ನು ಮುಚ್ಚಿಕೊಳ್ಳುವವನನ್ನೂ ನಾವು ಏನೆಂದು ಕರೆಯುವೆವು! ಕಣ್ಣುಗಳು ಮಾಡುವ ಕೆಲಸವನ್ನು ಮೂಗು ಮಾಡಲು ಸಾಧ್ಯವೆಂದು ಯಾವ ಹುಚ್ಚನೂ ಹೇಳಲಾರನಲ್ಲವೆ! ನಿಜ. ಕಿವಿಗಳಿಂದ ಊಟಮಾಡಲೂ ಬಾಯಿಯಿಂದ ಕೇಳಲೂ ಸಾಧ್ಯವೆಂದು ಯಾವ ಹೆಡ್ಡನೂ ಊಹಿಸಲಾರನು. ದೇಹವನ್ನು ಸೃಷ್ಟಿಸಿದಾಗಲೇ ಸೃಷ್ಟಿಕಾರನು, ದೇಹದ ಈ ಒಂದೊಂದು ಅಂಗವೂ ಗೊತ್ತಾದ ಒಂದೊಂದು ಕೆಲಸವನ್ನು ಮಾಡಬೇಕೆಂದು ನಿಯಮಿಸಿದ್ದಾನೆ. ಅದು ಎಂದಿಗೂ ಬದಲಾಗಲು ಸಾಧ್ಯವಿಲ್ಲ. ಹಾಗೊಂದುವೇಳೆ ಬಲವಂತವಾಗಿ ಬದಲಿಸುವುದಾದರೆ, ಅವ್ಯವಸ್ಥ ಸ್ಥಿತಿಯು ತಪ್ಪದೆ ಪ್ರಾಪ್ತಿಸುವುದು.

ಹಾಗೆಯೇ ರಾಜ್ಯಾಂಗದಲ್ಲೂ ಬುದ್ಧಿಶಕ್ತಿಯಿಂದ ಎಂದರೆ ಮೆದುಳಿನ ಬಲದಿಂದ ಮತ್ತು ಸೂಕ್ಷ್ಮಾಂಗಗಳಿಂದ ನಡೆಯಬೇಕಾದ ಕೆಲಸಗಳು ಕೆಲವುಂಟು. ಕೈಕಾಲುಗಳ ಕಷ್ಟದಿಂದ ಸಾಧಿಸಬೇಕಾದ ಕೆಲಸಗಳು ಕೆಲವುಂಟು! ಕೈಗಳಿಂದಲೇ ಆದರೂ ದೇಹಕ್ಕೆ ಹೆಚ್ಚು ಕಷ್ಟವಿಲ್ಲದೆ ಮಾಡಬಹುದಾದ ಬರೆವಣಿಗೆ ಚಿತ್ರಲೇಖನ ಮುಂತಾದ ಕೆಲಸಗಳು ಕೆಲವುಂಟು! ಅಲ್ಲದೆ ಕೈಗಳಿಂದ ಬಹು ಕಷ್ಟಪಟ್ಟು ಮಾಡಬೇಕಾದ, ಮತ್ತು, ಕಾಲುಗಳಿಂದ ಓಡಿ-ಎದ್ದು ಕುಳಿತು ಮಾಡಬೇಕಾದ ಅತಿ ಕಷ್ಟಸಾಧ್ಯ ಕೆಲಸಗಳೂ ಉಂಟು! ಹೀಗೆ ರಾಜ್ಯಾಂಗಕ್ಕೆ ಸಂಬಂಧಿಸಿದ ವಿವಿಧ ಉದ್ಯೋಗಗಳು ವಿವಿಧ ಯೋಗ್ಯತೆಯ ಜನರಿಂದ ನಡೆಯಬೇಕಾಗಿರುತ್ತದೆ. ಸೂಕ್ಷ್ಮಬುದ್ಧಿಯುಳ್ಳವರೂ, ಚುರುಕುತನವುಳ್ಳವರೂ, ಸೋಮಾರಿತನವಿಲ್ಲದವರೂ, ವಿದ್ಯಾಶಕ್ತಿ ಯೋಚನಾಶಕ್ತಿಗಳುಳ್ಳವರೂ, ಧೈರ್ಯಸ್ಥೈರ್ಯಗಳನ್ನು ಗಳಿಸಿದವರೂ, ನಿಷ್ಪಕ್ಷಪಾತ, ನಿಷ್ಕಾಪಟ್ಯ, ಸತ್ಯಸಂಧತೆ ಮುಂತಾದ ಗುಣಗಳನ್ನುಂಟಾದವರೂ ಅಧಿಕಾರ ವರ್ಗದಲ್ಲಿದ್ದು, ಈ ಯೋಗ್ಯತೆಗಳನ್ನು ಕಡಮೆ ಪ್ರಮಾಣದಿಂದ ಗಳಿಸಿದ್ದ ಮಿಕ್ಕವರನ್ನು, ತಮ್ಮ ಆಜ್ಞೆಯಿಂದ ಯೋಗ್ಯ ಮಾರ್ಗದಲ್ಲಿ ನಡೆಯಿಸುವುದಾದರೆ, ರಾಜ್ಯವಿಚಾರವು ಸುಖವಾಗಿ ಸಾಗದೆ ಇದ್ದೀತೆ! ಆದರೆ, ಎರಡುಕಾಲು ಎರಡು ಕಣ್ಣುಗಳು ಇವೆಯೆಂದೂ, ಉದ್ದವಾಗಿ ದಪ್ಪವಾಗಿ ಇದ್ದಾನೆಂದೂ, ಅವನ ರಕ್ತವೂ ಕೆಂಪಾಗಿಯೇ ಇದೆಯೆಂದೂ, ಯಾವನೊಬ್ಬನನ್ನು ಅಧಿಕಾರ ಸ್ಥಾನದಲ್ಲಿಟ್ಟರೆ, ಅವನಿಂದ ಪ್ರಜಾಪಾಲನೆಗೆ ಬದಲಾಗಿ ಪ್ರಜಾಪೀಡೆಯೇ ಉಂಟಾಗುವುದರಲ್ಲಿ ಸಂಶಯವಿಲ್ಲ.—ಬಲವಾದ ಕೈಕಾಲುಗಳಿದ್ದು ವಿಸ್ತಾರವಾದ ಎದೆಯಿದ್ದು ಆಜಾನುಬಾಹುವಾಗಿದ್ದು ಒಬ್ಬನು ಸಾಧಿಸಬೇಕಾದ ಕೆಲಸದ ಸ್ವಭಾವವೇ ಬೇರೆ! ಈ ಅಂಗಗಳು ಅಷ್ಟು ಪ್ರಮಾಣದಿಂದ ವೃದ್ಧಿಗೊಳ್ಳದಿದ್ದರೂ ಬುದ್ಧಿಶಕ್ತಿಯೊಂದು ಮಾತ್ರ ಬಲಗೊಂಡು ತನ್ಮೂಲಕ ಬೇರೊಬ್ಬನು ಸಾಧಿಸತಕ್ಕ ಕೆಲಸದ ಸ್ವಭಾವವೇ ಬೇರೆ! ಯುಕ್ತಿಯಿಂದ ಕಾರ್ಯಸಾಧನೆ ಮಾಡುವುದು ಮೆದುಳಿನ ಸ್ವಭಾವ, ಶಕ್ತಿಯಿಂದ ಕಾರ್ಯಸಾಧನೆ ಮಾಡಲೆತ್ನಿಸುವುದು ದೇಹಶಕ್ತಿಯ ಸ್ವಭಾವ. ಯುಕ್ತಿಯಿಂದ ಬೆರೆಯದಿದ್ದರೆ ಬರೀಶಕ್ತಿಯು ಪಶುಶಕ್ತಿಯಾಗುವುದು. ಶಕ್ತಿಯ ಸಹಾಯಗೊಂಡಲ್ಲದೆ ಬರೀ ಯುಕ್ತಿಯಾದರೂ ದೇಹವಿಲ್ಲದ ಆತ್ಮ

ದಂತೆ ಕಾರ್ಯಕಾರಿಯಾಗಲಾರದು. ಮೆದುಳಿನ ಶಕ್ತಿಯು ಸಹಾಯುಗೊಳ್ಳ ದಿದ್ದರೆ ಭುಜಶಕ್ತಿಯು ಮಾರಿಗೆ ತಲೆಗೊಡುವ ಮದಿಸಿದ ಕೋಣನಂತೆ ವಧೆಗೀಡಾಗುವುದು. ಭುಜಶಕ್ತಿಯ ಸಹಾಯುವನ್ನು ಹೊಂದದಿರುವ ಬುದ್ಧಿ ಶಕ್ತಿಯಾದರೂ ಸಕಲ ಅಂಗಗಳ ಪಟುತ್ವವಿದ್ದರೂ ಕಣ್ಣು - ಕಾಲುಗಳಿಲ್ಲದ ಮನುಷ್ಯನಂತೆ ಒಂದೆಡೆ ಸುಮ್ಮನೆ ಕುಳಿತಿರಬೇಕಾಗುವುದು.

ಪೂರ್ವದಲ್ಲಿ, ಗುಣ ಮತ್ತು ಕರ್ಮಗಳನ್ನನುಸರಿಸಿ ಚತುರ್ವರ್ಣಗಳನ್ನು ಏರ್ಪಡಿಸಿದುದರಲ್ಲಿ ಪೂರ್ವಿಕರ ಉದ್ದೇಶವು, ಒಬ್ಬನನ್ನು ಉನ್ನತಸ್ಥಾನ ದಲ್ಲಿಟ್ಟು ಮತ್ತೊಬ್ಬನನ್ನು ಅಧಮನೆನ್ನಿಸಿ - ಅಥವ ಒಬ್ಬನಿಗೆ ಸಕಲ ಅಧಿ ಕಾರಗಳನ್ನೂ ಕೊಟ್ಟು ಮತ್ತೊಬ್ಬನನ್ನು ಅವನ ಗುಲಾಮಗಿರಿಗೆ ನಿಲ್ಲಿಸಿ, ಹೀಗೆ ಜನಾಂಗದಲ್ಲಿ ಭೇದಭಾವದ ಬೀಜವನ್ನು ಬಿತ್ತಿ, ತನ್ಮೂಲಕ ಅಶಾಂ ತತೆಯನ್ನು ಸ್ಥಾಪಿಸಬೇಕೆಂಬುದಾಗಿರಲಿಲ್ಲ! ಅವರ ಉದ್ದೇಶವು ಲೌಕಿಕ ವ್ಯವಹಾರವು ಸುಲಲಿತವಾಗಿ ಸಾಗಲು, ವ್ಯವಹಾರದ ವಿವಿಧ ಕಾರ್ಯಗಳಲ್ಲಿ ಶ್ರಮವಿಭಾಗ ಪದ್ಧತಿಯು ಇರಬೇಕೆಂಬುದೇ ಆಗಿದ್ದಿತು. ಜನಾಂಗದಲ್ಲಿ ಯಾರು ನಿಯತಾಹಾರ ವಿಹಾರಗಳಿಂದಲೂ, ತಪಸ್ಸು ವಿದ್ಯಾಭ್ಯಾಸ ಸದ್ವ್ಯಾ ಸಂಗ ಮುಂತಾದುವುಗಳಿಂದಲೂ ಕಾಲಕಳೆಯುವುದನ್ನು ಮೆಚ್ಚಿ, ದುಷ್ಟ ವಾಕ್ಯ, ದುರ್ಯೋಚನೆ, ದುರಾಹಾರ, ದುಸ್ಸಂಗ ಮುಂತಾದುವುಗಳನ್ನು ಕಂಡರೆ ಹೇಸುತ್ತಿದ್ದರೋ ಅವರದೇ ಒಂದು ಪಂಗಡವಾಯಿತು. ಅವರನ್ನು ಬ್ರಾಹ್ಮಣರೆಂದು ಕರೆದರು. ಯಾರು ಶೌರ್ಯ ಧೈರ್ಯ ಸಂಪನ್ನರಾಗಿ ಉದಾರಗುಣ ವಿಶಿಷ್ಟರಾಗಿ ದೇಹಬಲ ಬುದ್ಧಿಬಲಗಳನ್ನೂ, ವಿನಯವಿಧೇ ಯತೆ ಶ್ರದ್ಧಾಭಕ್ತಿಗಳನ್ನೂ, ದೇಶಾಭಿಮಾನ ಧರ್ಮಾಭಿಮಾನಗಳನ್ನೂ ಗಳಿಸಿ ಸ್ವಜನ ಸಂರಕ್ಷಣೆಗಾಗಿ ಪ್ರಾಣವನ್ನು ಕೊಟ್ಟಾದರೂ ಶತ್ರುಗಳನ್ನು ಎದುರಿಸಲು ಸಿದ್ಧರಾದರೋ ಅಂಥವರದು ಒಂದು ಪಂಗಡವಾಯಿತು. ಅವರನ್ನು ಕ್ಷತ್ರಿಯರೆಂದರು. ಯಾರು ಧನಕನಕಾದಿಗಳನ್ನು ಗಳಿಸಿ, ವ್ಯವ ಸಾಯ ವೃತ್ತಿ ಪಶುಪಾಲನೆಗಳಿಂದ ರಾಜ್ಯದ ಐಶ್ವರ್ಯವನ್ನು ರಕ್ಷಿಸಿಕೊಳ್ಳು ವುದನ್ನೂ ಅಭಿವೃದ್ಧಿಗೊಳಿಸುವುದನ್ನೂ ಮೆಚ್ಚಿದ್ದರೋ ಅಂಥವರೇ ಒಂದು ಪಂಗಡವಾದರು. ಅವರನ್ನು ವೈಶ್ಯರೆಂದು ಕರೆದರು. ಯಾರು ಸಾಕಷ್ಟು ಬುದ್ಧಿಬಲವಾಗಲೀ, ದೇಹಬಲವಾಗಲೀ, ಧನಬಲವಾಗಲೀ ಇಲ್ಲದೆ, ಎಲ್ಲಾ

ವಿಧದಲ್ಲೂ ಅಶಕ್ತರಾಗಿ ಇದ್ದರೋ ಅಂಥವರು ಸ್ವಾಭಾವಿಕವಾಗಿಯೋ ಮೇಲಿನ ವರ್ಗಗಳವರಿಗೆ ಸೇವಕರಾಗಿ ನಿಂತರು. ಇದರಲ್ಲಿ ಏನೂ ಅಸ್ವಾಭಾವಿಕವಿಲ್ಲವಲ್ಲವೆ! ಕೇವಲ ಸ್ವಾಭಾವಿಕವಾದ ಈ ವಿಭಾಗಗಳ ವಿಷಯದಲ್ಲಿ ದ್ವೇಷಭಾವವನ್ನು ವಹಿಸುವುದು, ಮೂರ್ಖತನವೂ ಮೂಢತನವೂ ಅಲ್ಲದೆ, ಅದು ತಲೆಯಲ್ಲಿ ಮೆದುಳು ಇದ್ದುದರ ಕುರುಹೆನ್ನಿಸಲಾರದು!—

ಆದರೆ ಈಗ ಕಾಲವು ಬಹು ಬದಲಾಯಿಸಿದೆ! ಮೇಲ್ಕಂಡ ವರ್ಣವಿಭಾಗಗಳು ಏರ್ಪಟ್ಟು ಅನೇಕ ಸಹಸ್ರವರ್ಷಗಳಾದುದರಿಂದ ಅವುಗಳು ಬಹುಮಟ್ಟಿಗೆ ವ್ಯತ್ಯಸ್ತವಾಗಿವೆ. ಅನೇಕ ಸಂದರ್ಭಗಳಲ್ಲಿ ನಾವು ಮಾತ್ರ ನಿಂತಿವೆಯೆಂದರೂ ಸಲ್ಲುವುದು. ಅನ್ವರ್ಥಬ್ರಾಹ್ಮಣರೇ ಆಗಲಿ, ಅನ್ವರ್ಥ ಕ್ಷತ್ರಿಯ - ಅನ್ವರ್ಥ ವೈಶ್ಯರೇ ಆಗಲೀ ಈಗ ಸಿಕ್ಕುವುದು ದುರ್ಲಭವೆಂದು ಹೇಳಿದರೆ, ಅದು ಅಪರಾಧವಲ್ಲ. ಅನೇಕ ಸಂದರ್ಭಗಳಲ್ಲಿ ಜನ್ಮಸ್ಥಳವನ್ನು ಕುರಿತು ಮೇಲ್ಕಂಡಂತೆ ವರ್ಣವಿಭಾಗ ಮಾಡುವುದಕ್ಕಿಂತಲೂ, ಯಾವನೊಬ್ಬನ ಗುಣ-ಮತ್ತು ಅವನು ಅನುಸರಿಸಿರುವ ಕರ್ಮ ಇವುಗಳಿಂದ ಅವನ ವರ್ಣವನ್ನು ನಿರ್ಧರಿಸುವುದು ಹೆಚ್ಚು ಶ್ರೇಯಸ್ಕರ. ಇದಂತಿರಲಿ-ಪೂರ್ವದಲ್ಲಿ ರಾಜನಿಗೆ, ರಾಜ್ಯಪಾಲನಾ ವಿಚಾರದಲ್ಲಿ ಸಲಹೆ ಕೊಡುವುದಕ್ಕೂ, ಪ್ರಜಾಹಿತ ಮಾರ್ಗಗಳನ್ನೂ, ಧರ್ಮಸೂಕ್ಷ್ಮಗಳನ್ನೂ ಬೋಧಿಸುವುದಕ್ಕೂ ಮಹರ್ಷಿಗಳೂ, ತಪಸ್ವಿ ಬ್ರಾಹ್ಮಣರೂ ಇರುತ್ತಿದ್ದರೆಂಬುವುದಕ್ಕೆ ಕಾರಣವನ್ನೂ ಆವಶ್ಯಕತೆಯನ್ನೂ ಪ್ರತ್ಯೇಕ ಹೇಳತಕ್ಕ ಆವಶ್ಯಕವಿಲ್ಲ. ನಿಯತಾಹಾರ, ಜಿತೇಂದ್ರಿಯತ್ವ, ರಾಗ ದ್ವೇಷರಾಹಿತ್ಯ, ತಪಸ್ಸು ಧ್ಯಾನಾದಿಗಳಿಂದ ಗಳಿಸಿದ ಹೃದಯ ಮತ್ತು ಮನಶ್ಶಾಂತತೆ ಮುಂತಾದುವುಗಳನ್ನು ತಮ್ಮ ಜೀವಿತದ ಮುಖ್ಯ ಆದರ್ಶಗಳನ್ನಾಗಿ ಉಂಟಾಗಿದ್ದವರು ಮಾಡುವ ಬೋಧನೆಯೂ ಕೊಡುವ ಸಲಹೆಯೂ, ಶಾಂತಿಸುಖ ಸಮಾಧಾನಗಳನ್ನು ಸ್ಥಾಪಿಸತಕ್ಕುದೇ ಆಗಿರುವುದೆಂಬುದರಲ್ಲಿ ಸಂದೇಹವೇನು? ತನ್ನ ಮನಸ್ಸಿನಲ್ಲೇ ಶಾಂತಿಯಿಲ್ಲದವನು ದ್ವೇಷವನ್ನಲ್ಲದೆ ಮತ್ತೇನನ್ನು ಬೋಧಿಸುವನು! ತನ್ನ ಹೃದಯದಲ್ಲೇ ತೃಪ್ತನಾಗರದವನು, ಸಂತುಷ್ಟ ಸಮಾಧಾನಗಳನ್ನು ಹೇಗೆ ಸ್ಥಾಪಿಸಲಾಗುವುದು. ಯಾವನೊಬ್ಬನು ತಾನೇ ಪಕ್ಷಪಾತ, ಪಾಪಯೋಜನೆಗಳಿಂದ ಕೂಡಿದ್ದು ಲೋಕದಲ್ಲಿ ಸಹೋದರಭಾವ, ಉದಾರತೆಗಳನ್ನು

ಬೋಧಿಸಲು ಹೇಗೆತಾನೆ ಶಕ್ತನಾಗುವನು ? ಸಾಮಾನ್ಯರಲ್ಲಿ ಒಂದುವೇಳೆ ಇಂತಹ ಗುಣಗಳಿದ್ದರೆ, ಅದು ಕೇವಲ ವ್ಯಕ್ತಿಪ್ರಶ್ನೆಯಾಗಿದ್ದು ಅವನಿಗೆ ಮೇಲನ್ನೋ ಕೇಡನ್ನೋ ಉಂಟುಮಾಡುವುದು. ಆದರೆ ಅದು, ರಾಜನಲ್ಲೂ ಬಹುಜನ ಸಮೂಹದ ಪಾಲನೆಯ ಅಧಿಕಾರವನ್ನು ವಹಿಸುವವರಲ್ಲೂ ಇರುವುದಾದರೆ ಅದರಿಂದ ರಾಜ್ಯಕ್ರಾಂತಿಯೇ ಪ್ರಾಪ್ತವಾಗದಿರದು. ಇದನ್ನು ಉದಾಹರಣಪೂರ್ವಕ ಪ್ರದರ್ಶಿಸಲು ನಮ್ಮ ಕಥಾನಾಯಕರು ಈ ಬಗೆಯ ಪ್ರಜಾಪಾಲನಾರಹಸ್ಯಗಳನ್ನು ಆದ್ಯಂತವಾಗಿ ಅರಿತು ಆ ಕಲೆಯಲ್ಲಿ ಪರಿಣರಾಗಿ ಮೂರು ಸಂಸ್ಥಾನಗಳಲ್ಲಿ ಶಾಂತಿಸುಖಸಮಾಧಾನಗಳನ್ನು ಸ್ಥಾಪಿಸುವಲ್ಲಿ ಹೇಗೆ ಶಕ್ತರಾದರು ಎಂಬುದನ್ನು ತಿಳಿಸಬೇಕಾಗಿದೆ. ಅದನ್ನು ವಾಚಕಮಹಾಶಯರು ಈ ಚಿಕ್ಕ ಪುಸ್ತಕದಲ್ಲಿ ಓದಿ ತಿಳಿಯಬಹುದು !

ಕ್ರಿಸ್ತಶಕದ ಹತ್ತೊಂಬತ್ತನೆಯ ಶತಮಾನದ ಮೊದಲನೆಯ ಪಾದಾಂಶದಲ್ಲಿ ತಿರುವಾಂಕೂರು ಸಂಸ್ಥಾನದಲ್ಲಿ ರಂಗರಾಯರೆಂಬ ಗೃಹಸ್ಥರೊಬ್ಬರು ದಿವಾನ್ ಎಂದರೆ ಅಮಾತ್ಯ ಪದವಿಯನ್ನು ಅಲಂಕರಿಸಿದ್ದರು. ಅವರ ಚಿಕ್ಕಪ್ಪಂದಿರು ರಾಯರಾಯರಾಯ ವೆಂಕಟರಾವ್ ಎಂಬುವರು ಇವರಿಗೆ ಪೂರ್ವದಲ್ಲಿ ತಿರುವಾಂಕೂರಿನ ದಿವಾನ್‌ಗಿರಿಯನ್ನೂ, ಮೈಸೂರು ಸಂಸ್ಥಾನದ ಕಮಿಷನರ ಬಳಿ ನೇಟಿವ್ ಅಸಿಸ್ಟೆಂಟ್ ಉದ್ಯೋಗವನ್ನೂ ಮಾಡಿದ್ದರು. ರಂಗರಾಯರು, ನಿಸ್ಪೃಹತೆ, ರಾಜಭಕ್ತಿ, ನಿರಲಸಿಕೆಯ ರಾಜ್ಯಾಂಗ ವಿಚಾರ ಮುಂತಾದುವುಗಳನ್ನೂ, ರಾಜ್ಯದ ಪ್ರಧಾನಾಧಿಕಾರಿಗೆ ಮುಖ್ಯವಾಗಿರಬೇಕಾದ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳನ್ನೂ ಯೋಗ್ಯ ಪ್ರಮಾಣದಿಂದ ಗಳಿಸಿ, ಪ್ರಭುಪೀಠದ ನಂಬಿಕೆಗೂ ಪ್ರೀತಿಗೂ ಆದರಕ್ಕೂ ಗೌರವಕ್ಕೂ ಪಾತ್ರರಾಗಿ ಕೀರ್ತಿಯನ್ನು ಸಂಪಾದಿಸಿದರು. ಈ ಮಹನೀಯರಿಗೆ ಪುತ್ರರಾಗಿ, ನಮ್ಮ ಕಥಾನಾಯಕರು ೧೮೨೮ ನೆಯ ಸಂವತ್ಸರದಲ್ಲಿ ಕುಂಭಕೋಣದಲ್ಲಿ ಜನಿಸಿದರು.

ತಂದೆಯು ತಿರುವಾಂಕೂರು ಸಂಸ್ಥಾನದಲ್ಲಿರುತ್ತಿದ್ದರಾದರೂ, ಚಿಕ್ಕ ಪ್ರಾಯದ ಮಾಧವರಾಯರು ವಿದ್ಯಾಭ್ಯಾಸಕ್ಕಾಗಿ ಮದರಾಸು ನಗರದಲ್ಲೇ ವಾಸಿಸಿದ್ದರು. ಪ್ರಾರಂಭ ವಿದ್ಯಾಭ್ಯಾಸವು ಅಲ್ಲಿ ಇಲ್ಲಿ ನಡೆದ ತರುವಾಯ ಉನ್ನತ ವಿದ್ಯಾಭ್ಯಾಸಕ್ಕಾಗಿ, ಮದರಾಸ್ ಹೈಸ್ಕೂಲಿಗೆ ಸೇರಿದರು. ಈಗಿನ

ಪ್ರೆಸಿಡೆನ್ಸಿ ಕಾಲೇಜೆಂಬ ವಿದ್ಯಾನಿಲಯವು ಆಗ ಮದರಾಸ್ ಹೈಸ್ಕೂಲೆಂಬ ಹೆಸರಿನಿಂದ ಒಂದು ಪ್ರೌಢ ಪಾಠಶಾಲೆಯಾಗಿತ್ತು ಮಾತ್ರ! ಆಗ ಅವರೊಂದಿಗೆ ಅಭ್ಯಾಸಮಾಡಿದ ಮಹಾವ್ಯಕ್ತಿಗಳಲ್ಲಿ ಈಗ ಯಾರೂ ಜೀವಂತರಾಗಿಲ್ಲವಾದರೂ, ನಮ್ಮ ಸಂಸ್ಥಾನದ ದಿವಾನರಾಗಿದ್ದ ರಂಗಾಚಾರ್ಲು ಯವರೂ, ಸುಪ್ರಸಿದ್ಧ ನ್ಯಾಯಮೂರ್ತಿ ಸರ್. ಟಿ. ಮುತ್ತುಸ್ವಾಮಿ ಐಯರರೂ, ತಾಂಡಾಳಂ ಗೋಪಾಲರಾವ್ ಮುಂತಾದ ಪ್ರಜ್ಞಾನಿಧಿಗಳೂ, ಯಾರ ಜ್ಞಾನವಾಹಿನಿಯಲ್ಲಿ ತಮ್ಮ ತೃಷ್ಣೆಯನ್ನಡಗಿಸಿಕೊಂಡು ಪ್ರಸಿದ್ಧಿಗೆ ಬಂದರೋ ಆ ಮಿ|| ಪೋವೆಲ್ ಎಂಬ ಗುರುಶಿರೋಮಣಿಯ ಬಳಿಯಲ್ಲೇ ಇವರೂ ವಿದ್ಯಾಭ್ಯಾಸ ಮಾಡಿದರು. ಮಾಧವರಾಯರು ವಿದ್ಯಾರ್ಥಿ ದೆಸೆಯಲ್ಲಿ ಸೂಕ್ಷ್ಮಗ್ರಹಣಶಕ್ತಿ, ಚುರುಕುತನ ಮುಂತಾದ ಗುಣಗಳಿಗೆ ಹೆಸರಾಗಿದ್ದರು. ಗಣಿತವಿದ್ಯೆ, ವಿಜ್ಞಾನಶಾಸ್ತ್ರಗಳಲ್ಲಿ ಅವರಿಗೆ ಪ್ರೀತಿ ಬಹಳ. ತಮ್ಮ ಗುರುವಾದ ಮಿ|| ಪೋವೆಲ್ ಸಾಹೇಬನಿಗೆ ಪ್ರೀತಿಪಾತ್ರರಾಗಿದ್ದು, ಆತನ ಮನೆಯ ಮಹಡಿಯಮೇಲೆ ಆಡುತ್ತಾಡುತ್ತ ಅವರು ಜ್ಯೋತಿಶ್ಚಕ್ರಗಳ ಗತಿಗಳನ್ನು ಕಲಿತು ಆ ಶಾಸ್ತ್ರದಲ್ಲಿ ವಿಶೇಷ ಜ್ಞಾನವನ್ನು ಸಂಪಾದಿಸಿದರು. ಮಾತ್ರವಲ್ಲ, ಟೊಳ್ಳಾದ ಗಳುವಿನ ತುಂಡುಗಳನ್ನೂ ಭೂತಗನ್ನಡಿಯ ಚೂರುಗಳನ್ನೂ ಉಪಯೋಗಿಸಿ, ಮೈಕ್ರೋಸ್ಕೋಪು, ಟೆಲಿಸ್ಕೋಪುಗಳೆಂಬ ಯಂತ್ರ ವಿಶೇಷಗಳನ್ನು ರಚಿಸಿ ಅವರು ಆತನನ್ನು ಆನಂದಗೊಳಿಸುವರು. ೧೮೪೬ ನೆಯ ಸಂವತ್ಸರದ ವೇಳೆಗೆ ಆ ಪಾಠಶಾಲೆಯಲ್ಲಿ ಅವರ ವಿದ್ಯಾಭ್ಯಾಸವು ಮುಗಿದು, ಅವರು ಆಗಿನ ಪದ್ಧತಿಯಂತೆ ಪದವೀಧರರಾಗಿ, ವಿಶೇಷ ಗೌರವಕ್ಕೆ ಪಾತ್ರರೆನ್ನಿಸಿದರು.



## ಅಧ್ಯಾಯ ೨ "ಅಮಾತ್ಯಪದವಿ"

ಹೀಗೆ ಕ್ರಮವಿದ್ಯಾಭ್ಯಾಸವು ಮುಗಿಯಿತೆಂದೊಡನೆಯೇ, ಮಾಧವರಾಯರು, ತಮ್ಮ ಸ್ವಸ್ಥಳಕ್ಕೆ ಹೊರಡಬಹುದಿತ್ತು. ಆದರೆ, ತನ್ನ ವಿದ್ಯಾರ್ಥಿಯ ಗುಣಾತಿಶಯಗಳನ್ನೂ ಬುದ್ಧಿಶಕ್ತಿಯ ಆಳವನ್ನೂ ಅರಿತಿದ್ದ ಮಿ||

ಪೋವೆಲ್ ಸಾಹೇಬನು, ಅವರನ್ನು ಹೊರಕ್ಕೆ ಬಿಡದೆ, ತನ್ನ ಪಾಠಶಾಲೆಯಲ್ಲೇ ಗಣಿತಶಾಸ್ತ್ರ ಮತ್ತು ಭೌತಿಕ ವಿಜ್ಞಾನಶಾಸ್ತ್ರಗಳ ಬೋಧಕರನ್ನಾಗಿ ನಿಯಮಿಸಿ ಇಟ್ಟುಕೊಂಡನು. ಮುಂದೆ ಕೆಲವು ದಿನಗಳೊಳಗಾಗಿಯೇ ಅವರಿಗೆ, ಅಕೌಂಟೆಂಟ್ ಜನರಲ್‌ರವರ ಕಚೇರಿಯಲ್ಲಿ ಒಂದು ಉದ್ಯೋಗ ದೊರೆತುದರಿಂದ ಶಾಲಾ ಉದ್ಯೋಗವನ್ನು ಬಿಡಬೇಕಾಯಿತು. ಅವರು ಆ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಕಾಲದಲ್ಲಿ, ತಿರುವಾಂಕೂರು ಸಂಸ್ಥಾನದ ರಾಜಕುಮಾರರಿಗೆ ವಿದ್ಯಾಗುರುಗಳೊಬ್ಬರ ಆವಶ್ಯಕತೆ ಬಿದ್ದಿತು. ನಮ್ಮ ಕಥಾನಾಯಕರು, ಆ ಸಂಸ್ಥಾನದ ಒಬ್ಬ ದಿವಾನರ ಮಕ್ಕಳೂ, ಹಿಂದಿನ ಮತ್ತೊಬ್ಬ ದಿವಾನರ ಮೊಮ್ಮಕ್ಕಳೂ ಆಗಿದ್ದುದರಿಂದ ಆ ಸ್ಥಾನವು ಅವರ ಪಾಲಿಗೆ ಬರುವುದು ಸ್ವಾಭಾವಿಕವೇ ಆಗಿತ್ತು. ತಿರುವಾಂಕೂರಿಗೆ ಈ ಬಗೆಯ ಅವರ ಪ್ರವೇಶವು, ಮುಂದೆ ಬಹುಕಾಲ ಅವರು ಮಾಡಿದ ದೇಶೀಯ ಸಂಸ್ಥಾನಗಳ ಸೇವೆಗೆ ಮೊದಲನೆಯ ಮೆಟ್ಟಿಲೆನ್ನಿಸಿತು. ಸುಪ್ರಸಿದ್ಧ ಪಂಡಿತರೂ, ಪ್ರಜಾಹಿತೈಷಿ ಪ್ರಭುವರ್ಯರೂ ಎಂದು ಕೀರ್ತಿಪ್ರತಿಷ್ಠೆಗಳನ್ನು ಗಳಿಸಿದ, ಸ್ವರ್ಗೀಯ ಶ್ರೀ ರಾಜಾ ರಾಮವರ್ಮರೇ ನಮ್ಮ ಕಥಾನಾಯಕರ ಶಿಷ್ಯರು. ಆಧುನಿಕ ಕಾಲದಲ್ಲಿ ತಿರುವಾಂಕೂರು ಸಂಸ್ಥಾನದ ಗಾದಿಯನ್ನು ಏರಿದ ಮಹಾರಾಜರಲ್ಲೆಲ್ಲಾ ಶ್ರೀ ರಾಮವರ್ಮರು ಸರ್ವಶ್ರೇಷ್ಠರೆಂಬುದು ನಿರ್ವಿವಾದವು. ರಾಜಕುಮಾರ ರಾಜಾ ರಾಮವರ್ಮ ರತ್ನವನ್ನು ಯೋಗ್ಯ ರೀತಿಯಿಂದ ಸಾಣೆಗೆ ಕೊಟ್ಟು. ಆ ಪ್ರಭುಪೀಠಕ್ಕೆ ಯೋಗ್ಯವಾದ ಗುಣ ನಡತೆ ಸಾಮರ್ಥ್ಯಗಳನ್ನು ಅದರಲ್ಲಿ ಉಂಟುಮಾಡಿದ ಕೀರ್ತಿಯು ಶ್ರೀ ಮಾಧವರಾಯರಿಗೆ ಸೇರತಕ್ಕದ್ದಿದೆ. ಹೀಗೆ ರಾಜಕುಮಾರರ ಶಿಕ್ಷಣೋದ್ಯೋಗದಲ್ಲಿ ನಾಲ್ಕು ವರ್ಷಕಾಲ ಕೆಲಸ ಮಾಡುವವೇಳೆಗೆ, ಅವರಿಗೆ ದಿವಾನರ ಕಚೇರಿಯ ಭೂಕಂದಾಯ ಶಾಖೆ (ರೆವಿನ್ಯೂ ಇಲಾಖೆ)ಯಲ್ಲೊಂದು ಉದ್ಯೋಗ ದೊರೆಯಿತು.

ಸೂಕ್ಷ್ಮಮತಿಯೂ, ಕಾರ್ಯನಿರ್ವಹಣ ಸಾಮರ್ಥ್ಯವೂ ಋಜುವರ್ತನವೂ ಇದ್ದವರು ಉದ್ಯೋಗದಲ್ಲಿ ಶೀಘ್ರಕಾಲದಲ್ಲೇ ಮೇಲಕ್ಕೆ ಮೇಲಕ್ಕೆ ಏರುತ್ತಿದ್ದರೆ ಅದರಲ್ಲಿ ಆಶ್ಚರ್ಯವೇನಿದೆ! ಶ್ರೀ ಮಾಧವರಾಯರು ತಮ್ಮ ಶಕ್ತಿಸಾಮರ್ಥ್ಯಗಳ ಫಲವಾಗಿ ಮುಂದೆ ಕೆಲ ವರ್ಷಗಳಲ್ಲೇ ಆ ಕಚೇರಿಯ

ದಿವಾನ್ ಪೇಷ್ಕಾರ್ ಎಂಬ ಉನ್ನತೋದ್ಯೋಗವನ್ನು ಹೊಂದಿದರು. ಆ ಉದ್ಯೋಗದಲ್ಲಿದ್ದು ಅವರು ಆ ಸಂಸ್ಥಾನದ ದಕ್ಷಿಣ ಭಾಗದ ಎರಡು ಜಿಲ್ಲೆಗಳಲ್ಲಿದ್ದ ಅಶಾಂತತೆಯನ್ನೂ ಸಾಮಾಜಿಕ ಮೌಢ್ಯಭಾವ-ದಬ್ಬಾಳಿಕೆಗಳನ್ನೂ ಅಡಗಿಸಿ ಸುಖಶಾಂತತೆಗಳನ್ನು ಸರ್ವತ್ರ ಸ್ಥಾಪಿಸುವುದರಲ್ಲಿ ಪ್ರಕಟಿಸಿದ ಧೈರ್ಯವನ್ನೂ ರಾಜನೀತಿಜ್ಞತೆಯನ್ನೂ ಮೆಚ್ಚಿಕೊಂಡು, ಜ್ಞಾನ್ ಬ್ರೂಸ್ ನಾರ್ಟನ್ ಸಾಹೇಬನು ಹೀಗೆಂದು ವರ್ಣಿಸುತ್ತಾನೆ.—"ಒಂದೇ ಒಂದು ವರ್ಷದ ಅಲ್ಪ ಕಾಲಾವಧಿಯಲ್ಲೇ ಶ್ರೀ ಮಾಧವರಾಯರು ಈ ಜಿಲ್ಲೆಗಳಲ್ಲಿದ್ದ ಅತಿಕ್ರಮಗಳನ್ನು ನಿವಾರಿಸಿ ಆಡಳಿತವನ್ನು ಕ್ರಮ ಸ್ಥಿತಿಗೆ ತಂದಿದ್ದಾರೆ. ಯಾರೊಬ್ಬರ ಪ್ರಸಾದಕ್ಕಾಗಲೀ ಪ್ರಕೋಪಕ್ಕಾಗಲೀ ಭಯಪಡದೆ ಸತ್ಯ ಧರ್ಮ ನ್ಯಾಯಗಳು ಸರ್ವತ್ರ ಒಂದೇ ಸಮನಾಗಿ ದೊರಕುವಂತೆ ಏರ್ಪಡಿದ್ದಾರೆ. ದರೋಡೆಗಾರರನ್ನು ಗಡೀಪಾರು ಮಾಡಿಸಿಯೂ - ಹಿಡಿಸಿ ಶಿಕ್ಷಿಸಿಯೂ ಪ್ರಜೆಗಳ ಮಾನಧನ ಪ್ರಾಣಗಳಿಗೆ ರಕ್ಷಣೆಯನ್ನು ತಂದಿತ್ತಿರುತ್ತಾರೆ. ಭೂಕಂದಾಯದ ಮೂಲಕ ಆದಾಯವನ್ನು ವಿಶೇಷ ರೀತಿಯಿಂದ ಹೆಚ್ಚಿಸಿರುತ್ತಾರೆ. ಸರ್ಕಾರಿ ಕಾಗದ ಪತ್ರಗಳನ್ನು ಬರೆಯುವಿಕೆಯಲ್ಲಿ ಇವರು ಪ್ರಕಟಿಸಿರುವ ಸೂಕ್ಷ್ಮಮತಿಯನ್ನೂ, ಜಾಣ್ಮೆಯನ್ನೂ, ವಿಷಯ ವಿಮರ್ಶನಾ ಚಾತುರ್ಯವನ್ನೂ ನೋಡಿದರೆ ರಾಜ್ಯಭಾರ ನಿರ್ವಹಣದಲ್ಲಿ ಇವರಿಗಿರುವ ಸಾಮರ್ಥ್ಯವು ಚೆನ್ನಾಗಿ ವ್ಯಕ್ತವಾಗುತ್ತದೆ. ಶ್ರೀಮನ್ಮಹಾರಾಜರವರು, ಇವರ ಕಾರ್ಯನಿರ್ವಹಣ ಸಾಮರ್ಥ್ಯವನ್ನು ಮೆಚ್ಚಿಕೊಂಡಿರುವರು; ಮಾತ್ರವಲ್ಲ, ಮಿಷನರಿಯವರೂ ಇವರ ಯೋಗ್ಯತೆಯನ್ನು ಮೆಚ್ಚಿಕೊಂಡು, ಇವರ ಹೆಸರಿನಲ್ಲಿ ಜ್ಞಾಪಕ ಚಿಹ್ನೆಗಳನ್ನು ಸ್ಥಾಪಿಸಿದ್ದಾರೆ. ದೇಶದಲ್ಲಿ ಸರ್ವತ್ರ ವ್ಯಾಪಿಸಿದ್ದ ದಂಗೆ ದರೋಡೆಗಳನ್ನಡಗಿಸಿ, ಪ್ರಜೆಗಳನ್ನು ನಷ್ಟನಾಶಗಳಿಂದ ಉದ್ಧರಿಸಿ ಕಾಪಾಡಬಲ್ಲ ವಜ್ರಮುಷ್ಟಿಯು ಧೀರನೀತನೆಂಬುದು ಸ್ಪಷ್ಟವಾಗಿದೆ. ಈತನಿಗೆ ಈ ಸಂಸ್ಥಾನದ ಮಂತ್ರಿಪದವು ಮಾತ್ರ ದೊರೆತು,—ಈ ಎರಡು ಜಿಲ್ಲೆಗಳಲ್ಲಿ ಒಂದು ವರ್ಷಕಾಲದಲ್ಲೇ ನಡೆದ ಈ ಬಗೆಯ ರಾಜಕೀಯ ಸುಧಾರಣೆಗಳು ಸಂಸ್ಥಾನದ ಎಲ್ಲಾ ಭಾಗದಲ್ಲೂ ಆಗಲು ಅವಕಾಶ ಮಾತ್ರ ಒದಗಿದರೆ, ಈ ಸಂಸ್ಥಾನದ ರಾಜ್ಯಭಾರವನ್ನು ವಹಿಸಿಕೊಳ್ಳಬೇಕೆಂದಿರುವ ಬ್ರಿಟಿಷ್ ಸರ್ಕಾರದ ಉದ್ದೇಶವು ಎಂದಿಗೂ

ಕಾರ್ಯಕಾರಿಯಾಗದಂತೆ-ಸಂಸ್ಥಾನವನ್ನು ರಾಜಮನೆತನವೇ ಉಳಿಸಿಕೊಂಡು ಆಳಿಕೊಂಡಿರಲು ಅವಕಾಶವಾಗದಿರದು. ದೇಶೀಯರಿಗೆ ಉತ್ತಮ ವಿದ್ಯಾಭ್ಯಾಸವು ಮಾತ್ರ ದೊರೆತರೆ ಅವರು ಎಂತಹ ಕರ್ತೃತ್ವಶಾಲಿಗಳಾಗುವರೆಂಬುದಕ್ಕೆ ಶ್ರೀ ಮಾಧವರಾಯರು ಅತ್ಯುತ್ತಮ ಉದಾಹರಣೆಯಾಗಿದ್ದಾರೆ."

ಮೇಲ್ಕಂಡ ಮಿ|| ನಾರ್ಟನ್ ಸಾಹೇಬನ ಆಶಯವು ಬಹು ಶೀಘ್ರ ಕಾಲದಲ್ಲೇ ಫಲಪ್ರದವಾಯಿತು. ಅನಂತಶಯನ ಸಂಸ್ಥಾನದ ಆಗಿನ ಸ್ಥಿತಿಯು ಅತಿ ಶೋಚನೀಯವಾಗಿತ್ತು. ಆಗ ದಿವಾನ್ ಪದವಿಯಲ್ಲಿದ್ದಾತನು, ಅಶಕ್ತನೂ ದೇಶವು ಎಂತಹ ದುಸ್ಥಿತಿಗೆ ಇಳಿದಿದೆ ಎಂಬುದರ ನಿಜ್ವದ ಪ್ರಮಾಣವನ್ನು ತಿಳಿಯಲಾರದವನೂ ಆಗಿದ್ದನು. ರಾಜನೂ ದುರ್ಬಲನಾಗಿದ್ದನು. ಮತಸಂಬಂಧವಾದ ತನ್ನ ನಿತ್ಯಕೃತ್ಯ ಮತ್ತು ದೇವಸ್ಥಾನದ ಸೇವೆ ಇಷ್ಟನ್ನಲ್ಲದೆ, ಆದ್ಯಂತ ದೇಶದ ವಿಷಯವನ್ನು ಕುರಿತು ಯೋಚಿಸಲು ಅಶಕ್ತನಾಗಿದ್ದನು. ಸಂಸ್ಥಾನದ ಸೇವೆಯಲ್ಲಿದ್ದ ಅಧಿಕಾರಿಗಳಲ್ಲೂ, ಕೇವಲ ಒಬ್ಬರಿಬ್ಬರಲ್ಲದೆ ಮಿಕ್ಕವರೆಲ್ಲರೂ ಲಂಚ ಮೋಸ ಕಾಪಟ್ಯಾದಿಗಳಲ್ಲಿ ನಿಸ್ಸೀಮರಾಗಿದ್ದರು. ಅವರಿಗೆ ಸಂಬಳ ಸ್ವಲ್ಪ-ಸಾಲದುದಕ್ಕೆ ಅದೂ ವರ್ಷಕ್ಕೆ ಮೇಲ್ಪಟ್ಟು ಬಾಕಿಯಲ್ಲಿತ್ತು. ಖಜಾನೆಯು ಬರಿದಾಗಿತ್ತು. ಸರಿಯಾದ ರಸ್ತೆಗಳಿಲ್ಲದೆ, ಇದ್ದವುಗಳಲ್ಲಿ ಪ್ರಯಾಣಮಾಡಲು ತಕ್ಕ ರಕ್ಷಣೆಯಿಲ್ಲದೆ ವ್ಯಾಪಾರವು ಬಹು ಹೀನಸ್ಥಿತಿಯಲ್ಲಿತ್ತು. ಆಮದು ರಫ್ತುಗಳ ಮೇಲಿದ್ದ ಅಧಿಕ ಸುಂಕದಿಂದ ಜನಗಳಿಗೆ ವಿಶೇಷ ನಷ್ಟವಾಗುತ್ತಿತ್ತಲ್ಲದೆ - ಸಂಸ್ಥಾನಕ್ಕೇನೋ ತಕ್ಕಷ್ಟು ವರಮಾನವು ಸಿಕ್ಕುತ್ತಿರಲಿಲ್ಲ. ದೇಶದ ಈ ಬಗೆಯ ಸ್ಥಿತಿಯು - ಬಿಟ್ಟ ಕಣ್ಣುಗಳಿಂದ ದೇಶೀಯ ಸಂಸ್ಥಾನದ ಸ್ಥಿತಿಗತಿಗಳನ್ನೇ ಕುರಿತು ನೋಡಿಕೊಂಡಿದ್ದ ಲಾರ್ಡ್ ಡಾಲ್ ಹೌಸ್ಸೀ ಸಾಹೇಬನ ಗಮನವನ್ನು ಎಳೆಯಿತು. ದೇಶವನ್ನು ನೇರವಾದ ಬ್ರಿಟಿಷ್ ಸರ್ಕಾರದ ಪಾಲನೆಗೇ ಏಕೆ ವಹಿಸಿಕೊಳ್ಳಬಾರದೆಂದು ಆತನು ಯೋಚಿಸಿದನು. ಮತ್ತು ಮದ್ರಾಸು ಸರ್ಕಾರಕ್ಕೂ - ತಿರುವಾಂಕೂರು ಆಡಳಿತಕ್ಕೂ ಒಂದು ವಿಧವಾದ ಒಪ್ಪಂದವನ್ನು ಹುಟ್ಟಿಸಿ, ರಾಜ್ಯವನ್ನು ಆ ಅಧಿಪತ್ಯಕ್ಕೆ ಒಳಪಡಿಸಬೇಕೆಂಬ ಸಂಧಾನಕ್ಕಾಗಿ ಆತನು ಉದಕಮಂಡಲಕ್ಕೆ (ನೀಲಗಿರಿ) ಸಹ ಬಂದಿಳಿದನು. ದೇಶವು ಯಾವಕ್ಷಣದಲ್ಲಿ ಪರಾಧೀನವಾಗಿ ಹೋಗು

ತ್ರದೋ ಎಂದು ಎಲ್ಲರೂ ಪಂಚಾಕ್ಷರೀ ಮಂತ್ರ ಜಪಮಾಡತೊಡಗಿದರು. ಈ ಅಪಾಯಕರ ಸಂದರ್ಭದಲ್ಲಿ ಮಹಾರಾಜರ ದೃಷ್ಟಿಯು ನಮ್ಮ ಕಥಾನಾಯಕರ ಮೇಲೆ ಬಿದ್ದಿತು. ಶ್ರೀ ಮಾಧವರಾಯರಾದರೂ, ಎಣ್ಣೆ ಬರಲಿದ್ದ ಆ ಹೊತ್ತಿನಲ್ಲಿ ಕಣ್ಣು ಮುಚ್ಚಿಕೊಂಡು ಕುಳ್ಳಿರಲಿಲ್ಲ. ಮದ್ರಾಸು ಸರ್ಕಾರದೊಂದಿಗೆ ವ್ಯವಹಾರ ನಡೆಸಿ, ದೇಶದ ಸ್ಥಿತಿಗತಿಗಳನ್ನು ಉತ್ತಮ ಪಡಿಸಲು ತಮಗೆ ಏಳು ವರ್ಷಕಾಲ ಅವಧಿ ಕೊಡಬೇಕೆಂದು ಕೇಳಿಕೊಂಡರು. ಅವಧಿಯೂ ದೊರೆಯಿತು. ರಾಯರು, ೧೮೫೭ ನೆಯ ಸಂ||ದಲ್ಲಿ ಸಂಸ್ಥಾನದ ಮಂತ್ರಿ ಪದವಿಯನ್ನು ವಹಿಸಿ, ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡರು. ಹೀಗೆ ಇನ್ನೂ ಕೇವಲ ಮೂವತ್ತು ವರ್ಷ ಪ್ರಾಯದಲ್ಲೇ ನಮ್ಮ ಕಥಾನಾಯಕರು ತಮ್ಮ ಋಜುವರ್ತನ, ಶಕ್ತಿಸಾಮರ್ಥ್ಯಗಳು, ಕಾರ್ಯನಿರ್ವಾಹ ಚಾತುರ್ಯ ಮುಂತಾದುವುಗಳಿಂದ ದೇಶೀಯ ಸಂಸ್ಥಾನದಲ್ಲಿ, ದೇಶೀಯನೊಬ್ಬನು ಪಡೆಯಲಾತಿಸಬಹುದಾದ ಅತ್ಯುನ್ನತಾಧಿಕಾರವನ್ನು ಗಳಿಸಿದರು.—

ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡುದು ಘನವಲ್ಲ — ರಾಜ್ಯಭಾರವನ್ನು ಸಾಗಿಸುವುದು ಅಧಿಕ ಶ್ರಮಸಾಧ್ಯಕಾರ್ಯವಾಗಿದ್ದಿತು! ರಾಜಭಂಡಾರವು ಅತಿ ಶೋಚನೀಯಸ್ಥಿತಿಯಲ್ಲಿದ್ದು ಅದನ್ನು ಕುರಿತು ಗಮನಿಸತಕ್ಕುದು ಪ್ರಾರಂಭದಲ್ಲಿ ಅತ್ಯಾವಶ್ಯಕವೆನಿಸಿತು. ಸಂಸ್ಥಾನಕ್ಕೆ ಹೆಚ್ಚುದ್ರವ್ಯ ಲಾಭವಾಗುವಂತೆ ಮಾಡುವ ಕಾರ್ಯವು ಎಂಥದಾದರೂ ಪ್ರಜೆಗಳಿಗೆ ಭಾರವೆನ್ನಿಸದೆ ಇರಲು ಸಾಧ್ಯವಿಲ್ಲವಲ್ಲವೆ! ಆಗಲೇ ನೂರಾರು ಬಗೆಯ ಕಂದಾಯ ಕೌಳಿಗೆಗಳಿದ್ದು, ಅವುಗಳಿಂದ ಸರ್ಕಾರಕ್ಕೆ ವಿಶೇಷ ಲಾಭವಿಲ್ಲದಿದ್ದರೂ ಪ್ರಜೆಗಳಿಗೆ ಉಂಟಾಗುತ್ತಿದ್ದ ನಷ್ಟಕಷ್ಟಗಳಿಗೆ ಮಿತಿಯಿರಲಿಲ್ಲ. ಎಲ್ಲಕ್ಕಿಂತಲೂ ಮೆಣಸಿನ ವಿಷಯದಲ್ಲಿದ್ದ ಗುತ್ತಿಗೆಯ ಪದ್ಧತಿಯೇ ಅತಿ ಬಾಧಕರವಾಗಿತ್ತು. ಮಾಧವರಾಯರು ಈ ಪದ್ಧತಿಯನ್ನು ವಜಾಮಾಡಿ, ರಫ್ತಾಗುವ ಮೆಣಸಿನಮೇಲೆ ಶೇಕಡಾ ೧೫ರಂತೆ ಸುಂಕವನ್ನು ವಿಧಿಸಿ, ಲಾಭನಷ್ಟಗಳನ್ನು ಸರಿಗೊಳಿಸಲು ಯತ್ನಿಸಿದರು. ತರುವಾಯ ಈ ಸುಂಕವು ಶೇ. ೯ಕ್ಕೂ ಕ್ರಮವಾಗಿ ಶೇ. ೫ಕ್ಕೂ, ಇಳಿಯಿತು. ಇದಕ್ಕೆ ಎರಡನೆಯದು ಹೊಗೇಸೊಪ್ಪಿನ ವ್ಯಾಪಾರದ ಗುತ್ತಿಗೆ. ಇದರ ವ್ಯಾಪಾರದಲ್ಲೂ ವಿಚಿತ್ರ ಪದ್ಧತಿಯಿತ್ತು. ಮಾ

ಧವರಾಯರು, ಈವರೆಗೂ ಮಾಡುತ್ತಿದ್ದಂತೆ ಕಂಟ್ರಾಕ್ಟರುಗಳಿಂದ ಸರ್ಕಾರವೇ ಮೊತ್ತವಾಗಿ ಹೊಗೇಸೊಪ್ಪನ್ನು ಕೊಂಡು, ಅದನ್ನು ಚಿಲ್ಲರೆ ವರ್ತಕರಿಗೆ ಕೊಡುತ್ತಿದ್ದ ಪದ್ಧತಿಯನ್ನು ತಪ್ಪಿಸಿ, ವರ್ತಕರೇ ತಮಗೆ ಬೇಕಾದಷ್ಟನ್ನು ತಮ್ಮ ಜವಾಬುದಾರಿಯಮೇಲೆಯೇ ತರಿಸಿಕೊಳ್ಳುವಂತೆ ಅನುಮತಿಯನ್ನಿತ್ತರು. ಆದರೆ ಅದರಮೇಲೆ ಸ್ವಲ್ಪ ಸುಂಕವನ್ನೂ ಇಟ್ಟರು. ಪ್ರಾರಂಭದಲ್ಲಿ ಆ ಸುಂಕವು ಸ್ವಲ್ಪ ಹೆಚ್ಚೆಂದು ತೋರುವಂತೆ ಕಂಡರೂ, ಆ ವಿಷಯದಲ್ಲಿ ಸರ್ಕಾರದವರು ಬೇಕಾದ ಅನುಕೂಲತೆಯನ್ನು ಒದಗಿಸಿದುದರಿಂದ ಮುಂದೆ ಕೆಲದಿನಗಳಲ್ಲೇ ಎಲ್ಲವೂ ಸರಿಹೋಯಿತು. ಆ ಸುಂಕವನ್ನೂ ಮುಂದೆ ಕೆಲವುದಿನಗಳಲ್ಲೇ ಕಡಮೆ ಮಾಡಿದರು. ಸುಂಕವನ್ನು ಕಡಮೆ ಮಾಡಿದಷ್ಟೂ ವ್ಯಾಪಾರವು ಮೇಲೆ ಮೇಲೆ ಹೆಚ್ಚಲು ಅವಕಾಶವಾಯಿತು. ತರುವಾಯ ಮಾಧವರಾಯರು, ಇತರ ಕಂದಾಯಗಳನ್ನು ಕುರಿತು ಗಮನಿಸತೊಡಗಿದರು. ಲಾಭವಿಲ್ಲದೆ, ಆದರೆ ಬರೀ ಬಾಧಕರವಾಗಿದ್ದ ನೂರಾರು ಕಂದಾಯಗಳನ್ನು ತೆಗೆದುಹಾಕಿದುದಲ್ಲದೆ, ಭೂಕಂದಾಯವು ಹೆಚ್ಚೆಂದು ತೋರಿದಸಂದರ್ಭದಲ್ಲಿ ಅದನ್ನೂ ತಗ್ಗಿಸಿ ಪ್ರಜೆಗಳಿಗೆ ಅನುಕೂಲ ಮಾಡಿಕೊಟ್ಟರು. ೧೮೬೩—೬೪ನೆ ಇಸವಿಗಳಲ್ಲಿ ಆಮದು ರಫ್ತು ಪದಾರ್ಥಗಳ ಮೇಲಿದ್ದ ತೆರಿಗೆಗಳನ್ನು ತೆಗೆದುಹಾಕಿದರು. ಮಾರನೆಯ ವರ್ಷದಲ್ಲಿ ಮದ್ರಾಸು ತಿರುವಾಂಕೂರು ಮತ್ತು ಕೊಚ್ಚಿನ್ ಸಂಸ್ಥಾನಗಳಿಗೆ ವ್ಯಾಪಾರ ಸಂಬಂಧ ಒಪ್ಪಂದವು ಹುಟ್ಟಿತು. ಈ ಒಪ್ಪಂದದ ಷರತ್ತುಗಳನ್ನನುಸರಿಸಿ, ಬ್ರಿಟಿಷ್ ಸರ್ಕಾರದ ಪ್ರಾಂತಗಳಿಂದಲೂ, ಕೊಚ್ಚಿನ್ ಸಂಸ್ಥಾನದಿಂದಲೂ, ತಿರುವಾಂಕೂರು ರಾಜ್ಯದೊಳಕ್ಕೆ ಬರುತ್ತಿದ್ದ ಪದಾರ್ಥಗಳ ಮೇಲಿನ ತೆರಿಗೆಯ ಸ್ವಲ್ಪ ಅಂಶವು ತೆಗೆದುಹಾಕಲ್ಪಟ್ಟಿತು.

ನಮ್ಮ ಕಥಾನಾಯಕರು ಆ ಸಂಸ್ಥಾನದ ಆರ್ಥಿಕ ಮತ್ತು ನೈತಿಕಾಭಿವೃದ್ಧಿಗಳಿಗೆ ಸಹಕಾರಿಗಳಾದ ಈ ಕಾರ್ಯಗಳನ್ನು ನಿರ್ವಹಿಸಿದ ವಿಷಯದಲ್ಲಿ ತನ್ನ ಮೆಚ್ಚುಗೆಯನ್ನು ಪ್ರಕಟಿಸುವುದಕ್ಕಾಗಿ, ಸಾಮ್ರಾಜ್ಯಸರಕಾರವು ಅವರಿಗೆ ಕೆ.ಸಿ.ಎಸ್.ಐ. ಎಂಬ ಘನತರವಾದ ಬಿರುದನ್ನು ಪ್ರಸಾದಿಸಿ ಗೌರವಿಸಿತು. ಆ ಬಿರುದನ್ನು ಅವರಿಗೆ ಅಲಂಕರಿಸುವುದಕ್ಕಾಗಿ ನೆರೆದ ಮಹಾಸಭೆಯಲ್ಲಿ ಮದ್ರಾಸ್ ಗೌರ್ನರಾಗಿದ್ದ ಲಾರ್ಡ್ ನೇಪಿಯರ್ ಪ್ರಭುವು ಶ್ರೀ ಮಾಧವರಾಯರನ್ನು

ಉದ್ದೇಶಿಸಿ ಹೀಗೆ ಹೇಳಿದ್ದಾನೆ--"ಸರ್, ಮಾಧವರಾಯರೇ, ತಮ್ಮ ಯಾವ ಪ್ರತಿಭಾವಂತ ಗುಣಾತಿಶಯಗಳು ಈಗ ಸರ್ವಜನ ಮಾನ್ಯಗಳಾಗಿಯೂ ಪ್ರಜೋಪ ಕಾರಕಗಳಾಗಿಯೂ ಪರಿಣಮಿಸಿವೆಯೋ ಆ ಗುಣಗಳಿಗೆ ತಮ್ಮಲ್ಲಿ ತಳ ಹದಿಯು ಹಾಕಲ್ಪಟ್ಟ ಈ ನಗರಕ್ಕೆ (ಮದರಾಸು) ತಮ್ಮನ್ನು ಆಹ್ವಾನಿಸುವ ಸುಸಂಧಿಯು ದೊರೆತುದಕ್ಕಾಗಿ ನಮ್ಮ ಸರ್ಕಾರವೂ ಮತ್ತು ಈ ನಗರವಾಸಿ ಮಹಾಜನರೂ ಬಹು ಸಂತೋಷಪಡುತ್ತಾರೆ. ಈ ದಿವಸ ತಾವು ಸ್ವೀಕರಿಸಿದ, ಶ್ರೀ ಚಕ್ರವರ್ತಿನಿಯವರಿಂದ ಅನುಗ್ರಹಿಸಲ್ಪಟ್ಟ ಈ ಶ್ರೀಮಂತ ಪದವಿಯು,-ಶ್ರೀ ಸಾರ್ವಭೌಮ ಸರ್ಕಾರದವರ ಗಮನವೂ ಔದಾರ್ಯವೂ ವ್ಯಾಪಿಸಿರುವುದು, ಕೇವಲ ಅವರ ಸ್ವಂತ ಆಳ್ವಿಕೆಗೊಳಪಟ್ಟ ದೇಶಗಳ ಮೇಲೆ ಮಾತ್ರವಲ್ಲ-ನೇಟಿವ್ ಸಂಸ್ಥಾನಗಳಲ್ಲಿ ವಾಸಿಸುವ ರಾಜರಿಗೂ ಪ್ರಜೆಗಳಿಗೂ ಮಾಡಿದ ಶ್ರದ್ಧಾಪೂರ್ವಕ ಸೇವೆಯೂ, ಅಪ್ರತ್ಯಕ್ಷವಾಗಿ ತಮಗೂ ಮತ್ತು ತಮ್ಮ ಪ್ರತಿನಿಧಿಗಳಿಗೂ ಮಾಡಿದ ಸೇವೆಯೇ ಎಂಬರ್ಥದಿಂದ ಗೌರವಿಸಲ್ಪಡುತ್ತದೆ, ಎಂಬುದನ್ನು ಪ್ರದರ್ಶಿಸುತ್ತದೆ. ತಾವು ತಮ್ಮ ಮಹಾರಾಜರನ್ನು ಇನ್ನೂ ಅಧಿಕ ಭಕ್ತಿ ಶ್ರದ್ಧೆಗಳಿಂದಲೂ ಬುದ್ಧಿಶಕ್ತಿಯಿಂದಲೂ ಸೇವಿಸಿ, ಆ ರಾಜಶ್ರೇಷ್ಠರ ಪ್ರಜ್ಞೆಯು ಮತ್ತು ಶ್ರೇಷ್ಠಗುಣಗಳ ಪ್ರಯೋಜನವನ್ನು ಅವರ ಆಳ್ವಿಕೆಗೆ ಒಳಪಟ್ಟ ಪ್ರಜಾಸಮೂಹಕ್ಕೆ ತಂದಿತ್ತು ಇತೋಪ್ಯತಿಶಯವಾದ ಯಶಸ್ಸಿಗೆ ಭಾಜನರಾಗಿರಿ."

ಸರ್. ಮಾಧವರಾಯರು ಆ ಸಂವತ್ಸರದಲ್ಲೇ ಮದರಾಸು ವಿಶ್ವವಿದ್ಯಾ ನಿಲಯದ ಗೌರವ ಸದಸ್ಯರಾಗಿಯೂ ಚುನಾಯಿಸಲ್ಪಟ್ಟರು. ಅವರ ಕೀರ್ತಿಯು ತಿರುವಾಂಕೂರು ಸಂಸ್ಥಾನದಲ್ಲಿ ಪ್ರತಿ ಮನೆಯ ಮಾತಾಗಿ ಪರಿಣಮಿಸಿ ಹಾಡಲ್ಪಡುತ್ತಿತ್ತು. ಬಹು ವರ್ಷಗಳಿಂದಲೂ, ದೇಶದ ಉತ್ತಮಸ್ಥಿತಿಗಾಗಿ ಆವಶ್ಯಕವಾದ ಏರ್ಪಾಡುಗಳನ್ನು ಮಾಡುವುದರಲ್ಲೇ ನಿರತರಾಗಿದ್ದ ಅವರು ಮುಂದೆ ಆ ಪದ್ಧತಿಗಳನ್ನನುಸರಿಸಿ ರಾಜ್ಯಭಾರವನ್ನು ನಡೆಯಿಸಿ, ಕ್ರಮಪಡಿಸಬೇಕೆಂದು ಎಣಿಸಿದ್ದರು. ಆದರೆ ಅಷ್ಟರಲ್ಲಿ ಅದಕ್ಕೊಂದು ಪ್ರತಿಬಂಧಕವು ಪ್ರಾಪ್ತವಾಯಿತು. ಯಾರೋ ದುರ್ಬೋಧಕರು ರಾಜರ ಬಳಿಯಲ್ಲಿ ಸೇರಿ ಅವರ ಮನಸ್ಸನ್ನು ಕೆಡಿಸಿದುದರಿಂದ ಸರ್. ಮಾಧವರಾಯರಿಗೂ ರಾಜಾ ರಾಮವರ್ಮರಿಗೂ ಅಭಿಪ್ರಾಯ ಭೇದವುಂಟಾಗಲು ಅವರು ೧೮೭೨ ನೆಯ

ಧವರಾಯರು, ಈವರೆಗೂ ಮಾಡುತ್ತಿದ್ದಂತೆ ಕಂಟ್ರಾಕ್ಟರುಗಳಿಂದ ಸರ್ಕಾರವೇ ಮೊತ್ತವಾಗಿ ಹೊಗೇಸೊಪ್ಪನ್ನು ಕೊಂಡು, ಅದನ್ನು ಚಿಲ್ಲರೆ ವರ್ತಕರಿಗೆ ಕೊಡುತ್ತಿದ್ದ ಪದ್ಧತಿಯನ್ನು ತಪ್ಪಿಸಿ, ವರ್ತಕರೇ ತಮಗೆ ಬೇಕಾದಷ್ಟನ್ನು ತಮ್ಮ ಜವಾಬುದಾರಿಯಮೇಲೆಯೇ ತರಿಸಿಕೊಳ್ಳುವಂತೆ ಅನುಮತಿಯನ್ನಿತ್ತರು. ಆದರೆ ಅದರಮೇಲೆ ಸ್ವಲ್ಪ ಸುಂಕವನ್ನೂ ಇಟ್ಟರು. ಪ್ರಾರಂಭದಲ್ಲಿ ಆ ಸುಂಕವು ಸ್ವಲ್ಪ ಹೆಚ್ಚೆಂದು ತೋರುವಂತೆ ಕಂಡರೂ, ಆ ವಿಷಯದಲ್ಲಿ ಸರ್ಕಾರದವರು ಬೇಕಾದ ಅನುಕೂಲತೆಯನ್ನು ಒದಗಿಸಿದುದರಿಂದ ಮುಂದೆ ಕೆಲದಿನಗಳಲ್ಲೇ ಎಲ್ಲವೂ ಸರಿಹೋಯಿತು. ಆ ಸುಂಕವನ್ನೂ ಮುಂದೆ ಕೆಲವುದಿನಗಳಲ್ಲೇ ಕಡಮೆಮಾಡಿದರು. ಸುಂಕವನ್ನು ಕಡಮೆ ಮಾಡಿದಷ್ಟೂ ವ್ಯಾಪಾರವು ಮೇಲೆ ಮೇಲೆ ಹೆಚ್ಚಲು ಅವಕಾಶವಾಯಿತು. ತರುವಾಯ ಮಾಧವರಾಯರು, ಇತರ ಕಂದಾಯಗಳನ್ನು ಕುರಿತು ಗಮನಿಸತೊಡಗಿದರು. ಲಾಭವಿಲ್ಲದೆ, ಆದರೆ ಬರೀ ಬಾಧಕರವಾಗಿದ್ದ ನೂರಾರು ಕಂದಾಯಗಳನ್ನು ತೆಗೆದುಹಾಕಿದುದಲ್ಲದೆ, ಭೂಕಂದಾಯವು ಹೆಚ್ಚೆಂದು ತೋರಿದ ಸಂದರ್ಭದಲ್ಲಿ ಅದನ್ನೂ ತಗ್ಗಿಸಿ ಪ್ರಜೆಗಳಿಗೆ ಅನುಕೂಲ ಮಾಡಿಕೊಟ್ಟರು. ೧೮೬೩—೬೪ನೆ ಇಸವಿಗಳಲ್ಲಿ ಆಮದು ರಫ್ತು ಪದಾರ್ಥಗಳ ಮೇಲಿದ್ದ ತೆರಿಗೆಗಳನ್ನು ತೆಗೆದುಹಾಕಿದರು. ಮಾರನೆಯ ವರ್ಷದಲ್ಲಿ ಮದ್ರಾಸು ತಿರುವಾಂಕೂರು ಮತ್ತು ಕೊಚ್ಚಿನ್ ಸಂಸ್ಥಾನಗಳಿಗೆ ವ್ಯಾಪಾರ ಸಂಬಂಧ ಒಪ್ಪಂದವು ಹುಟ್ಟಿತು. ಈ ಒಪ್ಪಂದದ ಷರತ್ತುಗಳನ್ನನುಸರಿಸಿ, ಬ್ರಿಟಿಷ್ ಸರ್ಕಾರದ ಪ್ರಾಂತಗಳಿಂದಲೂ, ಕೊಚ್ಚಿನ್ ಸಂಸ್ಥಾನದಿಂದಲೂ, ತಿರುವಾಂಕೂರು ರಾಜ್ಯದೊಳಕ್ಕೆ ಬರುತ್ತಿದ್ದ ಪದಾರ್ಥಗಳ ಮೇಲಿನ ತೆರಿಗೆಯ ಸ್ವಲ್ಪ ಅಂಶವು ತೆಗೆದುಹಾಕಲ್ಪಟ್ಟಿತು.

ನಮ್ಮ ಕಥಾನಾಯಕರು ಆ ಸಂಸ್ಥಾನದ ಆರ್ಥಿಕ ಮತ್ತು ನೈತಿಕಾಭಿವೃದ್ಧಿಗಳಿಗೆ ಸಹಕಾರಿಗಳಾದ ಈ ಕಾರ್ಯಗಳನ್ನು ನಿರ್ವಹಿಸಿದ ವಿಷಯದಲ್ಲಿ ತನ್ನ ಮೆಚ್ಚುಗೆಯನ್ನು ಪ್ರಕಟಿಸುವುದಕ್ಕಾಗಿ, ಸಾಮ್ರಾಜ್ಯಸರಕಾರವು ಅವರಿಗೆ ಕೆ.ಸಿ.ಎಸ್.ಐ. ಎಂಬ ಘನತರವಾದ ಬಿರುದನ್ನು ಪ್ರಸಾದಿಸಿ ಗೌರವಿಸಿತು. ಆ ಬಿರುದನ್ನು ಅವರಿಗೆ ಅಲಂಕರಿಸುವುದಕ್ಕಾಗಿ ನೆರೆದ ಮಹಾಸಭೆಯಲ್ಲಿ ಮದ್ರಾಸ್ ಗೌರ್ನರಾಗಿದ್ದ ಲಾರ್ಡ್ ನೇಪಿಯರ್ ಪ್ರಭುವು ಶ್ರೀ ಮಾಧವರಾಯರನ್ನು

ಉದ್ದೇಶಿಸಿ ಹೀಗೆ ಹೇಳಿದ್ದಾನೆ-''ಸರ್, ಮಾಧವರಾಯರೇ, ತಮ್ಮ ಯಾವ ಪ್ರತಿಭಾವಂತ ಗುಣಾತಿಶಯಗಳು ಈಗ ಸರ್ವಜನ ಮಾನ್ಯಗಳಾಗಿಯೂ ಪ್ರಜೋಪ ಕಾರಕಗಳಾಗಿಯೂ ಪರಿಣಮಿಸಿವೆಯೋ ಆ ಗುಣಗಳಿಗೆ ತಮ್ಮಲ್ಲಿ ತಳ ಹದಿಯು ಹಾಕಲ್ಪಟ್ಟ ಈ ನಗರಕ್ಕೆ (ಮದರಾಸು) ತಮ್ಮನ್ನು ಆಹ್ವಾನಿಸುವ ಸುಸಂಧಿಯು ದೊರೆತುದಕ್ಕಾಗಿ ನಮ್ಮ ಸರ್ಕಾರವೂ ಮತ್ತು ಈ ನಗರವಾಸಿ ಮಹಾಜನರೂ ಬಹು ಸಂತೋಷಪಡುತ್ತಾರೆ. ಈ ದಿವಸ ತಾವು ಸ್ವೀಕರಿಸಿದ, ಶ್ರೀ ಚಕ್ರವರ್ತಿನಿಯವರಿಂದ ಅನುಗ್ರಹಿಸಲ್ಪಟ್ಟ ಈ ಶ್ರೀಮಂತ ಪದವಿಯು,-ಶ್ರೀ ಸಾರ್ವಭೌಮ ಸರ್ಕಾರದವರ ಗಮನವೂ ಔದಾರ್ಯವೂ ವ್ಯಾಪಿಸಿರುವುದು, ಕೇವಲ ಅವರ ಸ್ವಂತ ಆಳ್ವಿಕೆಗೊಳಪಟ್ಟ ದೇಶಗಳವೊಂದೆ ಮಾತ್ರವಲ್ಲ-ನೇಟಿವ್ ಸಂಸ್ಥಾನಗಳಲ್ಲಿ ವಾಸಿಸುವ ರಾಜರಿಗೂ ಪ್ರಜೆಗಳಿಗೂ ಮಾಡಿದ ಶ್ರದ್ಧಾಪೂರ್ವಕ ಸೇವೆಯೂ, ಅಪ್ರತ್ಯಕ್ಷವಾಗಿ ತಮಗೂ ಮತ್ತು ತಮ್ಮ ಪ್ರತಿನಿಧಿಗಳಿಗೂ ಮಾಡಿದ ಸೇವೆಯೋ ಎಂಬರ್ಥದಿಂದ ಗೌರವಿಸಲ್ಪಡುತ್ತದೆ, ಎಂಬುದನ್ನು ಪ್ರದರ್ಶಿಸುತ್ತದೆ. ತಾವು ತಮ್ಮ ಮಹಾರಾಜರನ್ನು ಇನ್ನೂ ಅಧಿಕ ಭಕ್ತಿ ಶ್ರದ್ಧೆಗಳಿಂದಲೂ ಬುದ್ಧಿಶಕ್ತಿಯಿಂದಲೂ ಸೇವಿಸಿ, ಆ ರಾಜಶ್ರೇಷ್ಠರ ಪ್ರಜ್ಞೆಯು ಮತ್ತು ಶ್ರೇಷ್ಠಗುಣಗಳ ಪ್ರಯೋಜನವನ್ನು ಅವರ ಆಳ್ವಿಕೆಗೆ ಒಳಪಟ್ಟ ಪ್ರಜಾಸಮೂಹಕ್ಕೆ ತಂದಿತ್ತು ಇತೋಂಪ್ಯತಿಶಯವಾದ ಯಶಸ್ಸಿಗೆ ಭಾಜನರಾಗಿರಿ.''

ಸರ್. ಮಾಧವರಾಯರು ಆ ಸಂವತ್ಸರದಲ್ಲೇ ಮದರಾಸು ವಿಶ್ವವಿದ್ಯಾನಿಲಯದ ಗೌರವ ಸದಸ್ಯರಾಗಿಯೂ ಚುನಾಯಿಸಲ್ಪಟ್ಟರು. ಅವರ ಕೀರ್ತಿಯು ತಿರುವಾಂಕೂರು ಸಂಸ್ಥಾನದಲ್ಲಿ ಪ್ರತಿ ಮನೆಯ ಮಾತಾಗಿ ಪರಿಣಮಿಸಿ ಹಾಡಲ್ಪಡುತ್ತಿತ್ತು. ಬಹು ವರ್ಷಗಳಿಂದಲೂ, ದೇಶದ ಉತ್ತಮಸ್ಥಿತಿಗಾಗಿ ಅವಶ್ಯಕವಾದ ಏರ್ಪಾಡುಗಳನ್ನು ಮಾಡುವುದರಲ್ಲೇ ನಿರತರಾಗಿದ್ದ ಅವರು ಮುಂದೆ ಆ ಪದ್ಧತಿಗಳನ್ನನುಸರಿಸಿ ರಾಜ್ಯಭಾರವನ್ನು ನಡೆಯಿಸಿ, ಕ್ರಮಪಡಿಸಬೇಕೆಂದು ಎಣಿಸಿದ್ದರು. ಆದರೆ ಅಷ್ಟರಲ್ಲಿ ಅದಕ್ಕೊಂದು ಪ್ರತಿಬಂಧಕವು ಪ್ರಾಪ್ತವಾಯಿತು. ಯಾರೋ ದುರ್ಬೋಧಕರು ರಾಜರ ಬಳಿಯಲ್ಲಿ ಸೇರಿ ಅವರ ಮನಸ್ಸನ್ನು ಕೆಡಿಸಿದುದರಿಂದ ಸರ್. ಮಾಧವರಾಯರಿಗೂ ರಾಜಾ ರಾಮವರ್ಮರಿಗೂ ಅಭಿಪ್ರಾಯ ಭೇದವುಂಟಾಗಲು ಅವರು ೧೮೭೨ ನೆಯ

ಸಂವತ್ಸರದಲ್ಲಿ, ತಮ್ಮ ಆ ಅಮಾತ್ಯಪದವಿಗೆ ರಾಜೀನಾಮೆಯನ್ನು ಕೊಟ್ಟು ಕೆಲಸದಿಂದ ನಿವೃತ್ತರಾದರು.



## ಅಧ್ಯಾಯ ೩ "ಇಂದೂರು ಸಂಸ್ಥಾನ"

ಸರ್. ಮಾಧವರಾಯರ ಈ ಹದಿನೈದು ವರ್ಷಗಳ ರಾಜ್ಯಭಾರದೊಂದಿಗೆ, ಆ ಮಂತ್ರಧುರೀಣರ ಜೀವಿತ ನಾಟಕದಲ್ಲಿನ ಒಂದು ಅಂಕವು ಮುಗಿಯಿತೆನ್ನಬಹುದು. ಈ ಅವಧಿಯಲ್ಲಿ ಅವರು ಆ ಸಂಸ್ಥಾನಕ್ಕೆ ಉಂಟುಮಾಡಿದ ಪ್ರಯೋಜನಗಳನ್ನು ವರ್ಣಿಸಲಸದಳವು. ಅಜ್ಞಾನಾಂಧಕಾರದಿಂದ ಮುಚ್ಚಿದ್ದ ಆ ದೇಶಕ್ಕೆ, ಬಹಿಃಪ್ರಪಂಚವು ಹೇಗೆ ನಡೆಯುತ್ತಿದೆ ಎಂಬುದರ ಪರಿಚಯವನ್ನು ತಂದಿತ್ತು-ಜ್ಞಾನಸೂರ್ಯನ ಕಿರಣಗಳು ಪ್ರಸರಿಸಲು ಅವಕಾಶವನ್ನು ಕಲ್ಪಿಸಿದರು. ದಂಗೆ ದರೋಡೆ ಲೂಟಿ ಕೊಲೆ ಮುಂತಾದವುಗಳ ಬಾಧೆಯಿಂದ ಅಹರ್ನಿಶಿ ಭಯಗೊಂಡಿದ್ದ ಆ ದೇಶದ ಪ್ರಜೆಗಳಿಗೆ ಉತ್ತಮ ಸರ್ಕಾರದ ರಕ್ಷಣೆಯನ್ನು ತಂದಿತ್ತರು. ವಂಶಪಾರಂಪರ್ಯವಾಗಿ ಕಳವು ದರೋಡೆಗಳಿಂದಲೇ ಜೀವಿಸುತ್ತಾ ಪ್ರಜೆಗಳ ವಿತ್ತಾಪಹಾರ ಮಾಡುತ್ತಲಿದ್ದ ಕಳ್ಳರ ಮತ್ತು ಕೊಲೆಪಾತಕರ ಗುಂಪುಗಳನ್ನು ಹಿಡಿಸಿ, ಪ್ರಜೆಗಳ ಧನಮಾನ ಪ್ರಾಣಗಳಿಗೆ ಸುರಕ್ಷಣೆಯನ್ನು ಉಂಟುಮಾಡಿದರು ಗಾಳಿ ಬೆಳಕುಗಳ ಪರಿಚಯವನ್ನೇ ಅರಿಯದ ಗುಡಿಸಲುಗಳಿಂದ ಕೂಡಿ, ನೋಡಲು ಸರ್ವಾಸಹ್ಯವೆನ್ನಿಸಿ, ರಾಜಧಾನಿಯೆಂಬ ಹೆಸರಿಗೇ ಕಳಂಕವನ್ನುಂಟುಮಾಡುತ್ತಿದ್ದ ಆ ಸಂಸ್ಥಾನದ ಪ್ರಧಾನನಗರದಲ್ಲೂ, ಇತರ ದೊಡ್ಡ ದೊಡ್ಡ ಊರುಗಳಲ್ಲೂ ಗಗನಚುಂಬಿತ ಸೌಧಗಳನ್ನೆಬ್ಬಿಸಿ ನೇತ್ರಾನಂದಕರವಾಗುವಂತೆ ಮಾಡಿದರು. ಅನೇಕಾನೇಕ ವಿಶಾಲ ರಸ್ತೆಗಳು, ಸಾಲುಮರಗಳು, ಕಾಲುವೆಗಳು, ಸೇತುವೆಗಳು ಮುಂತಾದುವುಗಳನ್ನು ನಿರ್ಮಿಸಿ, ಸಂಸ್ಥಾನದ ವಿವಿಧ ಭಾಗಗಳು ಒಂದರೊಡನೊಂದು ಸುಲಭವಾಗಿ ವ್ಯವಹಾರ ನಡಿಸಲು ಅನುಕೂಲವಾಗುವಂತೆ ಮಾಡಿದರು. ಕಾಡುಗಳನ್ನು ಕಡಿಸಿ ಭೂಮಿಯನ್ನು ವಾಸಯೋಗ್ಯವೆನ್ನಿಸಿದರು. ಬಂಜರು ಭೂಮಿಯು ಲಕ್ಷಾಂತರ ಎಕರೆ

ಗಳನ್ನು ವ್ಯವಸಾಯ ಯೋಗ್ಯವಾಗುವಂತೆ ಮಾಡಿದ್ದಲ್ಲದೆ, ಕಾಫಿ ಮುಂತಾದ ನೂತನ ವ್ಯವಸಾಯಗಳೂ ವಿಶೇಷವಾಗಿ ನಡೆಯುವಂತೆ ಪ್ರೋತ್ಸಾಹವನ್ನುಂಟುಮಾಡಿದರು. ಅನೇಕ ಕೈಗಾರಿಕೆಗಳೂ ಪ್ರಾರಂಭವಾಗಿ ನಡೆಯತೊಡಗಿದವು. ನೆರೆಹೊರೆಯ ದೇಶಗಳೊಂದಿಗೆ ಮಾತ್ರವಲ್ಲ-ದೇಶಾಂತರಗಳೊಂದಿಗೂ ವ್ಯಾಪಾರವು ವಿಶೇಷವಾಗಿ ನಡೆಯಲು ಅನೇಕ ನೂತನ ಮಾರ್ಗಗಳನ್ನು ಕಲ್ಪಿಸಿಕೊಟ್ಟರು. ಎಲ್ಲೆಲ್ಲೂ ದೇಶೀಯ ಮತ್ತು ಆಂಗ್ಲೇಯ ಪಾಠಶಾಲೆಗಳು ಸ್ಥಾಪಿತವಾಗಿ ವಿದ್ಯೆಯು ಸರ್ವತ್ರ ವ್ಯಾಪಿಸಲು ಅವಕಾಶವಾಯಿತು. ದೇಶದಲ್ಲಿ ಶಾಂತತೆ ಸಮಾಧಾನಗಳೂ ತುಷ್ಟಿ-ತೃಪ್ತಿಗಳೂ ನೆಲೆಗೊಂಡು ಪ್ರಜೆಗಳು ನಿರ್ಭೀತಿಯಿಂದ ತಮ್ಮ ತಮ್ಮ ಕಾರ್ಯಗಳನ್ನು ನೋಡಿಕೊಳ್ಳುವಂತಹ ಸ್ಥಿತಿಯು ಪ್ರಾಪ್ತವಾಯಿತು. ನಮ್ಮ ಕಥಾನಾಯಕರು ರಾಜ್ಯಭಾರವನ್ನು ವಹಿಸಿಕೊಂಡಾಗ, ಯಾವ ವೇಳೆಯಲ್ಲಿ ಬ್ರಿಟಿಷ್ ಸರ್ಕಾರದವರಿಂದ ಆಕ್ರಮಿಸಲ್ಪಡುವುದೋ ಎಂಬ ಕ್ಷಣಗಂಡ-ದಿನಗಂಡಗಳಿಂದ ನಿಟ್ಟುಸಿರುಬಿಡುತ್ತಿದ್ದ ತಿರುವಾಂಕೂರು ಸಂಸ್ಥಾನವು, ಹದಿನೈದು ಸಂವತ್ಸರಕಾಲ ರಾಜ್ಯಭಾರ ಮಾಡಿ ಅವರು ನಿವೃತ್ತರಾದ ವೇಳೆಯಲ್ಲಿ, ಭರತಖಂಡದ ಸಂಸ್ಥಾನಗಳಲ್ಲೆಲ್ಲ ಇದು 'ಮಾದರೀ ಸಂಸ್ಥಾನ' ಎಂಬ ಪ್ರಶಂಸೆಗೆ ಪಾತ್ರತೆಯನ್ನು ಹೊಂದಿತು. ಸರ್. ಟಿ. ಮಾಧವರಾಯರ ರಾಜಕಾರ್ಯಚಾತುರ್ಯವನ್ನೂ ಅವರ ಮಂತ್ರಶಕ್ತಿಯ ಬಲವನ್ನೂ ಮೆಚ್ಚಿಕೊಂಡಿದ್ದ ಶ್ರೀ ರಾಜಾ ರವಿವರ್ಮರವರು ಒಂದಾನೊಂದು ವೇಳೆ-"ಪೆರಿಕಲ್ಸ್ ಮಹಾಶಯನು ಅಥೆನ್ಸು ನಗರಕ್ಕೆ ಎಂತಹ ಮಹೋಪಕಾರ ಮಾಡಿದನೋ ಇಂಗ್ಲೆಂಡು ದೇಶದ ಅಭಿವೃದ್ಧಿಗೆ ಕ್ರಾಂವೆಲ್ಲನು ಹೇಗೆ-ಎಂತಹ ಸಹಾಯ ಮಾಡಿದನೋ, ಅಂತಹ ಮಹೋಪಕಾರವನ್ನು ಸರ್. ಮಾಧವರಾಯರು ನಮ್ಮ ಈ ತಿರುವಾಂಕೂರು ಸಂಸ್ಥಾನಕ್ಕೆ ಮಾಡಿದ್ದಾರೆ' ಎಂದು ನುಡಿದಿರುವರು.

ಲೋಕದಲ್ಲಿ ನಡೆವ ಯಾವುದೊಂದು ಸತ್ಕಾರ್ಯವಾಗಲಿ ದುಷ್ಕಾರ್ಯವಾಗಲಿ, ಅದರ ವಿಷಯದಲ್ಲಿ ಮೊದಲು ಯೋಚಿಸಿ ನಿರ್ಧರಿಸಿದಲ್ಲದೆ ನಡೆಯಲಾರದು. ಕಾರ್ಯವು ಎಷ್ಟೆಷ್ಟು ಘನವೂ ಗಭೀರವೂ ಆದುದೋ ಅದರ ವಿಷಯದ ಯೋಚನೆಯೂ ಅಷ್ಟಷ್ಟು ಗಂಭೀರವೂ ಅಗಾಧವೂ ಆಗಿರು

ವುದು. ಪರೋಪಕಾರ ಲೋಕಸಂಗ್ರಹಣ ಶಾಂತಿಸ್ಥಾಪನೆ ಮುಂತಾದ ಕಾರ್ಯಗಳ ಸಾಧನೆಗಾಗಿ ಮಹನೀಯರು ಹೇಗೆ, ಎಷ್ಟು ಅಗಾಧರೀತಿಯಿಂದ ಯೋಚಿಸಿ-ತಪಿಸುತ್ತಿರುವರೋ, ಹಾಗೆಯೇ ಪರಸ್ವಾಪಹರಣ, ಪರಪೀಡನ ಮುಂತಾದುವುಗಳಿಂದ ಶಾಂತತೆಯನ್ನು ನಾಶಮಾಡಿ ಪ್ರಜಾಹೃದಯದಲ್ಲಿ ಪ್ರಳಯವನ್ನೆಬ್ಬಿಸಲೂ ಅನೇಕರು ಪ್ರಯತ್ನಿಸುತ್ತ ಅದರ ಸಾಧನೆಗಾಗಿಯೂ ಅಹರ್ನಿಶಿ ಯೋಚಿಸುತ್ತಿರುವರು-ತಪಿಸುತ್ತಿರುವರು. ಸತ್ಕಾರ್ಯ ಮಾಡುವವರು ಹೇಗೆ ತಮ್ಮ ಕಾರ್ಯದಿಂದ ಶಾಶ್ವತ ಶಾಂತಿಸಮಾಧಾನಗಳ ಸ್ಥಾಪನೆಯಾಗಿ ಸಹಸ್ರಾರು ಮಂದಿಗೆ ಪ್ರಯೋಜನವುಂಟಾಗುವುದೆಂದು ಮನಸಾನಂಬಿ, ತನ್ಮೂಲಕ ಭಗವತ್ಸೇವೆಯು ನಡೆಯುವುದೆಂದು ಭಾವಿಸುವರೋ, ಆ ಕೆಲಸಗಳಿಗೆ ವಿಘ್ನಗಳನ್ನು ತಂದೊಡ್ಡುವ ದುರುಳರಿಗೂ, ಅವರ ದೃಷ್ಟಿಯಿಂದ, ತಾವು ಮಾಡುತ್ತಿರುವುದೇ ನ್ಯಾಯವೆಂದೂ, ಅದನ್ನು ಸಾಧಿಸುವುದರಲ್ಲಿ ಶ್ರದ್ಧಾಪೂರ್ವಕ ಎಷ್ಟು ಶ್ರಮೆಯನ್ನು ವಹಿಸಿದರೂ ಅದು ಸಾರ್ಥಕವಾಗುವುದೆಂದೂ ಭಾವನೆ ಇರುವುದು. ಹಾಗಲ್ಲವಿದ್ದರೆ, ಆಯಾಯ ಕಾರ್ಯಗಳನ್ನು ಕೊನೆಗಾಣುವಂತೆ ನಡೆಯಿಸುವುದಕ್ಕಾಗಿ ಆವಶ್ಯಕವಾದ ಯೋಜನಾಪ್ರವಾಹವು ಮುಂದರಿಯಲು ಅವಕಾಶವೇ ದೊರೆಯುವುದಿಲ್ಲ: ಸದ್ಯೋಜನೆ ಸತ್ಕಾರ್ಯಗಳಿಂದ ಸತ್ಫಲವೂ, ದುರ್ಯೋಜನೆ ದುಷ್ಕಾರ್ಯಗಳಿಂದ ದುಷ್ಫಲವೂ ಪ್ರಾಪ್ತವಾಗುವುದೆಂಬುದು -ಮಾವಿನ ಬಿತ್ತವನ್ನು ನೆಟ್ಟರೆ ಮಾವಿನ ಫಲವೂ ಬೇವಿನ ಬಿತ್ತವನ್ನು ನಟ್ಟು ಬೆಳೆಸಿದರೆ ಬೇವಿನ ಹಣ್ಣೂ ದೊರೆವುದೆಂಬ ಪ್ರಕೃತಿ ಧರ್ಮದಂತೆ ಸ್ವತಸ್ಸಿದ್ಧವಾಗಿರುವುದು.— ಆ ವಿಷಯದಲ್ಲಿ ಸಂಶಯವಿಲ್ಲ. ಆದರೂ ಈ ಉಭಯಕಾರ್ಯಗಳೂ ಸೃಷ್ಟ್ಯಾದಿಯಿಂದ ಸಾಂಪ್ರತಕಾಲದವರೆಗೂ ಏಕಪ್ರಕಾರವಾಗಿ ನಡೆಯುತ್ತಿರುವುವು. ಮುಂದೂ ನಡೆಯಲಿರುವುವು. ಇದಲ್ಲವೆ ಭಗವನ್ಮಾಯೆಯು!

ಸದ್ಯೋಜನೆಯ ಫಲವಾಗಿ ಪ್ರಾರಂಭವಾಗುವ ಒಂದಾನೊಂದು ಮಹತ್ಕಾರ್ಯಸಾಧನೆಗಾಗಿ ಅಹರ್ನಿಶಿ ಯೋಚಿಸಿ, ತಪಿಸಿ ನಿದ್ರಾಹಾರಗಳನ್ನೂ ಅಪೇಕ್ಷಿಸದೆ ಶ್ರಮಿಸುತ್ತಿರುವವರ ಆಶಯವು ಸಾಮಾನ್ಯಜನಸಮೂಹಕ್ಕೆ ಸುಲಭವಾಗಿ ಗ್ರಾಹ್ಯವಾಗದುದಕ್ಕೆ ಕಾರಣವೂ ಉಂಟು. ಏನೆಂದರೆ ಕಾರ್ಯಸಾಧಕನು ಯಾವ ಮಾರ್ಗವನ್ನು ಅನುಸರಿಸಿ, ಎಷ್ಟು ತೀಕ್ಷ್ಣತೆ

ಯಿಂದ ಯೋಚಿಸಿತೊಡಗಿರುವನೋ-- ತಪಿಸತೊಡಗಿರುವನೋ, ಅರ್ಥಾತ್ ತಪಸ್ಸು ಮಾಡತೊಡಗಿರುವನೋ ಅಷ್ಟು ತೀಕ್ಷ್ಣತೆಯಿಂದ ಆ ಮಾರ್ಗದಲ್ಲೇ ಚಿಂತಿಸಿದಲ್ಲದೆ ಆತನ ನಿಶ್ಚಯೋದ್ದೇಶವೂ, ಆತನು ಅವಲಂಬಿಸಿರುವ ಮಾರ್ಗದ ಸಾರ್ಥಕತೆಯೂ ಯಾರಿಗೂ ಗೋಚರಿಸದು. ಹಾಗೆ ಕಾರ್ಯಸಾಧನೆಗಾಗಿ ತಪಸ್ಸು ಮಾಡತೊಡಗುವವನ ಮಾನಸೇಂದ್ರಿಯವು ಆ ಸಂದರ್ಭದಲ್ಲಿ ಬೆಂಕಿಯಮೇಲಿಟ್ಟ ಪಾತ್ರೆಯಲ್ಲಿನ ಜಲದಂತೆ ಕುದಿಯತೊಡಗಿರುವುದು. ಆಗ ಹಿಂದಿನ ಅನೇಕಾನೇಕ ಅನುಭವಗಳೊಂದಿಗೆ ಮುಂದೆ ಹತ್ತಾರು ಸಂವತ್ಸರಗಳ ಅಥವ ಶತಮಾನಕಾಲದ ಸುಮಾರಿನಲ್ಲಿ ತನ್ನ ಕಾರ್ಯದ ಮಾರ್ಗದಲ್ಲಿ ನಡೆಯಬಹುದಾದ ಸ್ಥಿತಿಗಳೆಲ್ಲವೂ ಆತನ ಜ್ಞಾನನೇತ್ರದೆದುರಿಗೆ ಗೋಚರಕ್ಕೆ ಬರುವುವು. ಅವುಗಳನ್ನನುಸರಿಸಿ ಈಗ ತನ್ನ ಕಾರ್ಯಕ್ರಮವನ್ನು ಏರ್ಪಡಿಸಿ ನಡಿಸಬೇಕೆಂದು ನಿರ್ಧರಿಸಿಕೊಂಡು, ಸಾಧಕನು ಪ್ರಯತ್ನದಲ್ಲಿ ತೊಡಗುವನು. ಆದರೆ ವ್ಯವಹಾರ ಪ್ರಪಂಚದ ಸಾಮಾನ್ಯ ದೃಷ್ಟಿಯಿಂದ, ಆತನ ಹೊರಗಿನ ಕಾರ್ಯಕಲಾಪಗಳನ್ನು ನೋಡತಕ್ಕವರಿಗೆ ಅವು ಕೇವಲ ಗಭೀರವೂ ನಷ್ಟದಾಯಕವೂ ಎಂದು ತೋರುವುವಲ್ಲದೆ, ಅವುಗಳಿಂದ ಭವಿಷ್ಯತ್ಕಾಲದಲ್ಲಿ ಉಂಟಾಗುವ ಫಲಪ್ರಯೋಜನಗಳು ಆಗಲೇ ಗೋಚರಿಸವು. ಆದುದರಿಂದಲೇ ಮಹತ್ಕಾರ್ಯ ಸಾಧನೆಗೆ ತೊಡಗುವವರಿಗೆ ಎಲ್ಲಾ ದೇಶದಲ್ಲೂ ಪ್ರಾರಂಭದಲ್ಲಿ ಸಮಾಜದ ಒತ್ತಾಸೆಯು ದೊರೆಯದಿರುವುದಂತಿರಲಿ-ಬೇಕಾದಷ್ಟು ವಿಘ್ನವೂ, ಪ್ರೋತ್ಸಾಹವಂತಿರಲಿ-ಅತಿಶಯ ನಿರುತ್ಸಾಹವೂ ಉಂಟಾಗುತ್ತಿರುವುದು. ಆದರೂ ಉತ್ತಮದರ್ಜೆಗೆ ಸೇರಿದ ಕಾರ್ಯಸಾಧಕರು, ಆ ವಿಘ್ನ ನಿರುತ್ಸಾಹಗಳಿಗೆ ಹಿಂಜರಿಯದೆ, ತಮ್ಮ ಮಾರ್ಗದಲ್ಲಿ ಪ್ರಾಪ್ತವಾಗುವ ಸಕಲ ವಿಘ್ನರಾಶಿಗಳನ್ನೂ ತಮ್ಮ ತಪಸ್ಸಿನಿಂದ ಉತ್ಪನ್ನವಾಗುವ ಅಗ್ನಿಯಿಂದ ದಹಿಸಿ, ಮುಂದರಿದು ಕಾರ್ಯಸಾಧನೆ ಮಾಡಿಯೇ ಮಾಡುವರು. ಮತ್ತು ತರುಣಜನಾಂಗಕ್ಕೆ ಆದರ್ಶಪ್ರಾಯರಾಗಿ ನಕ್ಷತ್ರಗಳಂತೆ ತೇಜಸ್ವಿಗಳಾಗಿ ಕೀರ್ತಿಶರೀರದಿಂದ ನಿಂತೇ ನಿಲ್ಲುವರು !

ನಮ್ಮ ಕಥಾನಾಯಕರು ತಿರುವಾಂಕೂರು ಸಂಸ್ಥಾನದ ಆಡಳಿತವನ್ನು ಆದರ್ಶಸಂಸ್ಥಾನದ ಕೀರ್ತಿಗೆ ತಕ್ಕಂತೆ ನಡೆಯಿಸಬೇಕೆಂಬ ಉತ್ಸಾಹ ಶ್ರದ್ಧೆಗಳಿಂದ ಪ್ರೇರಿತರಾಗಿ ಕೈಗೊಂಡ ಕಾರ್ಯಕಲಾಪಗಳೂ, ದುರುಳರ ಮನ

ಸ್ಸಿಗೆ ವಿರೋಧಾಭಿಪ್ರಾಯವನ್ನುಂಟುಮಾಡಲು, ಅವರು ಮೇಲ್ಕಂಡಂತೆ ಶ್ರೀಮನ್ಮಹಾರಾಜರವರಲ್ಲಿ ದೂರುಹೇಳಿ, ಮಾಧವರಾಯರಿಗೆ, ಉದ್ಯೋಗದಲ್ಲಿ ನಿಲ್ಲದಂತೆ, ಆತಂಕವನ್ನು ತಂದಿಟ್ಟರಷ್ಟೆ! ತರುವಾಯ ಆ ಮಹನೀಯರು, ತಿರುವಾಂಕೂರು ದರ್ಬಾರಿನಿಂದ ತಿಂಗಳೊಂದಕ್ಕೆ ಒಂದು ಸಾವಿರ ರೂಪಾಯಿ ವಿಶ್ರಾಮವೇತನವನ್ನು ಪಡೆದು ನಿವೃತ್ತರಾಗಿ ತಮ್ಮ ಶೇಷಾಯುಷ್ಯವನ್ನು ವಿಶ್ರಾಂತಿಯಿಂದ ಕಳೆಯಬೇಕೆಂದು ಯೋಚಿಸಿ ಮದರಾಸು ಪಟ್ಟಣದಲ್ಲಿ ನಿಂತರು. ಅವರ ಸಾಮರ್ಥ್ಯವನ್ನು ಕುರಿತು ಬ್ರಿಟಿಷ್ ಸರ್ಕಾರಕ್ಕೆ ಈವರೆಗೇ ಚೆನ್ನಾಗಿ ಪರಿಚಯವಾಗಿದ್ದುದರಿಂದ, ಅವರಿಗೆ ವೈಸರಾಯರವರ ಶಾಸನ ಸಭೆಯಲ್ಲಿ ಒಂದು ಸಭ್ಯಪೀಠವನ್ನು ಕೊಡಲಿಚ್ಛಿಸಿ, ಅದನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು. ಆದರೆ ಸರ್. ಮಾಧವರಾಯರು ತಮಗೆ ಆ ವಿಷಯದಲ್ಲಿ ಅಪೇಕ್ಷೆಯಿಲ್ಲವೆಂಬುದನ್ನು ವ್ಯಕ್ತಪಡಿಸಿ, ಕೆಲಕಾಲ ಮದರಾಸು ಪಟ್ಟಣದಲ್ಲೇ ಸುಖವಾಸ ಮಾಡಿಕೊಂಡಿದ್ದರು.

ಅಮಾತ್ಯಶಿರೋಮಣಿ ಸರ್. ಟಿ. ಮಾಧವರಾಯರಿಗೆ ಉದ್ಯೋಗ ನಿವೃತ್ತಿಯಾಯಿತೆಂಬ ವಿಚಾರವು ಇಂಗ್ಲೆಂಡಿಗೆ ಮುಟ್ಟಿತು. ಒಡನೆ, ಅಲ್ಲಿ ಪಾರ್ಲಮೆಂಟಿನಲ್ಲಿದ್ದ ಮಿ|| ಹೆನ್ರಿಫ್ಯಾಸೆಟ್ ಎಂ. ಪಿ. ಎಂಬುವರು, ಮಾಧವರಾಯರಂತಹ ಪ್ರತಿಭಾವಂತರ ಶಕ್ತಿಯನ್ನು ಹುಳಿತುಕೊಂಡು ಒಂದೆಸೆಯಲ್ಲಿ ಬಿದ್ದಿರುವಂತೆ ಬಿಡುವುದು ತಕ್ಕುದಲ್ಲವೆಂದುಯೋಚಿಸಿ, ಇಂಡಿಯಾ ಸ್ಟೇಟ್ ಸೆಕ್ರಿಟರಿಯನ್ನು ಕಂಡು ಆ ಮಹನೀಯರಿಗೆ ಬ್ರಿಟಿಷ್ ಸರ್ಕಾರದಲ್ಲಿ ಒಂದು ಯೋಗ್ಯ ಉದ್ಯೋಗವನ್ನು ಒದಗಿಸಲು ಸಾಧ್ಯವಿಲ್ಲವೆ ಎಂದು ಪ್ರಶ್ನಿಸಿದರು. ಅಲ್ಲದೆ ಪಾರ್ಲಿಮೆಂಟ್ ಸಭೆಯಲ್ಲೇ, ಭಾರತದೇಶ ವಿಚಾರವನ್ನು ಕುರಿತು ಪ್ರಸಂಗಿಸುತ್ತಿದ್ದಾಗ್ಗೆ, —"ತಿರುವಾಂಕೂರು ಸಂಸ್ಥಾನವನ್ನು ಸರ್ ಮಾಧವರಾಯರು ವಿಶೇಷ ಜಾಣ್ಮೆ ರಾಜತಂತ್ರಜ್ಞತೆಗಳಿಂದ ಸಂರಕ್ಷಿಸಿದ್ದಾರೆ. ಅವರು ಅಲ್ಲಿಯ ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡಾಗ, ದೇಶವು ಎಂತಹ ಹೀನಸ್ಥಿತಿಯಲ್ಲಿದ್ದಿತೆಂಬುದನ್ನೂ, ಸಂಸ್ಥಾನದ ಆಡಳಿತವನ್ನು ಅವರು ಬಿಡುವಾಗ್ಗೆ ಅಲ್ಲಿ ಎಂತಹ ಉನ್ನತಸ್ಥಿತಿಯು ನೆಲೆಗೊಂಡು ದೇಶವು-'ಆದರ್ಶಸಂಸ್ಥಾನ'ವೆಂದು ಕರೆಸಿಕೊಳ್ಳುವ ಸೌಭಾಗ್ಯವು ಅದಕ್ಕೆ ಹೇಗೆ ಪ್ರಾಪ್ತಿಸಿದ್ದಿತೆಂಬುದನ್ನೂ ನೋಡಿದರೆ, ರಾಯರವರ ದಕ್ಷತೆಯು ಎಂತಹದೆಂಬುದು ಗೋಚರವಾದೀತು" ಎಂದು ಮುಂತಾಗಿ ಹೇಳಿರುತ್ತಾರೆ.

ಆ ಕಾಲದಲ್ಲೇ ಕಲ್ಕತ್ತಾ ರಿವ್ಯೂ ಎಂಬೊಂದು ಆಂಗ್ಲ ಪತ್ರಿಕೆಯಲ್ಲಿ, ನಮ್ಮ ಕಥಾನಾಯಕರ ಶಿಷ್ಯರಾದ ಮಹಾರಾಜಾ ರಾಮವರ್ಮರವರಿಂದ 'ಒಬ್ಬ ದೇಶೀಯ ರಾಜತಂತ್ರವಿಶಾರದರು' ಎಂಬ ಶಿರೋನಾಮದಿಂದ ನಮ್ಮ ಕಥಾನಾಯಕರ ಮೇಲೆ ಬರೆಯಲ್ಪಟ್ಟ ಒಂದು ಉತ್ತಮಲೇಖನವು ಪ್ರಕಟವಾಯಿತು. ಆ ಲೇಖನದಲ್ಲಿ ಅವರ ಶಕ್ತಿ ಸಾಮರ್ಥ್ಯಗಳು, ಋಜು ಸ್ವಭಾವ ಸ್ವಾಮಿಭಕ್ತಿ ಮುಂತಾದ ಗುಣಾತಿಶಯಗಳ ವರ್ಣನೆಯಾದ ಮೇಲೆ, ರಾಜರು-'ಸರ್. ಮಾಧವರಾಯರು ಇನ್ನೂ ದೃಢಾಂಗರಾಗಿಯೂ, ಮಧ್ಯಮ ವಯಸ್ಕರಾಗಿಯೂ ಇದ್ದಾರೆ. ಅವರ ವಯಸ್ಸು ಇನ್ನೂ ನಾಲ್ವತ್ತೈದಕ್ಕೆ ಮೀರಿಲ್ಲ. ರಾಜಕಾರ್ಯವೆಂಬುದು ಅವರ ಸ್ವಭಾವಕ್ಕೆ ಪ್ರಕೃತಿ ಧರ್ಮವೋ ಎಂದು ಹೇಳುವಂತೆ ಇದೆಯೆಂಬುದಕ್ಕೆ ಅಭ್ಯಂತರವಿಲ್ಲ. ಅವರು ಇನ್ನೂ ಹತ್ತುವರ್ಷಕಾಲ ಕೆಲಸ ನೋಡಲು ಶಕ್ತರಾಗಿದ್ದಾರೆಂಬುದಕ್ಕೆ ಸಂಶಯವಿಲ್ಲ' ಎಂದು ಬರೆದಿದ್ದರು. ಹಿಂದೂಸ್ಥಾನದ ಬ್ರಿಟಿಷ್ ಸರ್ಕಾರವು, ಅವರಿಗೆ ಯಾವುದಾದರೂ ಒಂದು ಯೋಗ್ಯ ಉದ್ಯೋಗವನ್ನು ಕೊಡಬೇಕೆಂದು ಒತ್ತಾಯ ಪಡಿಸತೊಡಗಿತು. ಆ ವೇಳೆಗೆ ಸರಿಯಾಗಿ, ಇಂದೂರು ಮಹಾರಾಜಾ ತುಕೋಜಿರಾವ್ ಹೋಳ್ಕರನು, ತನ್ನ ರಾಜ್ಯ ಕಾರ್ಯಭಾರವನ್ನು ನಿರ್ವಹಿಸುವುದಕ್ಕಾಗಿ ಯಾರಾದರೊಬ್ಬ ಯೋಗ್ಯ ಮಂತ್ರಿಶ್ರೇಷ್ಠರನ್ನು ಕಳುಹಿಸಬೇಕೆಂದು ಇಂಡಿಯಾ ಸರ್ಕಾರವನ್ನು ಕೇಳಿಕೊಂಡನು. ಅದನ್ನನುಸರಿಸಿ ಮಾಧವರಾಯರು ೧೮೭೩ನೆಯ ಸಂ॥ದಲ್ಲಿ ಇಂದೂರು ದಿವಾನ್ಗಿರಿಯ ಅಧಿಕಾರವನ್ನು ಸ್ವೀಕರಿಸಿದರು.

ಇಂದೂರು ಸಂಸ್ಥಾನದ ಅಧಿಕಾರದಲ್ಲಿ ಇವರು ಬಹು ದಿನಗಳು ಇರಲು ಅವಕಾಶ ದೊರೆಯಲಿಲ್ಲ. ಅಲ್ಲಿ ಅವರಿದ್ದುದು ಕೇವಲ ಎರಡು ವರ್ಷಗಳು ಮಾತ್ರ! ಅಲ್ಲಿದ್ದ ಅಷ್ಟು ಅಲ್ಪಕಾಲದಲ್ಲೇ ಅವರು ಪ್ರಜಾಸಮೂಹಕ್ಕೆ ಅತ್ಯುಪಯುಕ್ತವಾದ ರಸ್ತೆ, ಸೇತುವೆ, ಕಾಲುವೆಗಳ ರಚನೆಯ ವಿಷಯದಲ್ಲಿ ಹೆಚ್ಚು ಪರಿಶ್ರಮ ತೆಗೆದುಕೊಂಡರು. ಇಂದೂರು ಸಂಸ್ಥಾನದ ನ್ಯಾಯಶಾಸ್ತ್ರ ಚಟ್ಟ (ಇಂದೂರು ಪೀನಲ್ ಕೋಡ್) ವನ್ನು ತಯಾರಿಸಲು ಇವರೇ ಪ್ರಾರಂಭಿಸಿದವರು. ಅದನ್ನು ಇವರ ಅನುಬಂಧಿಗಳೂ, ಇವರ ತರುವಾಯ ದಿವಾನ್ ಪದವಿಗೆ ಬಂದವರೂ ಆದ ದಿವಾನ್ ಬಹಾದುರ್ ರಘುನಾಥ

ರಾಯರು ಪೂರ್ತಿಗೊಳಿಸಿದರು. ಆ ಸಂಸ್ಥಾನದಲ್ಲಿದ್ದಾಗಲೇ ಅವರು, ಅಫೀಮು ವ್ಯಾಪಾರ, ಮತ್ತು ಇಂದೂರಿನ ರೈಲ್ವೆ ವಿಸ್ತಾರ ಮುಂತಾದ ಅನೇಕ ವಿಚಾರಗಳಮೇಲೆ ಟಿಪ್ಪಣಿಗಳನ್ನು ಬರೆದಿಟ್ಟರು. ಅವುಗಳು, ಇವರ ತರುವಾಯ ಬಂದ ಅಧಿಕಾರಿಗಳಿಂದ ವಿಶೇಷವಾಗಿ ಉಪಯೋಗಿಸಿ ಕೊಳ್ಳಲ್ಪಟ್ಟುವು. ಇವರು ಆ ಸಂಸ್ಥಾನದಿಂದ ೧೮೭೪ರಲ್ಲಿ ಹೊರಟು ಹೋಗತಕ್ಕದ್ದಿದ್ದರೂ, ಮಹಾರಾಜನ ಪ್ರಾರ್ಥನೆಯ ಮೇರೆಗೆ ಇನ್ನೂ ಒಂದು ವರ್ಷಕಾಲ ಅಲ್ಲೇ ಇರಬೇಕಾಯಿತು. ಮುಂದೆ ಸ್ವಲ್ಪದಿನಗಳೊಳ ದಾಗಿಯೇ, ಬರೋಡಾ ಸಂಸ್ಥಾನದ ಮಹಾರಾಜಾ ಮಲ್ಹಾರಿರಾವ್ ಗಾಯ ಕ್ವಾರರನ್ನು ಅನುಚಿತ ರಾಜ್ಯಪಾಲನೆಯ ಕಾರಣದಿಂದ ಪದಚ್ಯುತರನ್ನಾಗಿಸಿ ದ್ದರಿಂದ ಬ್ರಿಟಿಷ್ ಸರ್ಕಾರದವರು ಆ ದೇಶದ ಆಡಳಿತವನ್ನು ಕ್ರಮಪಡಿಸುವು ದಕ್ಕಾಗಿ, ಸರ್. ಮಾಧವರಾಯರನ್ನು ಬಿಟ್ಟು ಕೊಡಬೇಕೆಂದು ಇಂದೂರು ಹೋಲ್ಕರ್ ಮಹಾರಾಜನನ್ನು ಕೇಳಿಕೊಂಡರು. ತುಕ್ಕೋಜೀರಾವ್ ಮಹಾ ರಾಜನೂ ಅದೇ ಮೇರೆಗೆ ಅವರನ್ನು ಮನಸ್ಸಿಲ್ಲದೆ ಬಿಟ್ಟುಕೊಡಬೇಕಾಯಿತು. ಶ್ರೀಯುತ ಮಾಧವರಾಯರು, ೧೮೭೫ನೆಯ ಸಂ॥ದಲ್ಲಿ ಬರೋಡಾ ಸಂಸ್ಥಾ ನದ ದಿವಾನ್ ರೀಜಂಟರಾಗಿ ನಿಯಮಿತರಾದರು.



## ಅಧ್ಯಾಯ ೪ "ಬರೋಡಾ ಸಂಸ್ಥಾನ"

ಇವರು ಅಧಿಕಾರವನ್ನು ವಹಿಸಿಕೊಂಡಾಗ ಆ ಸಂಸ್ಥಾನದ ಸ್ಥಿತಿಯು ಬಹು ಭಯಂಕರವಾಗಿತ್ತೆಂದು ವರ್ಣಿತವಾಗಿದೆ. ಮೊರಟು ಮಹಾರಾಷ್ಟ್ರ ದಿಂದ ಕೂಡಿದ ಆದೇಶದಲ್ಲಿ ಎತ್ತನೋಡಿದರೂ, ಜಗಳ ಹೊಡೆದಾಟಗಳೂ, ಮಾರಾಮಾರಿಗಳೂ ನಿರಂತರ ಇರುತಿದ್ದುವು. ಯಾವ ಒಗೆಯ ಉನ್ನತಾದ ರ್ಶವೂ ಇಲ್ಲದಿದ್ದುದರಿಂದ ಒಬ್ಬರೊಬ್ಬರ ಭುಜಬಲ ಪರೀಕ್ಷೆಗಾಗಿ ನಡೆವ ಮಲ್ಲಯುದ್ಧಗಳೇ ದೇಶದ ಎಲ್ಲಾ ಭಾಗದಲ್ಲೂ ತುಂಬಿದ್ದುವು. ಇಂತಹ ಮಲ್ಲ ಯುದ್ಧಗಳಲ್ಲಿ ಉಭಯಪಕ್ಷದವರಿಗೂ ಜಿದ್ದು ಉಂಟಾಯಿತೆಂದರೆ, ಅದು ಪ್ರಾಣಾಂತಕಾರಿಯಾದ ಯುದ್ಧವಾಗಿ ಪರಿಣಮಿಸಿ ರಕ್ತ ಪ್ರವಾಹವನ್ನು

ಹರಿಸುವವರೆಗೂ ಶಮನವಾಗುತ್ತಿರಲಿಲ್ಲ. ಜನಗಳಲ್ಲಿ ಲೂಟಿ-ದರೋಡೆಗಳನ್ನಾದರೂ ಮಾಡಿ ಧನಧಾನ್ಯಗಳನ್ನು ಶೇಖರಿಸಬೇಕೆಂಬ ದುರಾಸೆಗೂ ದುರ್ಭಾವನೆಗೂ ಅಂತ್ಯವೇ ಇರಲಿಲ್ಲ. ಇಂತಹ ಅವ್ಯವಸ್ಥೆಯನ್ನು ನಿವಾರಿಸಿ ಪ್ರಜಾವರ್ಗದಲ್ಲಿ ಸುಖಶಾಂತಿಗಳನ್ನು ಸ್ಥಾಪಿಸಲು ವಜ್ರಮುಷ್ಟಿಯನ್ನೂ, ಅಲ್ಪಸ್ವಲ್ಪ ಬಿರುಗಾಳಿಗಳಿಗೆಲ್ಲ ಚಲಿಸದ ಮನಸ್ಥಿತಿಯ ವಜ್ರಹೃದಯವನ್ನೂ ಗಳಿಸಿದ ಧೀರನೊಬ್ಬನನ್ನು ಆ ದೇಶವು ಅಪೇಕ್ಷಿಸುತ್ತಿತ್ತು. ಅಂತೆಯೇ ಸರ್. ಟಿ. ಮಾಧವರಾಯರ ವಜ್ರಹೃದಯವೂ, ಸರ್. ಫಿಲಿಪ್ ಸ್ಯಾಂಡೀಸ್ ಮೆಲ್‌ವಿಲೆ ಎಂಬ ಬ್ರಿಟಿಷ್ ರೆಸಿಡೆಂಟಿನ ವಜ್ರಮುಷ್ಟಿಯೂ ಏಕವಾಗಿ ದೇಶೋದ್ಧಾರಕ್ಕೆ ಸಹಾಯಕವಾದುವು.—

ಪ್ರಜೆಗಳ ಧನಮಾನಪ್ರಾಣಗಳಿಗೆ ಸುರಕ್ಷಣೆಯನ್ನೂ, ದೇಶದಲ್ಲಿ ಸುಖಶಾಂತಿಗಳನ್ನೂ ಸ್ಥಾಪಿಸಲು ದುಷ್ಟದಮನವು ಎಷ್ಟು ಪ್ರಮಾಣದಿಂದ ಅವಶ್ಯಕವಾಗಿದ್ದಿತೋ, ದೇಶದ ರಾಜ್ಯಭಾರದಲ್ಲಿ ಒಂದು ಕ್ರಮವನ್ನು ಏರ್ಪಡಿಸತಕ್ಕದ್ದೂ, ಭೂಕಂದಾಯದ ಇಲಾಖೆಯನ್ನು ಸುಧಾರಿಸಿ ಸುಸ್ಥಿತಿಯಲ್ಲಿಡತಕ್ಕದ್ದೂ ಅಷ್ಟೇ ಅವಶ್ಯಕವೂ ಕಷ್ಟಸಾಧ್ಯವೂ ಆಗಿದ್ದಿತು. ಮಾಧವರಾಯರು ಆ ಸಂಸ್ಥಾನದ ರಾಜ್ಯಸೂತ್ರಗಳನ್ನು ವಹಿಸುವುದಕ್ಕೆ ಬಹುಕಾಲದ ಹಿಂದಿನಿಂದಲೂ ಆ ದೇಶದಲ್ಲಿ ಭೂಮಿಯನ್ನು ವ್ಯವಸಾಯಕ್ಕಾಗಿ ಪ್ರಜೆಗಳಿಗೆ ಬಿಟ್ಟುಕೊಟ್ಟಿದ್ದ ಪದ್ಧತಿಯೇ ವಿಚಿತ್ರವಾಗಿದ್ದಿತು. ಸಂಸ್ಥಾನದ ಭೂಕಂದಾಯವು ಸರದಾರರೆಂದು ಕರೆಯಲ್ಪಡುತ್ತಿದ್ದ ಅನೇಕಮಂದಿ ಶ್ರೀಮಂತರಲ್ಲಿ ಸರಕಾರದಿಂದ ಹಂಚಿಕೊಡಲ್ಪಟ್ಟಿದ್ದು, ಅವರು ಸಾಗುವಳಿಗಾಗಿ ಇತರ ಅನೇಕ ಕಾರರಿಗೆ ಆ ಭೂಮಿಯನ್ನೇ ವಿಭಾಗಿಸಿ ವಹಿಸಿ ಕೊಡುತ್ತಿದ್ದರು. ಆ ಸಾಹುಕಾರರಾದರೋ ತಮ್ಮಬಳಿ ಆಯುಧ ಯುಕ್ತವಾದ ಸೈನ್ಯವನ್ನಿಟ್ಟುಕೊಂಡು, ತಮ್ಮ ಕೈಕೆಳಗಿನ ರೈತರಿಂದ ಸಾಧ್ಯವಿದ್ದಷ್ಟೂ ದುಡಿಸಿಕೊಂಡು, ದವಸಧಾನ್ಯಗಳನ್ನು ಗಳಿಸಿ ಪುಷ್ಟರಾಗುವಲ್ಲಿ, ಸ್ವಾಭಾವಿಕವಾಗಿಯೇ ಎಂದೂ ಅಲಸರಾಗುತ್ತಿದ್ದಿಲ್ಲ. ಇದರಿಂದ ಧನವಂತರು ಬಡವರೆನ್ನದೆ-ರೈತವರ್ಗವು ಹೇಳಲಾಗದ ಅಸಹ್ಯ ವೇದನೆಗಳಿಗೆ ಗುರಿಯಾಗಿ, ಸುಖವೆಂದರೇನೆಂಬುದನ್ನು ಸ್ವಪ್ನದಲ್ಲೂ ಅರಿಯದೆ ನಿತ್ಯಮರಣ ದುಃಖವನ್ನು ಅನುಭವಿಸುತ್ತಿದ್ದರು. ಕೊಳ್ಳೆಯೂ ಕೊಲೆಸುಲಿಗೆಗಳೂ ನಿತ್ಯ ವ್ಯವಹಾರಕೃತ್ಯಗಳೋ ಎಂಬಂತೆ ಸರ್ವ

ಸಾಮಾನ್ಯವಾಗಿ ನಡೆಯುತ್ತಿದ್ದವು. ಮೇಲ್ಕಂಡಂತೆ ಭೂಕಂದಾಯದ ಗುತ್ತಿಗೆಯನ್ನು ಸರದಾರರಿಗೆ ವಹಿಸಿಬಿಟ್ಟಿದ್ದುದರಿಂದ ಸರ್ಕಾರದವರು ನೇರವಾಗಿ ರೈತರ ಕಷ್ಟ ನಷ್ಟಗಳ ವಿಚಾರಕ್ಕಾಗಿ ಪ್ರವೇಶಿಸುವಂತೆ ಇರಲಿಲ್ಲ. ಈ ಅವ್ಯವಸ್ಥೆಗಳನೆಲ್ಲ ಸಾವಧಾನವಾಗಿ ಪರಿಶೀಲಿಸಿದ ಸರ್. ಮಾಧವರಾಯರು, ದರ್ಬಾರಿನಿಂದ ನವೀನ ನ್ಯಾಯಚಟ್ಟಗಳನ್ನು ಮಂಜೂರು ಮಾಡಿಸಿ ಅವುಗಳ ಸಹಾಯದಿಂದ ಮೇಲ್ಕಂಡ ಸರದಾರರೆಲ್ಲರೂ ತಮ್ಮ ಗುತ್ತಿಗೆಯ ಸಂಬಂಧದ ಹಕ್ಕು ಬಾಧ್ಯತೆಗಳನ್ನು ಸರ್ಕಾರಕ್ಕೆ ಮಾರಿಬಿಡಬೇಕೆಂದು ಒತ್ತಾಯಪಡಿಸಿದರು. ಆದರೆ, ಶಿವಾಜಿ ಬಾಜೀರಾವ್ ನಾನಾಫರ್ನವೀಸ್ ನಾನಾರಾವ್ ಮುಂತಾದ ಮರಾಠಾವೀರರ ಆದರ್ಶಕೃತ್ಯಗಳಿಂದ ಹುರಿದುಂಬಿಯೂ ಅವರ ತೀಕ್ಷ್ಣರಕ್ತವು ಧಮನಿಗಳಲ್ಲಿ ಹರಿಯುತ್ತಲೂ ಇದ್ದುದರಿಂದ ಆ ಮರಾಠಾಸರದಾರರು ಅಷ್ಟು ಸುಲಭವಾಗಿಯೇ ಆ ನವೀನ ಅಧಿಕಾರವನ್ನು, ಒಪ್ಪಿ ಅದಕ್ಕೆ ತಲೆಬಾಗಿ ನಡೆಯಲು ಸಮ್ಮತಿಸಲಿಲ್ಲ. ಅವರಿಂದ ಪ್ರೇರಿತರಾದ ಅನೇಕ ಮಂದಿ ವಕೀಲರು ಅವರ ಪಕ್ಷವನ್ನು ಸಮರ್ಥಿಸುವ ನ್ಯಾಯ ನಿಬಂಧನೆಯ ಪ್ರಕರಣಗಳನ್ನೂ, ಪೂರ್ವಾಚಾರದ ಆಧಾರವನ್ನೂ ಉದಹರಿಸಿ, ಆ ಹೊಸ ದಿವಾನರ ದರ್ಪಕ್ಕೆಲ್ಲ ಬೆದರಬೇಡಿರೆಂದೂ, ನ್ಯಾಯಸಾಧನೆಗಾಗಿ ಇಂಗ್ಲೆಂಡಿನ ಪ್ರಿವಿ ಕೌನ್ಸಿಲ್ಲುವರೆಗಾದರೂ ಹೋಗೋಣವೆಂದೂ ಹೇಳಿ, ಅವರಿಗೆ ಧೈರ್ಯ ಕೊಡುತ್ತಿದ್ದರು. ಆದರೆ, ಮಾಧವರಾಯರು ಈ ಅಲ್ಪ ಅಡಚಣೆಗಳಿಗೆಲ್ಲ ಬೆದರಲಿಲ್ಲ-ಅವರ ಕಾರ್ಯಪ್ರಯತ್ನವು ನಿರ್ಬಾಧಕವಾಗಿ ಸಾಗಿದ್ದಿತು. ನ್ಯಾಯನೀತಿಗಳನ್ನು ಮೆಚ್ಚಿಕೊಂಡು ಸಾಮಕ್ಕೆ ಒಳಪಡುವಂತಹ ಸಾಧುಜನಗಳನ್ನು ಸಾಮೋಪಾಯದಿಂದಲೂ, ಅದಕ್ಕೆ ಬಗ್ಗದ ಪುಂಡರನ್ನು ಭಯೋತ್ಪಾದನೆಗೆ ಒಳಪಡಿಸಿಯೂ, ಕೇವಲ ಮೂರ್ಖತನದ ದಂಡಸಾಧ್ಯರನ್ನು ದೇಶದಿಂದ ಗಡೀಪಾರು ಮಾಡಿಸಿಯೂ, ಹೀಗೆ ದೇಶದಲ್ಲಿ ಶಾಂತಿಯನ್ನು ಸ್ಥಾಪಿಸಿದರು.—

ಸರದಾರರಿಂದ ಭೂಕಂದಾಯವನ್ನು ಸಂಗ್ರಹಿಸುವಿಕೆಯಲ್ಲಿ ಇದ್ದ ಕಷ್ಟವನ್ನು ಹಾಗೂ ಹೀಗೂ ಕೈವಶಪಡಿಸಿಕೊಂಡು ಯೋಗ್ಯರೀತಿಯಿಂದ ಉಪಶಮನ ಮಾಡಿದಮೇಲೆ, ಅದೇ ಸಂಬಂಧದ ಮತ್ತೊಂದು ಪ್ರಶ್ನೆಯು ಅವರಿಗೆ ಹೆಚ್ಚು ವಿಚಾರಕರವಾಗಿ ಪ್ರಾಪ್ತಿಸಿತು. ಮೇಲ್ಕಂಡ ಸರದಾರರ

ಸ್ಥಾನವು ರಾಜ್ಯದಲ್ಲಿ ಯಾವ ಅಂತಸ್ತಿನದೆಂಬುದು ಗೊತ್ತಾಗಿರಲಿಲ್ಲ. ಅವರು ಯುದ್ಧಕಾಲದಲ್ಲಿ ಪ್ರಭುತ್ವಕ್ಕೆ ಆವಶ್ಯಕವೆನಿಸುವ ಸೇನೆಯನ್ನೂ ಧನವನ್ನೂ ಒದಗಿಸುವ ಒಪ್ಪಂದದಿಂದ ಅವರವರ ಸ್ವಾಮ್ಯಕ್ಕೊಳಪಟ್ಟಿದ್ದ ಭೂಭಾಗಗಳಮೇಲೆ, ಕೇವಲ ನಿರಂಕುಶಾಧಿಕಾರವನ್ನುಂಟಾಗಿದ್ದರು. ಅವರ ಅಧಿಕಾರವು ಹಾಗೆ ನಿರಂಕುಶವಾಗಿದ್ದವರೆಗೂ, ಪ್ರಭುತ್ವವು ಸಂಸ್ಥಾನದ ಒಟ್ಟು ಮೇಲ್ಮೆಗೆ ಸಂಬಂಧಪಟ್ಟಂತೆ ಯಾವ ಏರ್ಪಾಡುಮಾಡಲೂ ಸಾಧ್ಯವಿರಲಿಲ್ಲ. ಅವರಾದರೋ ಕೇವಲ ಮನಸ್ವೀ ಆಚರಿಸುತ್ತಾ, ನ್ಯಾಯನೀತಿ ಧರ್ಮಗಳನ್ನು ಲಕ್ಷ್ಯೆಗೇ ತಾರದೆ ಇರುತ್ತಿದ್ದರು. ಇಂತಹ ಸ್ಥಿತಿಯಲ್ಲೂ ಸರ್. ಮಾಧವರಾಯರು ಹತಾಶರಾಗಲಿಲ್ಲ. ಪೂರ್ವದ ಆ ಸಂಬಂಧ ಕಾಗದಪತ್ರಗಳನ್ನೆಲ್ಲ ಹುಡಿಕಿಸಲು, ಅವರಲ್ಲೊಬ್ಬೊಬ್ಬರಿಂದಲೂ ಕಂದಾಯರೂಪದಲ್ಲಿ ಸಂಸ್ಥಾನಕ್ಕೆ ಸಲ್ಲಬೇಕಾದ ಅಪಾರದ್ರವ್ಯವು ಬಾಕೀ ಇದ್ದುದಾಗಿ ತಿಳಿಯಬಂತು. ಒಡನೆ ಲೇಶಮಾತ್ರವೂ ಸಾವಕಾಶಮಾಡದೆ ಆದನ್ನೆಲ್ಲ ಶೇಖರಿಸಿ, ಹದಿನೇಳು ಹದಿನೆಂಟು ವರ್ಷಗಳಿಂದಲೂ ಕೊಡದೆ ನಿಲ್ಲಿಸಿಕೊಂಡಿದ್ದ ಆ ಹಣವನ್ನೆಲ್ಲ ಬಡ್ಡಿ ಸಮೇತ ತತ್ಕ್ಷಣವೇ ಕೊಟ್ಟುಬಿಡಬೇಕೆಂದು ರಾಜಾಜ್ಞೆಗಳನ್ನು ಕಳುಹಿಸಿದರು. ಹಣಕೊಡದೆ ಇದ್ದವರ ಭೂಮಿಕಾಣಿಗಳು, ಬಾಕಿಗಾಗಿ ಸರ್ಕಾರದಿಂದ ವಹಿಸಿಕೊಳ್ಳಲ್ಪಟ್ಟುವು. ಈ ವಿದ್ಯಮಾನಗಳನ್ನು ಒಪ್ಪಿಕೊಳ್ಳದೆ ತಿರುಗಿಬಿದ್ದ ಹಲವರನ್ನು ಬನಾರಸ್ ಮುಂತಾದ ದೂರಸ್ಥಳಗಳಿಗೆ ಗಡೀಪಾರು ಮಾಡಿದರು. ಇತರ ಹಲವರ ಭೂಸ್ವಾಸ್ಥ್ಯಗಳನ್ನು ಬಹು ಬೆಲೆ ಕೊಟ್ಟು ಕೊಂಡುಕೊಂಡರು. ಇದರಿಂದಲೆಲ್ಲ, ಈ ಸರದಾರ ಸಂಬಂಧದ ಪ್ರಶ್ನೆಯು ಒಂದೇ ಬಾರಿಗೆ ಸಂಪೂರ್ಣವಾಗಿ ಹತೋಟಿಗೆ ಬಾರದಿದ್ದರೂ, ಎಷ್ಟೋ ಮಟ್ಟಿಗೆ ಕಡಮೆಯಾಗಿ ಮುಂದೆ ಹತೋಟಿ ತಪ್ಪದಂತೆ ನೋಡಿಕೊಳ್ಳಲು ಸಾಧ್ಯವೆನಿಸುವಂತಾಯಿತು.

ಇದಕ್ಕಿಂತಲೂ, ಕಷ್ಟತರವಾದ ಮತ್ತೊಂದು ಪ್ರಶ್ನೆಯೂ, ಆ ಸಂಸ್ಥಾನದಲ್ಲಿ ರೂಢಿಯಲ್ಲಿತ್ತು. ಶ್ರೀ ಮಾಧವರಾಯರು ಅದನ್ನೂ ಬಹು ಜಾಗರೂಕತೆಯಿಂದ ಬಿಡಿಸಲು ಪ್ರಯತ್ನಿಸಿದರು. ಆ ದೇಶದ ಮೂಲಬಲದಲ್ಲಿ ಅರಬರೂ, ಕಾಬೂಲಿಗಳೂ ತುಂಬಿದ್ದರು. ಅವರನ್ನು ಜನರು ಗೌರವಕ್ಕಾಗಿ 'ಸೋಲ್ಜರು' ಗಳೆಂದು ಕರೆಯುತ್ತಿದ್ದರು. ಸರ್ಕಾರವು ಅವ

ರಿಗೆ ಆಯುಧಗಳನ್ನು ಧರಿಸುವ ಸರ್ವಸ್ವಾತಂತ್ರ್ಯವನ್ನೂ ಕೊಟ್ಟಿದ್ದುದರಿಂದ ಅವರು, ಎಲ್ಲೆಲ್ಲಿ ಹೋದರೆ ಅಲ್ಲೆಲ್ಲ - ಅಲ್ಪ ಸ್ವಲ್ಪ ಕಾರಣಗಳಿಗೆಲ್ಲ ಕೋಪಗೊಂಡು ಜನಗಳ ಮೇಲೇರಿಹೋಗಿ ಧಾಂದಲೆ ಮಾಡುತ್ತ ಪ್ರಜಾಶಾಂತಿಗೆ ಭಂಗವನ್ನುಂಟುಮಾಡುತ್ತಿದ್ದರು. ಈ ದುಷ್ಟಗ್ರಹದ ಪೀಡೆಯಿಂದ ನಿವಾರಣೆಯನ್ನು ಹೊಂದುವುದು ಹೇಗೆಂದು ಪ್ರಾರಂಭದಲ್ಲಿ ಮಾಧವರಾಯರಿಗೆ ಚಿಂತೆಯುಂಟಾಗದಿರಲಿಲ್ಲ. ಆದರೆ, ಅವರ ದೃಢಸಂಕಲ್ಪದ ಎದುರಿಗೆ ಯಾವ ಪ್ರತಿಬಂಧಕವೂ ನಿಲ್ಲುವಂತಿರಲಿಲ್ಲ. ಪ್ರಾರಂಭದಲ್ಲಿ ಕೆಲವುಕಾಲ ಆ ದುಷ್ಟಜನಗಳಲ್ಲಿ, ನಿಧಾನವಾಗಿ ಒಬ್ಬೊಬ್ಬನನ್ನೆ ಸೈನ್ಯದಿಂದ ತೆಗೆದು ದರ್ಬಾರಿನಲ್ಲಿ ಉದ್ಯೋಗವನ್ನು ಕೊಡುತ್ತಲೂ - ಮುಂದೆ, ಸೈನ್ಯದ ಕೆಲವು ಭಾಗಗಳನ್ನೇ ತೆಗೆದುಹಾಕಿ, ಅವರಿಗೆ ವಿರಾಮವೇತನಾದಿಗಳನ್ನು ಕೊಡುತ್ತಲೂ ಹೀಗೆ ಸ್ವಲ್ಪಕಾಲದೊಳಗಾಗಿಯೇ ಆ ಪ್ರಶ್ನೆಯನ್ನೂ ಸುಲಭವಾಗಿಯೇ ಬಿಡಿಸಿದರು.

ಜನಮನದಲ್ಲಿ ಸಮಾಧಾನವು ಸ್ಥಾಪನೆಯಾಗುವುದಕ್ಕೆ ಪ್ರತಿಬಂಧಕವನ್ನುಂಟುಮಾಡುತ್ತಿದ್ದ ಮೇಲ್ಕಂಡ ಅಡಚಣೆಗಳನ್ನು ನಿವಾರಿಸಿದನಂತರ, ಶ್ರೀ ಮಾಧವರಾಯರು, ಸಂಸ್ಥಾನದ ಅಂತರ್ಸುರಕ್ಷಣೆಗೆ ಆವಶ್ಯಕವಾದ ವಿಚಾರಗಳನ್ನು ಕುರಿತು ಯೋಚಿಸಿದರು. ನ್ಯಾಯಾಸ್ಥಾನಗಳೂ, ಪಾಠಶಾಲೆಗಳೂ, ವಾಚನಾಲಯಗಳೂ, ಇತರ ಅನೇಕ ಪ್ರಜಾಹಿತ ಸಂಸ್ಥೆಗಳೂ ಸ್ಥಾಪಿಸಲ್ಪಟ್ಟುವು. ರಾಜ್ಯಪಾಲನಾಕಾರ್ಯದಲ್ಲಿ ಸಹಕರಿಸುವುದಕ್ಕಾಗಿ ಮದರಾಸು, ಮುಂಬಯಿ ಮುಂತಾದ ಸ್ಥಳಗಳಿಂದ, ವಿದ್ಯಾವಂತರೂ ಶಕ್ತರೂ ಆದ ಪ್ರೌಢರು ಕರೆಯಿಸಲ್ಪಟ್ಟರು. ಲಾಭಕರವಲ್ಲದೆ, ಕೇವಲ ಪ್ರಜಾಹಿಂಸಕವೆಂದು ತೋರಿದ ಅನೇಕ ಕಂದಾಯಗಳು ತೆಗೆದುಹಾಕಲ್ಪಟ್ಟವು. ಸಂಸ್ಥಾನದ ಮುಖ್ಯ ಮುಖ್ಯ ಪಟ್ಟಣಗಳಲ್ಲೆಲ್ಲ, ಆರೋಗ್ಯವಿಧಿಗೆ ವಿರೋಧವಾಗಿ ಗಾಳಿ ಬೆಳಕುಗಳಿಗೆ ಆಸ್ಪದ ಕೊಡದಂತೆ ಇದ್ದ ಚಿಕ್ಕ ಪುಟ್ಟ ಮನೆಗಳನ್ನೆಲ್ಲ ಸುಡಿಸಿ, ಆರೋಗ್ಯಶಾಸ್ತ್ರಕ್ಕನುಗುಣವಾಗಿ ಒಂದೇ ಬಗೆಯಾದ ಮನೆಗಳನ್ನು ಸರ್ಕಾರದ ಖರ್ಚಿನಿಂದ ಕಟ್ಟಿಸಿ ಪಟ್ಟಣಗಳನ್ನು ನೇತ್ರಾನಂದಕರವಾಗಿ ಮಾಡಿದರು. ನಗರಕ್ಕೆ ಭೂಷಣಪ್ರದವಾದ ಅನೇಕ ಉತ್ತಮ ಸೌಧಗಳ ರಚನೆಗೆ ತಳಪಾಯಗಳನ್ನು ಹಾಕಿಸಿದರು. ಪ್ರಜೆಗಳಿಗೆ ವಿನೋದ

ಕ್ಕಾಗಿಯೂ, ಬುದ್ಧಿ ವಿಕಾಸಕ್ಕಾಗಿಯೂ ಅಲ್ಲಲ್ಲಿ ದೇಶವಿದೇಶದ ಗಿಡಮರ ಬಳ್ಳಿಗಳನ್ನು ಬೆಳೆಸುವ ಉದ್ಯಾನಗಳನ್ನೂ, ಸರ್ವವಸ್ತು ಪ್ರದರ್ಶನಾಲಯ ಗಳನ್ನೂ ಸ್ಥಾಪಿಸಿದರು.

ಶ್ರೀ ಮಾಧವರಾಯರು, ತಾವು ಬರೋಡಾರಾಜ್ಯದ ದಿವಾನಗಿರಿ ಯನ್ನು ಸ್ವೀಕರಿಸಿದ ತರುವಾಯ ಐದು ವರ್ಷಗಳ ಕಾಲದಲ್ಲಿ ಏನು ಕೆಲಸ ಮಾಡಿದರೆಂಬುದನ್ನು ಅವರು ಬರೆದಿರುವ ಸಂಸ್ಥಾನದ ಆಡಳಿತದ ವರದಿ (Administration Report) ಯಿಂದ ಸೂಕ್ಷ್ಮವಾಗಿ ತಿಳಿಯಬಹುದು. ಆದುದರಿಂದ ಅದರ ಕೆಲವಂಶವನ್ನು ಇಲ್ಲಿ ಕೊಡುತ್ತೇವೆ— "ಕಳೆದ ಈ ಐದು ವರ್ಷಗಳಲ್ಲಿ ನಾವು ವಹಿಸಬೇಕಾದ ಕಾರ್ಯಭಾರವು ಅತಿಶಯವಾಗಿ ತ್ತೆಂದೂ, ಬಹು ಕಷ್ಟದಾಯಕವಾಗಿತ್ತೆಂದೂ ಹೇಳಿ ನಮ್ಮ ಲೋಪಗಳನ್ನು ಮುಚ್ಚಿಕೊಳ್ಳಲೆಳಸುವುದು ಗಾಂಭೀರ್ಯವೆನಿಸಲಾರದು; ನಿಶ್ಚಯವಾ ಗಿಯೂ, ಕೆಲಸ ಕಾರ್ಯಗಳ ಆಚರಣೆಯಲ್ಲಿ ಬಹು ಆಲಸ್ಯವೂ, ಬಹು ಬಗೆಯ ಲೋಪವೂ ಇದೆಯೆಂಬುದು ನಮಗೇ ಪ್ರತ್ಯಕ್ಷವಾಗಿ ತೋರುತ್ತಿದೆ. ಆದರೆ, ನಾವು ಕೇವಲ ಸರ್ಕಾರದ ಚಾಲತಿ ಕೆಲಸಕಾರ್ಯಗಳನ್ನು ಮಾಡಿ ಕೊಂಡು ಹೋಗಬೇಕಾಗಿದ್ದುದಷ್ಟೇ ಅಲ್ಲ—ಇತರ ಅನೇಕ ದೇಶೀಯ ಸಂ ಸ್ಥಾನಗಳಲ್ಲಿ ಕಣ್ಣಿಗೆ ಬೀಳುತ್ತಿರುವಂತಹ ಅನೇಕ ವಿಷಮಪ್ರಶ್ನೆಗಳ ಮೂಲ ವನ್ನು ಶೋಧಮಾಡಿ, ಅವುಗಳನ್ನು ಪ್ರಜಾವರ್ಗಕ್ಕೆ ಲಾಭದಾಯಕವೂ ಸುಖದಾಯಕವೂ ಆಗುವಂತೆ ಪರಿಣಾಮಗೊಳಿಸತಕ್ಕುದೂ ಆವಶ್ಯಕವೆನಿಸಿ ದ್ದಿತು. ಸಂಸ್ಥಾನದ ಪರಿಪಾಲನಾಯಂತ್ರವನ್ನು ಅದ್ಭುತವಾಗಿ ರಚಿಸ ಬೇಕಾಯಿತು. ರಾಜ್ಯಾಭಿವೃದ್ಧಿಗೆ ಆವಶ್ಯಕವೆಂದು ತೋರಿದ ಅನೇಕ ಸುಧಾ ರಣೆಗಳನ್ನು ಯೋಚಿಸಿ ನಿರ್ಧರಿಸಿ ಆಚರಣೆಯಲ್ಲಿ ತರಬೇಕಾಯಿತು. ರಾಜ್ಯಾ ದಾಯಕ್ಕೆ ಸಂಬಂಧಪಟ್ಟ ಕೋಟ್ಯಾಂತರ ದ್ರವ್ಯವನ್ನು ಪೋಲಾಗದಂತೆ ಅತ್ಯಾವಶ್ಯಕವಾದ ಮತ್ತು ಲಾಭಕರವಾದ ಕಾರ್ಯಗಳಿಗಾಗಿ ಉಪಯೋಗಿ ಸುವುದಲ್ಲದೆ ಹೆಚ್ಚಿಸುವುದನ್ನೂ ಗಮನಿಸಬೇಕಾಯಿತು. ನಮ್ಮ ನೆರೆ ಹೊರೆ ಯಲ್ಲಿರುವ ಇತರ ಸಂಸ್ಥಾನಗಳವರೊಂದಿಗೂ ಸಾಮ್ರಾಜ್ಯ ಸರ್ಕಾರದೊಂ ದಿಗೂ ನಮಗಿದ್ದ ಅನೇಕ ತೊಡಕು ಪ್ರಶ್ನೆಗಳನ್ನು ಬಿಡಿಸಿಕೊಂಡು, ಶ್ರೇಯ ಸ್ಸಾಧನವೆನಿಸುವ ಸಂಬಂಧ ಬಾಂಧವ್ಯಗಳನ್ನು ಬಲಪಡಿಸಿಕೊಳ್ಳಬೇಕಾ

ಯಿತು. ಈ ಸಂಬಂಧದಲ್ಲಿ, ಅತೀವ ಕ್ಷೇಮಕರವೆಂಬಂತಿದ್ದ ಪ್ರಶ್ನೆಗಳೇ ಸಕಾಲದಲ್ಲಿ ಗಮನಿಸಲ್ಪಡದೆ ಇದ್ದುದರಿಂದ, ಕಾಲಾತೀತವಾಗಿ, ಅನೇಕ ದುರ್ಘಟ ವಿಚಾರಗಳಾಗಿ ಪರಿಣಮಿಸಿ, ಮುಂದೆ ಅವುಗಳನ್ನು ಸರಿಪಡಿಸುವುದು ಮಹಾ ಪ್ರಯಾಸವೆಂಬಂತೆ ತೋರಲು ಕಾರಣವಾಯಿತು. ಅವುಗಳನ್ನು, ಸಂಬಂಧಪಟ್ಟ ನೆರೆಹೊರೆಯ ಅಧಿಕಾರವರ್ಗಕ್ಕೆ ಮಂದಟ್ಟಾಗುವಂತೆ ತಿಳಿಸುವಲ್ಲಿ ನಾವು ಅನೇಕವೇಳೆ, ಬಹು ಶ್ರಮಪಡಬೇಕಾಗುತ್ತಿತ್ತು - ಚರ್ಚಿಸಬೇಕಾಗುತ್ತಿತ್ತು. ಅವರನ್ನು ಒಪ್ಪಿಸುವುದಕ್ಕಾಗಿ ಅನೇಕವೇಳೆ ನಮ್ಮದು ತಪ್ಪೆಂದು ಒಪ್ಪಿಕೊಳ್ಳಬೇಕಾಗುತ್ತಲೂ ಇತ್ತು. ಈಗ ನಮ್ಮ ಗಮನವೂ ಶಕ್ತಿಯೂ ಕಾಲವೂ ಈ ಬಗೆಯ ಕಾರ್ಯಗಳಿಗಾಗಿ ವಿನಿಯೋಗವಾಗತಕ್ಕ ಆವಶ್ಯಕತೆಯು ತಪ್ಪಿ, ಮುಂದೆ ನಾವು ನಮ್ಮ ಶಕ್ತಿಸಾಮರ್ಥ್ಯಗಳನ್ನೂ ಕಾಲವನ್ನೂ ಆಂತರ್ಯಸುಧಾರಣೆಗಳಿಗಾಗಿಯೂ ಅಭಿವೃದ್ಧಿಗಾಗಿಯೂ ವಿನಿಯೋಗಿಸಲು ಅವಕಾಶವೊದಗಿದೆ. ಸಂಸ್ಥಾನಗಲ್ಲಿ ಇನ್ನೂ ಅನೇಕಾನೇಕ ಅಭಿವೃದ್ಧಿ ಕಾರ್ಯಗಳು ನಡೆಯಬೇಕಾದುವಿವೆಯೆಂಬುದನ್ನು ನಿಸ್ಸಂದೇಹವಿಂದ ಒಪ್ಪಿಕೊಳ್ಳುತ್ತೇವೆ. ಆದರೆ, ನಾವು ಈವರೆಗೆ ನಾಗರಿಕ ಸರ್ಕಾರವು ಪ್ರಜಾಕ್ಷೇಮಕ್ಕಾಗಿ ಮಾಡಬೇಕಾದ ತನ್ನ ಕರ್ತವ್ಯಗಳಲ್ಲಿ ಕೇವಲ ಕೆಲವನ್ನಾದರೂ ಪ್ರಾರಂಭ ಮಾಡಿದ್ದೇವೆಂದು ಹೇಳಿಕೊಳ್ಳಬಹುದಾಗಿದೆ.''

ಸರ್. ಮಾಧವರಾಯರು ಬರೋಡಾ ಸಂಸ್ಥಾನದ ರಿವಾರ್ಜೆಂಟರಾಗಿದ್ದ ಈ ಕಾಲದಲ್ಲೇ ಇಂಗ್ಲೆಂಡು ದೇಶದ ಚಕ್ರವರ್ತಿ ರಾಜಕುಮಾರರು ನಮ್ಮ ದೇಶದಲ್ಲಿ ಸಂಚರಿಸಲು ಬಂದಿದ್ದರು ಆಗ ಅವರೊಂದಿಗಿದ್ದ ವಿಲಿಯಂ ಹವಾರ್ಡ್ ರಸ್ಸಲ್ ಎಂಬ ಅಧಿಕಾರಿಯು ''ರಾಜಕುಮಾರರ ಭಾರತದೇಶ ಪರಿಭ್ರಮಣ: ಅದರ ವಿವರಣೆ'' ಎಂಬ ಗ್ರಂಥದಲ್ಲಿ ನಮ್ಮ ಕಥಾನಾಯಕರ ಬರೋಡಾ ರಾಜ್ಯಪಾಲನೆಯನ್ನು ವಿಮರ್ಶಿಸುತ್ತಾ ಹೀಗೆಂದು ಬರೆಯುತ್ತಾರೆ—''ಸರ'. ಮಾಧವರಾಯರು ಈ ದೇಶದ ರೆವಿನ್ಯೂ ಪೋಲೀಸು ಮತ್ತು ನ್ಯಾಯಾಸ್ಥಾನಗಳ ಇಲಾಖೆಗಳನ್ನು ನವೀನರೀತಿಯಿಂದ ನಿರ್ಮಿಸಿರುವುದಲ್ಲದೆ, ಸಂಸ್ಥಾನದ ಆಡಳಿತವನ್ನೇ ಉತ್ತಮತರವಾಗಿ ಸುಧಾರಿಸಿರುತ್ತಾರೆ. ಸರ್ಕಾರಿಯ ನೌಕರರಿಗೂ, ಅಧಿಕಾರಿಗಳಿಗೂ ಹೆಚ್ಚು ಸಂಬಳ ಕೊಡುವ ಪದ್ಧತಿಯನ್ನು ಜಾರಿಯಲ್ಲಿ ತಂದಿದ್ದಾರೆ. ಇದರಿಂದ ಎರಡು

ಬಗೆಯ ಪ್ರಯೋಜನಗಳುಂಟಾಗಲು ಅವಕಾಶವಿದೆ; ಒಂದು-ಉತ್ತಮ ತರಗತಿಯ ಮತ್ತು ದಕ್ಷರಾದ ಅಧಿಕಾರಿಗಳನ್ನು ಸಂಗ್ರಹಿಸಬಹುದು, ಅಲ್ಲದೆ, ಹೊರದೇಶಗಳ ಅಧಿಕಾರಿ ವರ್ಗದಲ್ಲಿ ವಿಶೇಷವಾಗಿ ಕಂಡುಬರುತ್ತಿರುವ ಲಂಚನೇ ಮುಂತಾದ ದುಷ್ಟಟಗಳಿಗೆ ಅವಕಾಶವಿಲ್ಲದಂತೆ ತಡೆಯಬಹುದು. ಈ ಎರಡು ಬಗೆಯ ಆಶಯವೂ ಇಲ್ಲಿ ಕಾರ್ಯಕಾರಿಯಾಗಿದೆ. ನ್ಯಾಯಸಿಬಂಧಗಳು ಅತ್ಯುತ್ತಮ ರೀತಿಯಲ್ಲಿ ಸ್ಥಾಪಿತವಾಗಿದೆಯೆಂದೂ ಯೋಗ್ಯದರ್ಜೆಯಿಂದ ಆಚರಣೆಯಲ್ಲಿ ತರಲ್ಪಟ್ಟಿವೆಯೆಂದೂ ಪ್ರಜಾಭಿಪ್ರಾಯದಿಂದ ಸ್ಥಿರಪಟ್ಟಿದೆ ಗ್ರಾಮಪಾಲನಾ ಪದ್ಧತಿಯು ಹಿಂದಿನಂತೆಯೇ ಇದ್ದರೂ, ಗ್ರಾಮಪಾಲಕನಿಗೆ ಸಂಬಳ ಸಾರಿಗೆಗಳು ಕಾಲಾನುಸಾರವಾಗಿ ಹೆಚ್ಚಿಸಲ್ಪಟ್ಟು, ಆಯಾಯಾ ಗ್ರಾಮಗಳ ರಕ್ಷಣೆಗೆ ಆಯಾ ನೌಕರನನ್ನೇ ಸಂಪೂರ್ಣ ಜವಾಬುದಾರನನ್ನಾಗಿ ಮಾಡಿದೆ. ಅಷ್ಟುಮಾತ್ರವಲ್ಲ. ರಾಜ್ಯಪಾಲನಾಯಂತ್ರದ ಸಮಸ್ತ ಇಲಾಖೆಗಳಲ್ಲೂ ಹೀಗೆಯೇ, ಕಟ್ಟುನಿಟ್ಟಿನ ಏರ್ಪಾಡುಗಳಿವೆ. ಅವನವನಿಗೆ ಸಂಬಂಧಪಟ್ಟ ಕೆಲಸಕಾರ್ಯಗಳಲ್ಲಿ ಪ್ರತಿಯೊಬ್ಬನೂ ಸಂಪೂರ್ಣ ಜವಾಬುದಾರನಾಗಿದ್ದಾನೆ. ಎಲ್ಲಾ ಇಲಾಖೆಗಳಲ್ಲೂ ಸರ್. ಮಾಧವರಾಯರು ಏರ್ಪಡಿಸಿರುವ ವಿಧಾನದಿಂದ ಯಾವ ಸ್ಥಳದಲ್ಲೂ ಯಾರಿಗೂ ಅಕ್ರಮವಾದ, ಅಥವ ಯೋಗ್ಯತೆಗೆ ಕುಂದು—ಹೆಚ್ಚು ಎನಿಸುವಂತಿರದೆ, ವೇತನವು, ಅವನವನ ಸ್ವಭಾವ ಕಾರ್ಯಸಾಮರ್ಥ್ಯ ಯೋಗ್ಯತೆ ಮುಂತಾದುವುಗಳಿಗೆ ತಕ್ಕಂತೆ ಇದೆ. ದೇಶದ ಆದಾಯವಾದರೋ ಆಶ್ಚರ್ಯವೆನಿಸುವಂತೆ ಅಭಿವೃದ್ಧಿಯಾಗಿದೆ. ಸರ್. ಮಾಧವರಾಯರು ತಮ್ಮ ಕಾರ್ಯಕ್ರಮವನ್ನು, ದೇಶದ ಪೂರ್ವಪದ್ಧತಿಗಳನ್ನೂ, ಆಚಾರ ವ್ಯವಹಾರಗಳನ್ನೂ ನಿರ್ಮೂಲಗೊಳಿಸಿ,ತನ್ಮೂಲಕ, ನೊಂದು ಅಶಾಂತಯುತವಾದ ಜನಮನಕ್ಕೆ ‘ಅಳುವ ಮಗುವಿನ ತುಟಿಗೆ ಜೇನುತುಪ್ಪ ಸವರಿದಂತೆ’ ಏನೋ ಕೆಲವು ಹೊಸ ನಮೂನೆಗಳನ್ನು ತೋರಿಸಿ, ತೃಪ್ತಿಪಡಿಸಬೆಳೆಸುವುದರ ಮೂಲಕ ಪ್ರಾರಂಭಿಸಿಲ್ಲ. ಆದರೆ ಅವರು ಹಿಂದಿನ ತಳಪಾಯಗಳನ್ನೇ ಇಟ್ಟುಕೊಂಡು, ಅವುಗಳ ಪೂರ್ವ-ರಚನೆಯನ್ನೇ ನವೀನ ವಿಧಾನಗಳಿಂದ ಸರಿಗೊಳಿಸಿ ರಕ್ಷಿಸಿಕೊಂಡು ಬಂದಿರುತ್ತಾರೆ. ಟೆಲ್ಲಿರ್ಯಾಂಡ್ ಎಂಬಾತನ ವಿಷಯವನ್ನು ಕುರಿತು ಹೇಳುವಾಗ—‘ಈತನು ಪೂರ್ಣಯ್ಯನನ್ನು ಹೋಲುತ್ತಾನೆ, ಆದರೆ

ಅಷ್ಟುಬುದ್ಧಿಶಾಲಿಮಾತ್ರವಲ್ಲ' ಎಂದು ಮಿ|| ವಿಲಿಯಂ ಎಂಬ ಆಂಗ್ಲೇಯಾಧಿಪತಿಯು ಹೇಳಿರುವಂತೆಯೇ, ನಮ್ಮ ಈ ಸರ್. ಮಾಧವರಾಯರನ್ನೂ ಮೈಸೂರಿನ ಆ ಸುಪ್ರಸಿದ್ಧ ಪೂರ್ಣಯ್ಯನವರಿಗೆ ಹೋಲಿಸಬಹುದು. ಆದರೆ ಗುಣ ನಡತೆ, ರಾಜ್ಯಪಾಲನಾಸಾಮರ್ಥ್ಯ ಕಾರ್ಯನಿಷ್ಠೆ, ನಿಸ್ಪೃಹತೆಗಳು ಮುಂತಾದುಗಳಲ್ಲಿ ಇವರು, ಆ ಬ್ರಾಹ್ಮಣ ಮಂತ್ರಿವರ್ಯನನ್ನು ಬಹುಮಟ್ಟಿಗೆ ಹೋಲುತ್ತಾರೆ ಮತ್ತು ಕೆಲವಂಶಗಳಲ್ಲಿ ಮೀರಿಸುತ್ತಾರೆ.''

ಬರೋಡಾದಲ್ಲಿ, ಅಮಾತ್ಯಪದವಿಯಲ್ಲಿದ್ದಾಗಲೇ ಸರ್. ಮಾದವರಾಯರಿಗೆ ಬೊಂಬಾಯಿ ವಿಶ್ವವಿದ್ಯಾನಿಲಯದವರು 'ಫೆಲೊ' ಎಂಬ ಸ್ಥಾನವನ್ನು ಕೊಟ್ಟು ಗೌರವಿಸಿದರು. ವೈಸರಾಯರು, ಇಂಗ್ಲೆಂಡಿನಲ್ಲಿ ಸ್ಥಾಪಿತವಾಗಿದ್ದ ಒಂದಾನೊಂದು 'ಫೈನಾನ್ಸ್ ಕಮಿಟಿ' ಎದುರಿಗೆ ಭಾರತದೇಶದ ಆದಾಯವೆಚ್ಚಗಳ ಸಂಬಂಧ ಸಾಕ್ಷ್ಯಕೊಡಬೇಕೆಂದು ಪ್ರಾರ್ಥಿಸಿದರಾದರೂ ಶ್ರೀ ಮಾಧವರಾಯರು, ಹಿಂದೂಪೂರ್ವಾಚಾರ ಮತ್ತು ಮತಧರ್ಮ ಪದ್ಧತಿಗಳಿಗೆ ವಿರೋಧವಾಗಿ ಸಮುದ್ರಯಾನಮಾಡಲು ಒಪ್ಪಲಿಲ್ಲವಾಗಿ, ಆ ಪ್ರಾರ್ಥನೆಯನ್ನು ಮನ್ನಿಸಲಾಗಲಿಲ್ಲ. ೧೮೭೭ರಲ್ಲಿ ಡೆಲ್ಲಿ ಪಟ್ಟಣದಲ್ಲಿ ನಡೆದ ಸಾಮ್ರಾಜ್ಯಸಮ್ಮೇಳನಕ್ಕೆ ಅವರಿಗೆ ವೈಸರಾಯಿ ಲಾರ್ಡ್ ಲಿಟ್ಟನ್ ಸಾಹೇಬರಿಂದ ಆಹ್ವಾನಬಂದು, ಅವರು ಸಕಲವಿಧ ರಾಜಮರ್ಯಾದೆಗಳಿಂದಲೂ ಯುಕ್ತರಾಗಿ ಅಲ್ಲಿಗೆ ಹೋದರು. ಡೆಲ್ಲಿಯಲ್ಲಿ ಅವರಿಗೆ ಮಾಡಲ್ಪಟ್ಟ ಮರ್ಯಾದೆಯೂ, ಗೌರವಾದರಗಳೂ ಯಾವ ರಾಜಮರ್ಯಾದೆಗೂ ಕಡಮೆಯೆನಿಸಲಿಲ್ಲ. ಆ ಸಮಯದಲ್ಲೇ ಲಾರ್ಡ್ ಲಿಟ್ಟನ್ ಸಾಹೇಬರು, ನಮ್ಮ ಕಥಾನಾಯಕರಿಗೆ 'ರಾಜಾ'ಎಂಬ ಅಪೂರ್ವ ಬಿರುದನ್ನಿತ್ತು, ಯೋಗ್ಯಖಿಲ್ಲತ್ತುಗಳನ್ನೊಪ್ಪಿಸಿ ಗೌರವಿಸಿದರು. ತರುವಾಯ ರಾಜಾ ಸರ್. ಮಾಧವರಾಯರು ೧೮೮೩ನೆಯ ಸಂ||ದವರೆಗೂ ಸಂಸ್ಥಾನದ ಕಾರ್ಯಭಾರವನ್ನು ಅದ್ವಿತೀಯ ಸಾಮರ್ಥ್ಯದಿಂದ ನಡೆಸಿಕೊಂಡು ಬಂದರು. ಅವರ ಅಧಿಕಾರವು ಎಂದೂ ನಿರಂಕುಶವಾದುದಾಗಿರಲಿಲ್ಲ. ಮೇಲಾಗಿ ಅವರು ರಾಜ್ಯಪಾಲನೆಯಲ್ಲಿ ತಮಗೆ ಸಹಾಯಕವಾಗಿರಲೆಂಬ ಉದ್ದೇಶದಿಂದ, ಬ್ರಿಟಿಷ್ ರೆಸಿಡೆಂಟ್ ಮತ್ತು ಇಲಾಖಾ ಮುಖ್ಯಾಧಿಕಾರಿಗಳಿಂದ ಕೂಡಿದ ಒಂದು ಸಭೆಯನ್ನು ನಿರ್ಮಿಸಿದ್ದರು. ಚಿಕ್ಕ ವಯಸ್ಸಿನ ಗಾಯಕ್ವಾಡ್ ರಾಜಕುಮಾರನು, ( ಈಗಿನ ಬರೋಡಾ ಅಧಿಪತಿ ) ಮಿ||

ಎಸ್, ಎ. ಎಚ್. ಎಲಿಯಟ್ ಎಂಬೊಬ್ಬ ಮುಂಬಯಿ ಅಧಿಪತ್ಯದ ಸಿವಿಲಿಯನ್ ಅಧಿಕಾರಿಯ ಬಳಿ ವಿದ್ಯಾಭ್ಯಾಸ ಮಾಡುತ್ತಿದ್ದರಾದರೂ, ಸರ್, ಮಾಧವರಾಯರು, ಸ್ವತಃ ಅವರ ವಿದ್ಯಾಭಿವೃದ್ಧಿಯನ್ನು ಕುರಿತು ಮೇಲ್ವಿಚಾರ ನೋಡಿಕೊಳ್ಳುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಸ್ವತಃ ಬೋಧಿಸುತ್ತಲೂ ಇದ್ದರು. ೧೮೭೫ರಲ್ಲಿ ರಾಜಕುಮಾರನು ಪ್ರಾಪ್ತವ್ರಬುದ್ಧನಾದುದರಿಂದ ಮುಂಬಯಿ ಗವರ್ನರಾದ ಸರ್. ಜೇಮ್ಸ್ ಫರ್ಗ್ಯುಸನ್ ಎಂಬ ಅಧಿಕಾರಿಯು ಬ್ರಿಟಿಷ್ ಸಾಮ್ರಾಜ್ಯದ ಆಜ್ಞಾನುಸಾರ ಆತನಿಗೆ ರಾಜ್ಯಾಭಿಷೇಕ ಮಹೋತ್ಸವವನ್ನು ನೆರವೇರಿಸಿ, ರಾಜ್ಯವನ್ನು ಒಪ್ಪಿಸಿದನು. ಪಟ್ಟಾಭಿಷೇಕವಾದುದೇ ಸಾವಕಾಶವು! ಮುಂದೆ ಕೆಲವು ದಿನಗಳಲ್ಲೇ ದುಷ್ಟರ ದುರ್ಬೋಧನೆಯಿಂದಪ್ರೇರಿತನಾದ ಮಹಾರಾಜನಿಗೂ ದಿವಾನರಿಗೂ ಭಿನ್ನಾಭಿಪ್ರಾಯಗಳು ಹುಟ್ಟಿ-ದಿನದಿನಕ್ಕೆ ವೃದ್ಧಿಯಾಗತೊಡಗಿದವು ತಿರುವಾಂಕೂರಿನ ಅನುಭವದಿಂದ ಕಲಿತುಕೊಂಡ ಪಾಠದಿಂದ ಸಾಧ್ಯವಾದಷ್ಟು ಶೀಘ್ರದಲ್ಲೇ ಸಂಸ್ಥಾನದ ಸೇವೆಯಿಂದ ನಿವೃತ್ತರಾಗುವುದು ಕ್ಷೇಮವೆಂದು ಯೋಚಿಸಿ, ರಾಜಾ ಸರ್. ಮಾಧವರಾಯರು ಅದೇ ವರ್ಷದ ಸೆಪ್ಟಂಬರ್ ತಿಂಗಳಲ್ಲೇ ತಮ್ಮ ಉದ್ಯೋಗಕ್ಕೆ ರಾಜೀನಾಮೆಯನ್ನು ಕೊಟ್ಟು ನಿವೃತ್ತರಾದರು. ಮಹಾರಾಜರು, ಅವರ ವಿರಾಮವೇತನ (ಪೆನ್ಷನ್)ದ ಬದಲಾಗಿ ಮೂರುಲಕ್ಷ ರೂಪಾಯಿಗಳ ಉಪಹಾರದ್ರವ್ಯವನ್ನುಕೊಟ್ಟು ಅವರನ್ನು ತಮ್ಮ ಸಂಸ್ಥಾನದಿಂದ ಬೀಳ್ಕೊಂಡರು.



**ಅಧ್ಯಾಯ ೫** **"ಗುಣಾತಿಶಯಗಳು"**

ಭಾರತೀಯ ಸಂಸ್ಥಾನಗಳಾದ ಮೈಸೂರು ತಿರುವಾಂಕೂರು ಇಂದೂರು, ಬರೋಡಾ, ಕಾಶ್ಮೀರ ಮುಂತಾದ ಯಾವ ರಾಜ್ಯದ ಚರಿತ್ರೆಯನ್ನಾದರೂ ತೆಗೆದು ನೋಡಲಿ—ಪೂರ್ವಕಾಲದಲ್ಲಿ ಮಾತ್ರವಲ್ಲ—ಆಧುನಿಕಕಾಲದಲ್ಲಿಸಹ, ಬ್ರಾಹ್ಮಣ ಮಂತ್ರಿಗಳಿಂದಲೂ, ಬ್ರಾಹ್ಮಣ ಅಧಿಕಾರಿಗಳಿಂದಲೂ ಆಯಾ ಸಂಸ್ಥಾನಗಳ ಅಭಿವೃದ್ಧಿಗಾಗಿ ಮಾಡಲ್ಪಟ್ಟಿರುವ ಕಾರ್ಯಗಳು ಅವರ ಕೀರ್ತಿ

ಸ್ತಂಭಗಳೋ ಎಂಬಂತೆ ಎದ್ದು ಕಾಣುತ್ತಿವೆ. ದೇಶದ ನ್ಯಾಯಪಾಲನೆಗಾಗಿಯೂ, ರಾಜ್ಯದ ವಿವಿಧ ವಿಭಾಗಗಳ ಸುವ್ಯವಸ್ಥೆಗಾಗಿಯೂ ಅವರು ಪಟ್ಟಿರುವ ಪರಿಶ್ರಮವು ಅವರ್ಣನೀಯವಾಗಿದೆ. ಬ್ರಿಟಿಷರು ದೇಶೀಯ ರಾಜ್ಯಗಳನ್ನು ಒಂದೊಂದನ್ನಾಗಿ ತಮ್ಮ ಪಾಲನೆಗೆ ವಹಿಸಿಕೊಳ್ಳತೊಡಗಿದಾಗ, ಪ್ರಕೃತ ಚರಿತ್ರೆಯಲ್ಲೇ ಹಿಂದೆ, ಶ್ರೀ ಮಾಧವರಾಯರು, ಮದ್ರಾಸು ಸರ್ಕಾರದಿಂದ ಹಲವರ್ಷಗಳ ಅವಧಿಯನ್ನು ಪಡೆದುಕೊಂಡಂತೆ, ಬ್ರಾಹ್ಮಣ ಮಂತ್ರಿಗಳು ಆಧಾರಸ್ತಂಭರಾಗಿನಿಂತು ರಾಜಕಾರ್ಯ ಸೂತ್ರಗಳನ್ನು ಕೈಗೆತೆಗೆದುಕೊಂಡು ಅವುಗಳನ್ನು ಯೋಗ್ಯಮಾರ್ಗದಲ್ಲಿ ಚಲಿಸಲಿತ್ತು ಸಂರಕ್ಷಿಸದಿದ್ದರೆ, ಇಂದಿನ ದೇಶೀಯ ಸಂಸ್ಥಾನಗಳ ಚರಿತ್ರೆಯು ಯಾವ ಬಗೆಯಲ್ಲಿ ಬರೆಯಲ್ಪಡಬೇಕಾಗುತ್ತಿತ್ತೆಂಬುದನ್ನು ಯಾರು ಹೇಳಬಲ್ಲರು ! ಆದರೂ, ಬ್ರಾಹ್ಮಣರು ದುರುಳರಲ್ಲವೆ! ರಾಜದ್ರೋಹಿಗಳಲ್ಲವೆ ! (!) ಯಾರು ಆರ್ಷೇಯದಿಂದಲೂ, ಪ್ರಾಪಂಚಿಕ ಸುಖಸೌಲಭ್ಯಗಳನ್ನೆಲ್ಲ ತ್ಯಜಿಸಿ, ಫಲಾಹಾರ ಪರ್ಣಾಹಾರಾದಿಗಳನ್ನು ಮಾಡಿಕೊಂಡು, ಭಾರತದೇಶವನ್ನು, ಹಿಂದೂ ಇಂದೂ ಮುಂದೂ ಜಗತ್ತಿಗೇ ಮಾರ್ಗದರ್ಶಿಸಿಯೆಂಬ ಕೀರ್ತಿಗೆ ಪಾತ್ರವಾದುದನ್ನಾಗಿಸುವಂತಹ ವೇದಗಳನ್ನೂ, ಶಾಸ್ತ್ರಗಳನ್ನೂ, ಅನೇಕಾನೇಕ ಅಮೌಲ್ಯಗ್ರಂಥರಾಶಿಯನ್ನೂ ಕುಶಲವಿದ್ಯೆಗಳನ್ನೂ, ಅದ್ವಿತೀಯ ಸಂಸ್ಕೃತಿಯನ್ನೂ ರಕ್ಷಿಸಿಕೊಂಡು ಬಂದರೋ ಅವರಿಗೆ-ಅವರ ಸಂತಾನರಿಗೆ ಜನಾಂಗದಿಂದ ಈಗದೊರೆಯುತ್ತಿರುವ ಮರ್ಯಾದೆಯನ್ನು ಕೃತಜ್ಞತೆಯೆನ್ನಬೇಕೋ ! ಕೃತಘ್ನತೆಯೆನ್ನಬೇಕೋ! ಪ್ರಕೃತಕಾಲದ ಬ್ರಾಹ್ಮಣರು ಪೂರ್ವದ ಬ್ರಾಹ್ಮಣರ ಉಚ್ಚಾದರ್ಶಗಳನ್ನು ಅನುಸರಿಸುತ್ತಿಲ್ಲವೆಂದೂ, ಗೌರವವು ಗುಣ ಮತ್ತು ಯೋಗ್ಯತೆಗಳಿಗಾಗಿಯಲ್ಲದೆ ಕೇವಲ ಜನ್ಮಸ್ಥಳಕ್ಕೆ ಮಾತ್ರ ದೊರೆಯಲಾರದೆಂದೂ ಒಂದು ದೋಷಾರೋಪಣೆಯು ಅವರ ಮೇಲುಂಟಲ್ಲವೆ! ಅದು ನಿಜವೆಂದು ಒಪ್ಪಿಕೊಳ್ಳೋಣ ಅಲ್ಲ-ಒಪ್ಪಿಕೊಳ್ಳಲೇಬೇಕು ! ಆದರೆ, ಅವರಿಗೆ ಪೂರ್ವದಂತಲ್ಲದೆ ನಿತ್ಯಜೀವನಸಂಗ್ರಾಮದಲ್ಲೂ ಹೋರಾಡುವಂತಹ ಆವಶ್ಯಕತೆಯನ್ನು ತಂದಿಟ್ಟವರಾರು? ಹಿಂದಿನಂತೆ ಜನಾಂಗದ ಇತರ ವರ್ಣಗಳವರು ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವಂತಿದ್ದರೆ, ಅವರು ತಮ್ಮ ಸ್ಥಾನವನ್ನು ಬಿಡಬೇಕಾದ ಪ್ರಕೃತವೇನಿತ್ತು? ಅದಂತಿರಲಿ, ತಾಯ ಮೊಲೆಹಾಲನ್ನು

ಕುಡಿದು ಬೆಳೆದು ಪುಷ್ಟವಾದ ಕರುವು ತಿರುಗಿಕೊಂಡು ತನ್ನ ತಾಯನ್ನೇ ಹಾಯು ತೊಡಗಿದಂತೆ ಈಗಿನ ಸ್ಥಿತಿಯಾಗಿದೆಯಲ್ಲವೆ! 'ಬ್ರಾಹ್ಮಣ'ನೆಂಬ ಪದವೇ ಲೋಕಕ್ಕೆ ಅಸಹ್ಯವನ್ನುಂಟುಮಾಡುವಂತಾಯಿತಲ್ಲವೆ? ಇದೆಂತಹ ಕಾಲಗತಿಯು! ಇಷ್ಟು ವಿಶಾಲ ಪ್ರಪಂಚದಲ್ಲಿ ಕ್ರಿಮಿಕೀಟಾದಿಗಳು ಸಹ ಸರ್ವ ಸ್ವಾತಂತ್ರ್ಯದಿಂದ ಬದುಕುತ್ತಿರುವಲ್ಲಿ 'ಬ್ರಾಹ್ಮಣ' ವ್ಯಕ್ತಿಗೆ ಸ್ಥಾನವಿಲ್ಲವೆ! ಇದು ಯೋಗ್ಯವೆ - ಶ್ರೇಯಸ್ಕರವೆ! ತಾವಾರು, ತಮ್ಮ ಸ್ಥಿತಿಯೇನು, ಜಗತ್ತಿನ ಜನಾಂಗಗತಿಯಲ್ಲಿ ತಾವು ಎಲ್ಲಿದ್ದೇವೆ, ಮುಂದೆ ತಮ್ಮ ಪರಿಣಾಮವೇನು ಎಂಬುದನ್ನು ಕುರಿತು ದೀರ್ಘವಾಗಿ ಯೋಚಿಸುವಷ್ಟು ಮಿದುಳು ತಲೆಯಲ್ಲಿದ್ದ ಯಾವನಿಗಾದರೂ, ಅನಾದಿಕಾಲದಿಂದಲೂ ಬುದ್ಧಿಪ್ರಧಾನರಾಗಿ ನಡೆದು ಬಂದ ಆ ವರ್ಗವನ್ನು ತುಚ್ಛರೀತಿಯಿಂದ ನಡೆಯಿಸಿಕೊಳ್ಳಕೂಡದೆಂದು ತೋರದಿರದು! ಅದು ಕ್ಷೇಮವಲ್ಲವೆಂದಾದರೂ ತೋರುವುದು. ಅನಾದಿಕಾಲದಿಂದ - ಈವರೆಗೆ, ಇಂದಿಗೆ - ನಾಳೆಗೆ, ಭಾರತದೇಶದಲ್ಲೇ ಮಹತ್ಕಾರ್ಯ ಸಾಧಕರಲ್ಲಿ ನೂರಕ್ಕೆ ತೊಂಬತ್ತರಷ್ಟು ಮಂದಿ ಆ ವರ್ಗದವರೇ ಅಲ್ಲವೆ! ಇಂದು ಅವರು ಬೇಡವಾಗಿದ್ದಾರೆ. ಅವರು ಅಸಹ್ಯರಾಗಿ ತೋರುತ್ತಿದ್ದಾರೆ. ಇಂದು ಅವರನ್ನು ಗಡೀಪಾರು ಮಾಡುವುದೂ, ಬಂಗಾಳಾ ಖಾತದಲ್ಲಿ ಮುಳುಗಿಸುವುದೂ ಉತ್ತಮವೆನ್ನಿಸುತ್ತಿದೆ! ಏಕೆ, ಏಕೆಂದರೆ ಅವರು ಜೀವಂತರಾಗಿ ಎದುರಿಗೆ ನಿಂತಿರುವಾಗ, ಜೀವನ ಸಂಗ್ರಾಮದಲ್ಲಿ - ವಿದ್ಯಾಬುದ್ಧಿಗಳಲ್ಲಿ ಅವರೊಂದಿಗೆ ಹೋರಾಡಲು ತಮ್ಮಲ್ಲಿ ಬಂಡವಾಳವಿಲ್ಲವಾದುದರಿಂದ ತಮಗೆ ಬರಬೇಕಾದ ರುಚಿಕರವಾದ ರೊಟ್ಟಿಯಲ್ಲಿನ ಹೆಚ್ಚು ಭಾಗವು ಅವರಿಗೆ ಹೋಗುವುದೆಂದು! ಅಲ್ಲವೆ? ಅದು ನ್ಯಾಯವೇ ಎಂದು ಲೋಕವು ಹೇಳಲಿ! ಯಾವುದೊಂದು ಮಹತ್ಕಾರ್ಯ ಸಾಧನೆಗಾಗಿಯಲ್ಲ! ನೌಕರಿಯೆಂಬ ಎಂಜಲು ರೊಟ್ಟಿಗಾಗಿ ಈ ಕಾದಾಟವೆ? ಹೊಡೆದಾಟವೆ? ಛೀ, ಛೀ, ಎಂತಹ ನೀಚಭಾವವಿದು! ಇದಕ್ಕಾಗಿ ಎಷ್ಟು ಕುಯುಕ್ತಿಗಳು, ದೋಷಾರೋಪಣೆಗಳು, ಮೋಸ ಕಾಪಟ್ಯಾದಿಗಳು, ಚಾಡಿ ಕ್ಷುದ್ರಗಳು! ಅಬ್ಬ; ಭೂಮಾತೆಯು - ಬಹು ಕ್ಷಮಾಶೀಲಳು! —

ಬ್ರಾಹ್ಮಣ ಬಾಂಧವರೇ! ಪ್ರಕೃತ ಸಂದರ್ಭವು ನಿಮಗೆ ಯಾವ ಬಗೆಯಲ್ಲೂ ಹಿತಕರವಾಗಿಲ್ಲ! ನಿಜ. ಆದರೆ ನೀವು ನಿಮ್ಮ ಹಿಂದಿನವರ

ಗುಣಚರ್ಯೆ ಯೋಗ್ಯತೆಗಳೇ ಇಂದು ನಿಮಗೆ ಅನ್ನವಸ್ತ್ರಗಳನ್ನು ತಂದು ಕೊಡಲಾರವೆಂಬುದನ್ನು ಚೆನ್ನಾಗಿ ತಿಳಿದಿರಬೇಕು. ಲೌಕಿಕ ಜೀವನ ಸಂಗ್ರಾಮದಲ್ಲಿ, ಅನ್ನವನ್ನು ತಂದುಕೊಡತಕ್ಕದ್ದು—ಕೇವಲ ಬುದ್ಧಿಮಾತ್ರವೇ ಅಲ್ಲ-ಬುದ್ಧಿಯೊಂದಿಗೆ ಬೆರೆದ ಕೈಗಳು ಸಹ. ಕೇವಲ ಜ್ಞಾನ ಮತ್ತು ಇಚ್ಛಾಶಕ್ತಿಗಳು ಮಾತ್ರವಲ್ಲ; ಕ್ರಿಯಾಶಕ್ತಿಯು ಸಹ: ನಿಮ್ಮಲ್ಲಿ ಇಂತಹ ದುರ್ಗತಿ ದುಸ್ಥಿತಿಗಳು ತೋರುತ್ತಿದ್ದರೂ, ಇನ್ನೂ ಜ್ಞಾನಶಕ್ತಿ-ಇಚ್ಛಾಶಕ್ತಿಗಳಿಗೆ ಲೋಪಬಂದಿಲ್ಲವೆಂಬುದು ಪೂರ್ವಪುಣ್ಯ! ಆದರೆ, ಅವುಗಳೊಂದಿಗೆ ಕ್ರಿಯಾಶಕ್ತಿಯನ್ನೂ ಬೆರೆಸಿ ಇಂದು ಪ್ರಪಂಚದಲ್ಲಿ ನಡೆಯತಕ್ಕ ಆವಶ್ಯಕವೊದಗಿದೆ. ತನ್ನ ಮಾರ್ಗಕ್ಕೆ ಪರರು ಪ್ರತಿಬಾಧಕವನ್ನುಂಟುಮಾಡುವರೆಂದು ಹೇಳಿಕೊಂಡು-ತಿಳಿಗೇಡಿಯು ಅಳುತ್ತಾ ಕೂಡುವನಲ್ಲದೆ,ಧೀರನೂ, ಪ್ರಾಜ್ಞನೂ, ಹಾಗೆಂದಿಗೂ ಹೇಳಲಾರನು. ಅವನು ಅಂತಹ ಪ್ರತಿಬಂಧಕವನ್ನು ತನ್ನ ಬುದ್ಧಿಶಕ್ತಿಯಿಂದ ನಿವಾರಿಸಿಕೊಂಡು ಕಾರ್ಯಫಲವನ್ನು ಕಂಡೇ ಕಾಣುವನು. ಹಾಗಾಗಿರಿ. ಹಿಂದಿನವರ ಧೈರ್ಯ, ಪ್ರಜ್ಞೆ, ಮುಂತಾದುವುಗಳನ್ನು ಗಳಿಸಿ - ಒಂದಿಗೇ ಈಗ್ಗೆ ಆವಶ್ಯಕವಾದ ದೇಹಶಕ್ತಿಯನ್ನೂ ಬೆರೆಸಿ, ಲೋಕಕ್ಷೇಮಕ್ಕಾಗಿ ನಿಷ್ಕಾಮ್ಯಭಾವದಿಂದ ಶ್ರಮಿಸತೊಡಗಿರಿ. ಪಕ್ಷಪಾತ, ದ್ವೇಷ, ಅಲ್ಪಭಾವ ಮುಂತಾದುವುಗಳ ಬೇರುಗಳನ್ನು ನಿಮ್ಮ ಹೃದಯಕ್ಷೇತ್ರದಿಂದ ಕಿತ್ತೊಗೆಯಿರಿ. ಅಂದು, ನಿಮಗೆ ನ್ಯಾಯವಾದ ಸ್ಥಾನವು ಏಕೆ ದೊರೆಯಲಾರದು! ಅದನ್ನು ಪ್ರತಿಬಂಧಿಸುವ ಶಕ್ತಿ ಯಾರಿಗುಂಟು?

ರಾಜ್ಯಭಾರ ವಿಚಾರವನ್ನು ನಿವಾರಿಸಿಕೊಂಡನಂತರ, ನಮ್ಮ ಕಥಾನಾಯಕರು ಮದರಾಸು ಪಟ್ಟಣದಲ್ಲೇ ನೆಲೆಗೊಂಡು, ಮುಂದೆ ಮರಣಪರ್ಯಂತವೂ ಅಲ್ಲೇ ವಾಸಿಸಿದರು. ವಿಸ್ತಾರವಾದ ಕುಟುಂಬ ಸೌಭಾಗ್ಯವೂ ಪೌರ್ವಾತ್ಯ ಪಾಶ್ಚಾತ್ಯ ಮಿತ್ರಸಮುದಾಯವೂ, ಸ್ವಜನಪ್ರೇಮಿಗಳೂ ಸಾಹಿತ್ಯಪ್ರಿಯರೂ ಸ್ನೇಹಪರರೂ ಆದ ಅವರನ್ನು ಸದಾ ಸುತ್ತುವರಿದು ಇರುತ್ತಿದ್ದುದರಿಂದ, ಅವರ ವೃದ್ಧಾಪ್ಯದ ಕಾಲವು ಎಂದೂ ಅವರಿಗೆ ಬಾಧಕವೆನಿಸುವಂತಿರಲಿಲ್ಲ. ವೃದ್ಧರಾದರೂ ರಾಜಕಾರಣದಲ್ಲಿದ್ದ ಅವರ ಉತ್ಸಾಹವು ಕುಂದಲಿಲ್ಲ. ಸ್ವದೇಶಪರದೇಶಗಳ ಪುಸ್ತಕಗಳೂ ಪತ್ರಿಕೆಗಳೂ ವಿಮರ್ಶೆ-ಸಮಾಲೋಚಗಳೂ, ವಿನೋದಕರ ವಿಚಾರಗಳೂ ಅವರಿಗೆ ಅತ್ಯಂತ

ಪ್ರಿಯಕರವಾಗಿದ್ದುವು. ತಮ್ಮ ಆ ವಿರಾಮವೇಳೆಯನ್ನು ಅವರು ಸಾಮಾಜಿಕ ಸುಧಾರಣಾ ಕಾರ್ಯಗಳಿಗಾಗಿಯೂ ಉಪಯೋಗಿಸುತ್ತಿದ್ದರು. ಸಮಾಜ ಸುಧಾರಣಾ ಕಾರ್ಯಗಳಲ್ಲೆಲ್ಲ ಹೆಚ್ಚಾಗಿ ಅವರ ಗಮನವನ್ನೆಳೆದಿದ್ದುದು ಹೆಣ್ಣುಮಕ್ಕಳ ವಿದ್ಯಾಭ್ಯಾಸ-ಮತ್ತು ಬಾಲ್ಯವಿವಾಹ ನಿರೋಧ. ಪೂರ್ವಿಕ ಶಾಸ್ತ್ರಾಧಾರಗಳಿಗೆ ವಿರೋಧವಾಗಿ ಹೋಗಬೇಕೆಂಬುದು ಅವರ ಅಭಿಪ್ರಾಯವಾಗಿರದಿದ್ದರೂ, ಯಾವದನ್ನಾದರೂ ಕಾಲಸ್ಥಿತಿಯನ್ನನುಸರಿಸಿ ನ್ಯಾಯಸಮ್ಮತವಾಗಿ ನಡಿಸಬೇಕೆಂದು ಮಾತ್ರ ವಾದಿಸುತ್ತಿದ್ದರು. ಸುಧಾರಣೆಯ ಹೆಸರಿನಿಂದ ಪೂರ್ವಾಚಾರ ವಿಚಾರಗಳನ್ನು ನಿರ್ಮೂಲ ಹತಗೊಳಿಸುವುದನ್ನಾಗಲೀ ಅಥವ ಕಾಲ ದೇಶವರ್ತಮಾನಗಳ ಸ್ಥಿತಿಗತಿಗಳನ್ನೂ ಗಮನಿಸದ ವಜ್ರಕುಂತಹೃದಯವನ್ನಾಗಲೀ ಅವರು ಎಂದೂ ಮೆಚ್ಚಿದವರಲ್ಲ.

೧೮೮೫ರಲ್ಲಿ ಸರ್. ಗ್ರಾಂಟ್ ಡಫ್ ಸಾಹೇಬರ ಪ್ರಾರ್ಥನೆಯ ಮೇರೆಗೆ, ಶ್ರೀ ಮಾಧವರಾಯರು, 'ಮಲಬಾರ್ ಲ್ಯಾಂಡ್ ಟೆನ್ಯೂರ್ ಕಮಿಷನ್' ಎಂಬ ಸಂಸ್ಥೆಯ ಅಧ್ಯಕ್ಷಪೀಠವನ್ನು ವಹಿಸಿ, ಸರ್ವಸಮ್ಮತ ರೀತಿಯಲ್ಲಿ ಅದನ್ನು ನಿರ್ವಹಿಸಿದರು. ೧೮೮೭ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ವರ್ಗಕ್ಕೆ ಪಟ್ಟ ಪ್ರದಾನಕಾಲದಲ್ಲಿ ಅವರಿಗೆ ಉಪದೇಶರೂಪವಾಗಿ, ತಮ್ಮ ಅಖಂಡ ವಿದ್ಯಾವೈದುಷ್ಯಾದಿಗಳ ಪ್ರತಿಭೆಯನ್ನು ಸ್ವಂತ ಅನುಭವದೊಂದಿಗೆ ಬೆರೆಸಿ ಅಗಾಧವೆನಿಸುವಂತೆ ಉಪನ್ಯಸಿಸಿದರು. ಆ ಸಂವತ್ಸರವೇ ಅಖಿಳಭಾರತ ರಾಷ್ಟ್ರೀಯ ಮಹಾಸಭೆಗೂ ಸಭ್ಯರಾಗಿ ಸೇರಿ, ಮದರಾಸಿನಲ್ಲಿ ಆ ಸಂವತ್ಸರದಲ್ಲಿ ನಡೆದ, ಆ ಮಹಾಸಭಾ ಸಮ್ಮೇಳನಕ್ಕೆ ಸ್ವಾಗತಾಧ್ಯಕ್ಷರಾಗಿ - ನ್ಯಾಯವಿಧಾಯಕ ಸಭೆಯನ್ನು ವಿಸ್ತರಿಸಿ, ಭಾರತೀಯರಿಗೆ ಹೆಚ್ಚು ಸ್ಥಾನಗಳನ್ನು ಕೊಡಬೇಕೆಂಬ ವಿಚಾರವನ್ನು ಪುಷ್ಟೀಕರಿಸಿ ಮಾತನಾಡಿದರು. ಕೊನೆಕೊನೆಗೆ ಅವರಿಗೆ ಈ ಬಗೆಯ ದೇಶಕಾರ್ಯಗಳನ್ನು ಮಾಡುವುದು ಸಹ ಕಷ್ಟವೆನಿಸುತ್ತಿತ್ತು. ತಮ್ಮ ಜೀವಿತದ ಕೊನೆಯ ಮೂರುನಾಲ್ಕು ವರ್ಷಗಳಲ್ಲಿ ಅವರು ಹರ್ಬರ್ಟ್ ಸ್ಪೆನ್ಸರ್ ಸಾಹೇಬನ ಗ್ರಂಥಗಳ ಪಠನೆಯನ್ನು ಮೆಚ್ಚಿ ಕೈಗೊಂಡಿದ್ದರು. ಅವರಿಗೆ ಸ್ವಯಂಸ್ಫೂರ್ತಿಯಿಂದ ಯೋಚಿಸಬಲ್ಲಾತನನ್ನು ಕಂಡರೆ ಹೆಚ್ಚು ಪ್ರಿಯವೆನಿಸುತ್ತಿತ್ತು. ಅಂತೆಯೇ ಕೊನೆಕೊನೆಯ ಅವರ ಸಾಮಾಜಿಕ-ರಾಜಕೀಯ ವಿಚಾರಗಳ

ಸಿದ್ಧಾಂತಗಳೆಲ್ಲವೂ ಆ ಸ್ಪೆನ್ಸರ್‌ನ ಮತವನ್ನೇ ಅನುಸರಿಸಿದ್ದವು. ಅವರು ಆಗಾಗ್ಗೆ ಪತ್ರಿಕೆಗಳಿಗೆ ಲೇಖನಗಳನ್ನು ಬರೆವ ಪದ್ಧತಿಯೂ ಇತ್ತು. ವಿರಾಮಹೊಂದುತ್ತಿದ್ದ ಈಗ ಮಾತ್ರವಲ್ಲ-ರಾಜ್ಯ ಕಾರ್ಯಭಾರವನ್ನು ವಹಿಸಿ ಅನೇಕಾನೇಕ ಕಾರ್ಯಗಳಲ್ಲಿ ಮುಳುಗಿದ್ದಾಗ ಸಹ, ವಿರಾಮ ಮಾಡಿಕೊಂಡು ಅವರು ಆಗಾಗ ಪತ್ರಿಕೆಗಳಿಗೆ ಲೇಖನ ಕೊಡುತ್ತಿದ್ದುದುಂಟು. ಒಂದಾನೊಂದುವೇಳೆ ಜ್ಯೋತಿಷ್ಯ ವಿಚಾರದಲ್ಲಿ ಅವರು ಬರೆದಿದ್ದ ಲೇಖನವೊಂದನ್ನು ನೋಡಿ ಯೂರೋಪಿನ ಅನೇಕಮಂದಿ ಜ್ಯೋತಿಷ ಪಂಡಿತರೂ ಮೆಚ್ಚಿ ತಲೆದೂಗಿದ್ದರಂತೆ! ಅವರು ಕೇವಲ ಪ್ರಾಪ್ತವಿಚಾರದ ರಾಜಕೀಯ ಸಂಗತಿಗಳ ಮೇಲೆ ಮಾತ್ರ ಪಕ್ಷಪಾತವುಳ್ಳವರಾಗಿರಲಿಲ್ಲ—ಜರ್ಮನರು ಪೂರ್ವ ಆಫ್ರಿಕದಲ್ಲಿ ನೆಲೆನಿಂತ ವಿಚಾರದಿಂದ ಪ್ರಾರಂಭಿಸಿ ಹಿಂದೂಸ್ತ್ರೀಯರ ವಸ್ತ್ರಭೂಷಣಗಳವರೆಗಿನ ವಿಚಾರಗಳಲ್ಲಿ ಯಾವುದನ್ನಾದರೂ ಕುರಿತು ಬರೆಯುತ್ತಿದ್ದರು. ಅವರ ಲೇಖನಗಳು, ದೀರ್ಘಾಲೋಚನೆ, ಪರಿಪೂರ್ಣಾನುಭವ ಸಾಧಕ ಬಾಧಕ ವಿಚಾರ ಮುಂತಾದುವುಗಳಿಂದ ಬಹು ಹೃದಯಂಗಮವಾಗಿರುತ್ತಿದ್ದುವು.

೧೮೮೮ನೆಯ ಸಂ||ದಲ್ಲಿ ಲಾರ್ಡ್ ಡಫರಿನ್ ಸಾಹೇಬರು ಪುನಃ ಮತ್ತೊಂದುವೇಳೆ ಅವರನ್ನು ವೈಸರಾಯಿಯವರ ಕೌನ್ಸಿಲಿನ ಸಭ್ಯತೆಗಾಗಿ ಶಿಫಾರಸ್ಸು ಮಾಡಿದರು. ಆದರೆ ಈ ಸಾರಿ ವೃದ್ಧಾಪ್ಯ ಮತ್ತು ಅಸೌಖ್ಯಾದಿಗಳ ದೆಸೆಯಿಂದ ರಾಯರು ಅದನ್ನು ಸ್ವೀಕರಿಸಲಾಗಲಿಲ್ಲ. ಅವರಿಗೆ ಚಿಕ್ಕವರ ವಿದ್ಯಾಭ್ಯಾಸ ವಿಚಾರದಲ್ಲೂ ಹೆಚ್ಚು ಪರಿಶ್ರಮವಿದ್ದುದು ಆಶ್ಚರ್ಯ ವಿಚಾರವು! ೧೮೮೯ರಲ್ಲಿ ಅವರು 'ದೇಶೀಯ ಬಾಲಕರ ವಿದ್ಯಾಶಿಕ್ಷಣ' ಎಂಬ ವಿಚಾರದಲ್ಲಿ ಒಂದು ಲೇಖನವನ್ನು ಬರೆದು ಪ್ರಕಟಿಸಿದರು. ಅದು ಮರಾಠಿ, ಗುಜರಾತಿ, ಮತ್ತು ಮಲೆಯಾಳೀ ಭಾಷೆಗಳಿಗೆಲ್ಲಾ ತರ್ಜುಮೆಯಾಗಿ, ಅನೇಕಮಂದಿ ವಿದ್ಯಾನಿಧಿಗಳ ಮನ್ನಣೆಯನ್ನು ಪಡೆಯಿತು. ಜರ್ಮನರು ಆಫ್ರಿಕಾಖಂಡದಲ್ಲಿ ವಾಸಸ್ಥಾನವನ್ನು ಏರ್ಪಡಿಸಿಕೊಂಡು ನಿಂತ ವಿಚಾರವನ್ನು ಕುರಿತು ಒಂದು ವ್ಯಾಸವನ್ನು ಅವರು ಬರೆದು ಅದನ್ನು ಜರ್ಮನಿಯ ಮಂತ್ರಿಶೇಖರನಾಗಿದ್ದ ಪ್ರಿನ್ಸ್ ಬಿಸ್ಮಾರ್ಕ್ ಮಹಾಶಯನಿಗೆ ಕಳುಹಿಸಿದರು. ಆತನು, ಆ ವ್ಯಾಸದಲ್ಲಿದ್ದ ವಿಚಾರಗಳನ್ನೂ ಆಚರಣೆಗೆ ತರಲು ಸುಲಭವೆನಿಸುವ ಅನೇಕ

ಅನುಭವಿಕ ಉನ್ನತ ತತ್ವಗಳನ್ನೂ ಕಂಡು, ಅದನ್ನು ಬಹುವಾಗಿ ಮೆಚ್ಚಿಕೊಂಡು ದಲ್ಲದೆ, ಅದರ ಜರ್ಮನ್ ಭಾಷಾ ತರ್ಜುಮೆಯನ್ನು ಅನೇಕಾಂತರ ಪ್ರತಿಗಳಾಗಿ ಛಾಪಿಸಿ ಪ್ರತಿಯೊಬ್ಬ ಜರ್ಮನ್ ಸೇನಾನಿಗೂ ಕೊಡಿಸಿದನು. ಅವರಿಗೆ ಮಾತೃಭಾಷಾ ಗ್ರಂಥಪಠನೆಯಲ್ಲಿ ಅಧಿಕಾಧಿಕ ಪ್ರೇಮವಿತ್ತು. ಅವರು ಚಿಕ್ಕ ಚಿಕ್ಕ ಕವಿತೆಗಳನ್ನೂ ರಚಿಸುತ್ತಿದ್ದುದುಂಟು. ಅವು ಲಲಿತ ಪದವಾಕ್ಯಪುಂಜಗಳಿಂದ ಮನೋಹರವೂ, ರಸಭರಿತವೂ ಬಾಲಬೋಧಕವೂ ಆಗಿರುತ್ತಿದ್ದುವೆಂದು ಪ್ರಸಿದ್ಧವಾಗಿದೆ. ಸಾಹಿತ್ಯದಲ್ಲಿದ್ದಂತೆಯೇ ಅವರಿಗೆ ಚಿತ್ರಕಲೆಯಲ್ಲೂ ವಿಶೇಷ ಪ್ರೇಮವಿದ್ದು, ಅವರು ಸೌಂದರ್ಯಾರಾಧಕರಾಗಿದ್ದರು. ಉತ್ತಮ ಚಿತ್ರಪಟಗಳನ್ನು ಸಂಗ್ರಹಿಸುವುದರಲ್ಲಿ ಅವರಿಗೆ ಅತಿಶಯ ಅಪೇಕ್ಷೆಯಿತ್ತೆಂದೂ ಹೇಳಿಕೆಯುಂಟು. ಹೀಗೆ ಅವರು ಸರ್ಕಾರದ ಘನವಾದ ಉದ್ಯೋಗವನ್ನು ನಿರ್ವಹಿಸಿದ್ದರಾದರೂ, ತಮ್ಮ ದೇಹಮನೋಬುದ್ಧಿಗಳೆಲ್ಲವೂ ಸರ್ಕಾರಕ್ಕೆ ಮಾರಿಹೋದುವೋ ಎಂಬಂತಲ್ಲದೆ ಸಾಹಿತ್ಯಪ್ರೇಮವನ್ನೂ, ಅದರಲ್ಲೂ ವಿಶೇಷವೆನ್ನಿಸುವಂತೆ, ಮಾತೃಭಾಷಾಭಿಮಾನವನ್ನೂ ಉಂಟಾಗಿದ್ದು ಆ ಭಾಗದಲ್ಲೂ ಆ ಮಹನೀಯರು ಆದರ್ಶಪುರುಷರೆನ್ನಿಸಲರ್ಹರಾದರು.



# ಉ ಪ ಸಂ ಹಾ ರ

'ಸಾದಾ ಜೀವನ ಮತ್ತು ಉಚ್ಚಚಿಂತನ' ವನ್ನು ಅವರು ಮೆಚ್ಚಲಿಲ್ಲವೆಂದಲ್ಲ. ಆದರೆ ಅವರ ಆಯುಷ್ಯದ ಬಹು ಭಾಗವು ಉನ್ನತೋನ್ನತ ಅಧಿಕಾರದಲ್ಲೇ ಇದ್ದು ಕಳೆದುದಾದುದರಿಂದ, ಅವರು ಅಷ್ಟುಮಟ್ಟಿಗೆ ಸಾದಾ ಜೀವನದಲ್ಲಿದ್ದರೆಂದು ಹೇಳಲಾಗುವುದಿಲ್ಲ. ಅವರ 'ಉಚ್ಚ ಚಿಂತನ' ವೆಂದರೆ ನರಲೋಕವನ್ನು ನರಕ ಸದೃಶವಾಗಿ ಕಂಡು, ಸುರಲೋಕದ ಸಂಪತ್ತಿನ ಕನಸು ಕಾಣುತ್ತಿದ್ದುದಾಗಿರಲಿಲ್ಲ. ತಾವು ಅಧಿಕಾರದಲ್ಲಿದ್ದವರೆಗೆ ಮನಸ್ಸಾಕ್ಷಿಗೆ ವಿರೋಧವೆನ್ನಿಸಬಹುದಾದ ಯಾವುದೊಂದು ಕೆಲಸವನ್ನೂ ಮಾಡದೆ,

ತಮ್ಮ ಋಜುವರ್ತನ ಚಟುವಟಿಕೆ, ಪ್ರಜ್ಞಾ ಸಾಮರ್ಥ್ಯಾದಿಗಳನ್ನು ಕಂಡು, ಮಹಾಕಾರ್ಯಚತುರರೆನಿಸಿದ ಆಂಗ್ಲೇಯರೂ ಆಶ್ಚರ್ಯ ಪಡುವಂತೆ ವರ್ತಿಸುತ್ತಿದ್ದರು. ಅವರು ತಮ್ಮ ಕೈಕೆಳಗಿನವರಲ್ಲಿ ಎಂದೂ ನಿಷ್ಠುರರಾಗಿದ್ದುದಿಲ್ಲ. ಅಥವ ತಮ್ಮ ಮನಸ್ಸಾಕ್ಷಿಯನ್ನು ಕೊಂದು ಮೇಲ್ಪಟ್ಟವರಿಗೆ ಅಡಿಯಾಳಾಗಿದ್ದುದೂ ಇಲ್ಲ. ಅವರ ಅಪಾರವಾದ ಆಸ್ತಿಯಲ್ಲಿ ಒಂದು ಬಿಡಿಕಾಸಾದರೂ ಅನ್ಯಾಯ ಸಂಪಾದನೆಯು ಸೇರಿರಲಿಲ್ಲವೆಂದು ಪ್ರಸಿದ್ಧವಿದೆ. ಅವರ ಗುಣ - ಚರ್ಯೆಗಳನ್ನು ಮೆಚ್ಚಿಕೊಂಡು ವರ್ಣಿಸುತ್ತಾ, ಸರ್. ರಿಛಾರ್ಡ್ ಟೆಂಪಲ್ ಸಾಹೇಬನು - "ಸರ್ ಮಾಧವರಾಯರ ಅಂತರ್ಬಾಹ್ಯ ನಡೆನುಡಿಗಳು ಅನುಪಮವೂ ಅನುಕರಣೀಯವೂ ಆಗಿವೆ. ಅವರ ಶಕ್ತಿಸಾಮರ್ಥ್ಯಗಳು ಬಹು ಉನ್ನತ ದರ್ಜೆಯವು. ಅವರಿಗಿರುವ ಆಂಗ್ಲೇಯ ಭಾಷಾನುಭವವೂ, ಸರ್ಕಾರದ ಮತ್ತು ವ್ಯವಹಾರದ ವಿಚಾರಗಳಲ್ಲಿ ಅವರಿಗಿರುವ ಸರ್ವತೋಮುಖವಾದ ಅನುಭವವೂ ಅವರಿಗೆ ಹಿಂದೂಸ್ಥಾನದಲ್ಲೇ ಒಂದು ಉನ್ನತ ಸ್ಥಾನವನ್ನು ಕೊಡಿಸಲು ಯೋಗ್ಯವಾಗಿವೆ. ದೇಶಾಭಿವೃದ್ಧಿಗೆ ಅವಶ್ಯಕವೆನಿಸುವ ಎಲ್ಲಾ ವಿಚಾರಗಳಲ್ಲೂ ಅವರಿಗೆ ಸಂಪೂರ್ಣ ಅನುಭವವೂ ಸಹಾನುಭೂತಿಯೂ ಇದೆಯಾದರೂ, ಈಗಿನ ಸಾಮಾಜಿಕ ಸುಧಾರಣೆಗಳಲ್ಲಿ ಅನೇಕವನ್ನು ಅವರು ಒಪ್ಪುತ್ತಿರಲಿಲ್ಲ"ಎಂದು ಉದ್ಗಾರಿಸಿದ್ದಾರೆ.

ನಮ್ಮ ಕಥಾನಾಯಕರು ಸತ್ಯ ಧರ್ಮ ನ್ಯಾಯ ಪರೋಪಕಾರ ಭೂತದಯೆ ಮುಂತಾದ ಮಾನವ ಸಾಮಾನ್ಯ ಸದ್ಗುಣಗಳನ್ನು ಮೆಚ್ಚಿ - ಅವುಗಳಿಗಾಗಿ ಹೆಸರುವಾಸಿಯಾಗಿದ್ದರು. ಹೃದಯದಲ್ಲಿ ತೋರ್ಪಡದಿದ್ದ ಕಪಟ ದೈವಭಕ್ತಿಯನ್ನಾಗಲೀ, ವೈರಾಗ್ಯವನ್ನಾಗಲೀ ಇರುವಂತೆ ಪ್ರಕಟಪಡಿಸಲು ಎಂದೂ ಯತ್ನಿಸಿದವರಲ್ಲ. ಈ ಭೌತಿಕಪ್ರಪಂಚವು ಕೆಲವರು ಹೇಳುವಂತೆ ಮಾಯವಿರಲಿ ಅಥವ ಸತ್ಯವಿರಲಿ, ಸ್ಥಿರವಾದುದಾಗಿರಲಿ ಅಥವ ಅಶಾಶ್ವತವಾದುದಾಗಿರಲಿ, ಎಂತೂ ನಮ್ಮ ಪಂಚೇಂದ್ರಿಯಗಳಿಗೆ ಗೋಚರವೆನಿಸುವ ಈ ಜಗತ್ತಿನ ಸೌಂದರ್ಯವನ್ನೂ - ಸುಖವನ್ನೂ ನ್ಯಾಯವಿರುದ್ಧವಲ್ಲದ ಮಾರ್ಗಗಳಿಂದ ಅನುಭವಿಸುವುದು ದೋಷವಲ್ಲವೆಂಬುದು, ಮತ ವಿಷಯದಲ್ಲಿ ಅವರ ಅಭಿಪ್ರಾಯವಾಗಿದ್ದಿತು !

ನಮ್ಮ ಕಥಾನಾಯಕರ ತಂದೆಯವರು ತಿರುವಾಂಕೂರಿನಲ್ಲಿ ಮಂತ್ರಿ ಪದವಿಯಲ್ಲಿದ್ದವರು. ತಾವು ಸ್ವತಃ ಮೂರು ಸಂಸ್ಥಾನಗಳಲ್ಲಿ ಮಂತ್ರಿ ಪದವಿಯನ್ನು ನಿರ್ವಹಿಸಿ 'ರಾಜಾ' ಎಂಬ ಅನನ್ಯ ಸಾಧಾರಣವಾದ ಬಿರುದನ್ನೂ ಶ್ರೀಮಂತ ಪದವಿಯನ್ನೂ ಪಡೆದವರು. ಅವರ ಪುತ್ರರು ಕೀ. ಶೇ. (ಟಿ. ಆನಂದರಾಯರವರು) ನಮ್ಮ ಈ ಮೈಸೂರು ಸಂಸ್ಥಾನದಲ್ಲೇ ಅಮಾತ್ಯ ಪದವಿಯನ್ನು ವಹಿಸಿ ಮಹಾರಾಜಪೂಜಿತ ರಾಜ್ಯಮಾನ್ಯರಾಗಿದ್ದು 'ಪ್ರಧಾನ ಶಿರೋಮಣಿ' ಎಂಬ ಅಮೌಲ್ಯ ಬಿರುದನ್ನು ವಹಿಸಿ ಕೀರ್ತಿಶೇಷರಾದವರು. ಒಂದೇ ವಂಶವೃಕ್ಷವು ಎಡೆಬಿಡದೆ ಇಂತಹ ಅಮೌಲ್ಯ-ಅಮೃತಫಲಗಳನ್ನು ಪ್ರಸಾದಿಸಿದ ಉದಾಹರಣೆಯು ಮಾನವಚರಿತ್ರೆಯಲ್ಲಿ ಅಪೂರ್ವವಲ್ಲವೆ!

ಯಾವ ನಮ್ಮ ಕಥಾನಾಯಕರು, ಆಗರ್ಭಶ್ರೀಮಂತರಾಗಿ ಜನಿಸಿದರೂ, ಸುಖಸೌಲಭ್ಯಾದಿಗಳಲ್ಲಿ ಮುಳುಗಿ ಜೀವಿತವು ನಿರರ್ಥಕವಾಗದಂತೆ, ವಿದ್ಯಾಬುದ್ಧ್ಯಾದಿಗಳನ್ನು ಗಳಿಸಿ, ತಮ್ಮ ಅಮೌಲ್ಯಜ್ಞಾನ ಶ್ರದ್ಧಾ ಕ್ರಿಯಾ ಸಾಮರ್ಥ್ಯಗಳನ್ನು ಸ್ವಜನ-ಸ್ವದೇಶೋದ್ಧಾರಕ ಕಾರ್ಯಗಳಲ್ಲಿ ವಿನಿಯೋಗಿಸಿ ಕೀರ್ತಿಶರೀರವನ್ನು ಗಳಿಸಿ ಅದ್ವಿತೀಯ ಭಾರತಪುತ್ರನೆಂಬ ಹೊಗಳಿಕೆಗೆ ಪಾತ್ರರಾದರೋ ಅಂತಹ ಪ್ರಜ್ಞಾಪ್ರಭೆಗಳೂ ಶ್ರದ್ಧೆ ಕರ್ತೃತ್ವಸ್ವಭಾವಗಳೂ ಮಾರ್ಗದರ್ಶಕಗಳಾಗಿರಲು, ನಮ್ಮ ಕರ್ನಾಟಕ ಬಾಲಕರೂ ತರುಣರೂ

ಮಹನೀಯರ ಉಚ್ಚಾದರ್ಶವನ್ನು ಅನುಸರಿಸಿ ಕಾರ್ಯಪ್ರವೃತ್ತರಾಗಿ ದೇಶಸೇವಕರಾಗಲಿ. ರಾಜಸೇವಕರಾಗಲಿ. ಆದರೂ ಕೇವಲ ಜೀವನಕ್ಕಾಗಿ ಆತ್ಮಸ್ವಾತಂತ್ರ್ಯ-ಮಾನಸ ಸ್ವಾತಂತ್ರ್ಯಗಳನ್ನು ಸೂರೆಗೊಡದಂತೆ ಧೀರರಾಗಿರಲಿ! ಸತ್ಯಸಂಧರಾಗಿರಲಿ! ಪ್ರತಾಪನಿಧಿಗಳಾಗಿರಲಿ.

ತ ಥಾ ಸ್ತು



॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಶ್ರೀರಾಮಭಕ್ತಿ ಸಾಮ್ರಾಜ್ಯವನ್ನು ಸ್ಥಾಪಿಸಿ-ತನ್ಮೂಲಕ ಲೋಕದಲ್ಲಿ ಶಾಂತಿ ಸುಖ ಸಮಾಧಾನಗಳನ್ನು ಹಬ್ಬಿಸಲು ಶ್ರಮಿಸಿದ ಮಹಾಪುರುಷರಲ್ಲಿ ನಮ್ಮ ಚರಿತ್ರ ನಾಯಕರಾದ ಶ್ರೀ ಕಬೀರದಾಸರೂ ಒಬ್ಬರು. ಲೋಕದಲ್ಲಿ ಅನ್ಯಾಯವೂ ಅಸತ್ಯವೂ ಅಶಾಂತಿಯೂ ನೆಲೆಗೊಂಡು, ಜನಮನವು ತಳಮಳಗೊಂಡಿದ್ದ ವೇಳೆಯಲ್ಲ, ಭಗವಾನನು ಆ ತಳಮಳವನ್ನು ನೀಗಿಸಿ ಶಾಂತತೆಯನ್ನು ಸ್ಥಾಪಿಸಲಿಕ್ಕಾಗಿ ಮಾಡುವ ಕಾರ್ಯವು ಕೆಲವು ವೇಳೆ ಅತಿಶಯ ಕೌತುಕವಾಗಿ ತೋರಿಬರುತ್ತಿರುವುದು. ಭಾರತದೇಶದ ಧಾರ್ಮಿಕ ಜೀವನದ ಅಭಿವೃದ್ಧಿ ಅವನತಿಗಳನ್ನು ಕುರಿತು, ದೇಶಚರಿತ್ರೆಯನ್ನು ಅನುಸರಿಸಿ ನೋಡುತ್ತ ಬರುವುದಾದರೆ, ಈ ವಿಚಾರದ ನಿಶ್ಚಯ ಸ್ವರೂಪವನ್ನು ಕಾಣಬಹುದು!

ಕ್ರಿಸ್ತಶಕದ ಹತ್ತು ಹನ್ನೊಂದನೆಯ ಶತಮಾನಗಳಲ್ಲಿ ಮಹಮ್ಮದೀಯರು ಹಿಂದೂಸ್ಥಾನವನ್ನು ಪ್ರವೇಶಿಸಿದರಷ್ಟೆ! ಪ್ರಾರಂಭದ ಒಂದೆರಡು ಶತಮಾನಗಳಲ್ಲಿ, ಈ ದೇಶದಮೇಲೆ ದಂಡೆತ್ತಿಬಂದ ಮಹಮ್ಮದೀಯ ರಾಜರಿಗೆ ಇಲ್ಲಿ ರಾಜ್ಯವನ್ನು ಕಟ್ಟಬೇಕೆಂದಾಗಲೀ, ಈ ದೇಶದಲ್ಲೇ ವಾಸಿಸಬೇಕೆಂದಾಗಲೀ ಅಭಿಪ್ರಾಯವಿರಲಿಲ್ಲ. ಅವರು ಕೇವಲ, ಧರ್ಮದ ಹೆಸರಿನಲ್ಲಿ ಈ ದೇಶೀಯರ ದೇವಸ್ಥಾನ ಧರ್ಮಸ್ಥಳಗಳನ್ನು ನಾಶಮಾಡುತ್ತ--ಹೆಂಗಸರು ಮಕ್ಕಳು ವೃದ್ಧರೆಂದು ನೋಡದೆ ಕೊಲ್ಲುತ್ತ--ಕೈಗೆ ಸಿಕ್ಕಿದ ಪದಾರ್ಥಗಳನ್ನು ದೋಚಿಕೊಂಡು ಹೋಗುತ್ತ, ಹೀಗೆ ಬಹುವಿಧಗಳಿಂದ ಹಾವಳಿ ಮಾಡುತ್ತಿದ್ದರು ಮಾತ್ರ! ಆದರೆ, ತರುವಾಯ ಹದಿಮೂರು ಹದಿನಾಲ್ಕನೆಯ ಶತಮಾನಗಳ ವೇಳೆಗೆ ಅವರಲ್ಲಿ ಕೆಲವರು ಇಲ್ಲೇ ರಾಜ್ಯಕಟ್ಟಿ ನಿಲ್ಲಬೇಕೆಂದು ಪ್ರಯತ್ನಿಸಿದರು. ಹಾಗೆಯೇ ಒಂದೆರಡು ಶತಮಾನಗಳು ಕಳೆಯಲು, ಮುಂದೆ ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ಬಾಬರನು ಡಿಲ್ಲೀನಗರವನ್ನು ಜಯಿಸಿ ಮೊಗಲ್ ಸಾಮ್ರಾಜ್ಯಕ್ಕೆ ತಳಹದಿಯನ್ನು ಹಾಕಿದ ತರುವಾಯ ಮಹಮ್ಮದೀಯರು ಗೊತ್ತಾಗಿ ಹಿಂದೂಸ್ಥಾನದಲ್ಲಿಯೇ ನಿಲ್ಲುವಂತಾಯಿತು. ಹಿಂದೂಸ್ಥಾನವು ಅನಾದಿ ಕಾಲದಿಂದಲೂ ಹೇಗೆ ಹಿಂದೂಗಳ ಜನ್ಮಭೂಮಿಯೆಂದು ಪ್ರಸಿದ್ಧವಾಗಿದೆಯೋ ಅದರಂತೆಯೇ ಆಗಿನಿಂದ ಇದು ಮಹಮ್ಮದೀಯರಿಗೂ ಜನ್ಮಭೂಮಿಯಾಗಿ ಏರ್ಪಟ್ಟಿತು. ಮುಂದೆ ಹಿಂದೂಗಳೂ ಮಹಮ್ಮದೀಯರೂ, ಇಷ್ಟವಿರಲಿ-ಇಲ್ಲವಿರಲಿ ಎಂತೂ ಒಟ್ಟಿಗೆ-ನೆರೆಹೊರೆಯವರಾಗಿ ವಾಸಿಸಿಯೇ ತೀರಬೇಕಾದ ಅವಶ್ಯಕತೆಯುಂಟಾಯಿತು.

ಹೀಗೆ ಲೌಕಿಕವಾಗಿ ಒಂದೇ ದೇಶದಲ್ಲಿ ಒಂದೇ ಪಟ್ಟಣದಲ್ಲಿ ಒಂದೇ ಊರಿನಲ್ಲಿ ಒಂದೇ ಗ್ರಾಮದಲ್ಲಿ ಒಂದೇ ಬೀದಿಯಲ್ಲಿ--ಬೇರೆಬೇರೆ ಜನಾಂಗಕ್ಕೆ ಸೇರಿದ ಈಇಬ್ಬರೂ ವಾಸಿಸಲೇಬೇಕಾಗಿ ಬಂದಿತಾದರೂ, ಧರ್ಮ, ದೇವರು, ಪರಲೋಕ ಮುಂತಾದ ಅವ್ಯಕ್ತ-ಆಧ್ಯಾತ್ಮಿಕ ವಿಷಯಗಳಲ್ಲಿ ಒಬ್ಬರ ವಿಚಾರ ವೇನೆಂಬುದು ಮತ್ತೊಬ್ಬರಿಗೆ ತಿಳಿಯಲು ಅವಕಾಶವಿಲ್ಲದೆ, ಉಭಯರಿಗೂ ದ್ವಂದ್ವಯುದ್ಧವು ಸದಾ ನಡೆಯುತ್ತಲೇ ಇತ್ತು. ಅಂದು ಮಾತ್ರವಲ್ಲ- ಇಂದು ಸಹ ಧರ್ಮದ ಹೆಸರಿನಲ್ಲಿ ಪ್ರಾರಂಭವಾಗುವ ಪರಸ್ಪರರ ಈ ಬಗೆಯ ಮನಸ್ತಾಪಗಳ ಫಲವಾಗಿ ಅನೇಕ ವೇಳೆ ರಕ್ತಪ್ರವಾಹವೇ ಹರಿವುದುಂಟಷ್ಟೆ! ಈ ಮೂಲಕವಾಗಿ ಜನಮನದಲ್ಲಿ ಅಶಾಂತತೆಯು ಸದಾ ತುಂಬಿ ತುಳು ಕುತ್ತಿದ್ದಿತು ಕೇವಲ ಅತ್ಯಲ್ಪ ಸಂಗತಿಗಳು ಸಹ ಒಡನೆ ಧಾರ್ಮಿಕ ಸ್ವರೂಪವನ್ನು ಹೊಂದಿ, ಪರಸ್ಪರರ ಕಲಹಕ್ಕೆ ಕಾರಣವಾಗುತ್ತಿದ್ದುವು ಅಂತಹ ಸಂದರ್ಭದಲ್ಲಿ ಉಭಯರ ಧರ್ಮಸಿದ್ಧಾಂತಗಳೇನು, ಧರ್ಮ, ದೇ ವರು, ಪರಲೋಕ, ಸತ್ಯ, ನ್ಯಾಯ, ನಮಾಜು, ಪೂಜೆ, ಯಾತ್ರೆ, ತೀರ್ಥ, ಧ್ಯಾನ, ಮೌನ, ಜಪತಪ, ಉಪವಾಸ ಮುಂತಾದುವುಗಳ ನಿಶ್ಚಯ ಸ್ವರೂಪ ವೇನು! ಎಂಬುದನ್ನು ಸ್ವತಃ ತಿಳಿದು ಜನಸಮಾಜಕ್ಕೆ ತಿಳಿವಳಿಕೆಯನ್ನು ಕೊ ಡತಕ್ಕದ್ದು ಆ ಕಾಲದಲ್ಲಿ ಅತ್ಯಾವಶ್ಯಕವಾಗಿದ್ದಿತು. ಅದು ಆಗ ಲೋಕಕ್ಷೇ ಮಕ್ಕಾಗಿ ನಡೆಯಬೇಕಾದ ಅತಿಮುಖ್ಯ ಕಾರ್ಯವೆಂದು ತೋರಿತು! ಆ ಕಾರ್ಯ ವನ್ನು ಹಿಂದುವಾಗಿ ಹುಟ್ಟಿದ ಭಾರತೀಯನಲ್ಲ—ಮಹಮ್ಮದೀಯನಾಗಿ ಹು ಟ್ಟಿದ ಭಾರತೀಯನು ಮಾಡತಕ್ಕುದು ಹೆಚ್ಚು ಅವಶ್ಯಕವೆನ್ನಿಸಿತು! ಅದರಂ ತೆಯೇ, ಲೋಕಸಂಗ್ರಹಣದ ಆ ಮಹತ್ಕಾರ್ಯವನ್ನು ನೆರವೇರಿಸಿ ತನ್ಮೂ ಲಕ ಆ ಭಗವತ್ಕಾರ್ಯ ಸಾಧನೆಯಲ್ಲಿ ಉಪಕರಣವಾಗಿರಲು ಮಹಮ್ಮ ದೀಯ ದೇಹದಿಂದ ಜನ್ಮವೆತ್ತಿದವರೇ ನಮ್ಮ ಪ್ರಕೃತ ಕಥಾನಾಯಕರಾದ ಶ್ರೀ ಕಬೀರದಾಸರು.

ಈ ಚರಿತ್ರೆಯನ್ನೂ, ಕರ್ನಾಟಕ ಬಾಂಧವರು, ಗ್ರಂಥಮಾಲಾ ಇತರ ಪುಸ್ತಕಗಳಂತೆಯೇ ಆದರದಿಂದ ಸ್ವೀಕರಿಸಿ ಸ್ವಹಸ್ತ ಪರಹಸ್ತಗಳಿಂದ ಗ್ರಂ ಥಮಾಲಾ ಸ್ಥಿರ ಜೀವಿತಕ್ಕೆ ಯೋಗ್ಯ ಪ್ರೋತ್ಸಾಹವನ್ನು ಒದಗಿಸಿ ತಮ್ಮ ಔದಾರ್ಯ ಭಾಷಾಭಿಮಾನಗಳನ್ನು ಕಾರ್ಯರೂಪದಲ್ಲಿ ಪ್ರದರ್ಶಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
ತಾ|| ೩೦-೯-೧೯೩೮

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಶ್ರೀ ಕಬೀರದಾಸರು.

# ಶ್ರೀರಾಮ ಭಕ್ತಾಗ್ರಣಿ

# ಶ್ರೀ ಕಬೀರದಾಸರು

## ಅಧ್ಯಾಯ ೧ "ಪುಷ್ಪಶಯ್ಯೆಯಿಂದ-ತೊಟ್ಟಿಲಿಗೆ"

ಪ್ರಪಂಚದ ಇತರ ಭಾಗಗಳಲ್ಲಿ ಹೇಗಾದರೂ ಇರಲಿ - ನಮ್ಮ ಮಾತೃಭೂಮಿಯಾದ ಈ ಭಾರತ ದೇಶದಲ್ಲಂತೂ, ಯಾವ ಲೌಕಿಕ ವಿಚಾರವೂ ಧಾರ್ಮಿಕ ಸ್ವರೂಪವನ್ನು ಹೊಂದದೆ ಇತ್ಯರ್ಥವಾದುದಿಲ್ಲ! ಇದು, ಇಂದಲ್ಲ ಅನಾದಿಕಾಲದಿಂದಲೂ ನಡೆದುಬಂದಿದೆ! ದೇಶಚರಿತ್ರೆಯು ಇದಕ್ಕೆ ಪ್ರತ್ಯಕ್ಷ ಪ್ರಮಾಣವನ್ನು ಕೊಡುತ್ತದೆ. ಹಿಂದೆ, ಕೇವಲ ಕೊಳ್ಳೆ, ಸುಲಿಗೆ, ಕೊಲೆಗಳಿಂದ ಭರತವರ್ಷದ ಅಪಾರ ಐಶ್ವರ್ಯವನ್ನು ಸೂರೆಗೊಳ್ಳಲಿಕ್ಕೆಂದು ಈ ದೇಶವನ್ನು ಹೊಕ್ಕ ಮಹಮ್ಮದೀಯರೇ ಮೊದಲಾದ ಪರದೇಶೀಯ ಜದಾಂಗದವರೆಲ್ಲರೂ, ಮತ ಧರ್ಮ ದೇವದೇವತಾವಿಗ್ರಹಗಳು ಗೋವು ಪಾಪಪುಣ್ಯಭೀತಿ ಸ್ವರ್ಗನರಕವಿಚಾರ ಮುಂತಾದವುಗಳ ವಿಷಯದಲ್ಲಿ ನಮ್ಮವರಿಗಿದ್ದ ಮನೋಭಾವನೆಯನ್ನು ಕಂಡುಕೊಂಡು ಈ ಮೂಲಕವಾಗಿಯೇ ಇವರನ್ನು ನೆಗ್ಗಿಸಬಹುದೆಂದು ಭಾವಿಸಿ, ನಮ್ಮವರನ್ನು ಜಯಿಸಲು ಈ ಪ್ರಶ್ನೆಗಳನ್ನೇ ಮುಂದುಮಾಡಿಕೊಂಡು ಬಂದರು ನಮ್ಮವರಾದರೂ ಪರಕೀಯರು ತಮ್ಮಮೇಲೆ ದಂಡೆತ್ತಿಬರುತ್ತಿದ್ದುದು ಸ್ವಕೀಯ ಧರ್ಮ ಪ್ರಚಾರಕ್ಕಾಗಿಯಾದರೂ ಆಗಲಿ, ಅಥವಾ ಆರ್ಥಿಕ ಅಪೇಕ್ಷೆಯಿಂದಲಾದರೂ ಆಗಲಿ, ಅಥವ ರಾಜ್ಯಲೋಭಕ್ಕೊಳಪಟ್ಟು ರಾಜಕೀಯ ಭಾವನೆಯಿಂದಲಾದರೂ ಆಗಲಿ, ಹೇಗಾದರೂ ಮುಖ್ಯ ತಮ್ಮ ಧರ್ಮಕ್ಕೆ ಲೋಪ ಬರುವುದೆಂಬುದೊಂದೇ ಮನೋಭಾವನೆಯಿಂದ ಕೆಲವುವೇಳೆ ಅವರನ್ನು ಎದುರಿಸುತ್ತಲೂ, ಮತ್ತೆ ಕೆಲವುವೇಳೆ ಸರ್ವಸ್ವವನ್ನೂ ಸೂರೆಗೊಟ್ಟು ಓಡಿಹೋಗುತ್ತಲೂ ಹೀಗೆ ಬಹುವಿಧ

ಕಷ್ಟಕಾರ್ಪಣ್ಯಗಳಿಗೆ ಎಡೆಯಾದರು.ತನ್ನ ಪರಲೋಕದ ಸದ್ಗತಿಗೆ ವಿಘ್ನಕಾರಿಯಾಗುವುದೆಂದರೆ, ಇಹಲೋಕದ ಸಮಸ್ತವನ್ನೂ ಸೂರೆಗೊಡಲಿಕ್ಕಾದರೂ ಸಿದ್ಧನಾಗತಕ್ಕುದು, ಭಾರತೀಯನಿಗೆ ರಕ್ತದೊಂದಿಗೇ ಬಂದ ಭಾವನೆ. ಈ ಭಾವನಾ ಅಶಕ್ತತೆಯನ್ನು ಕಂಡುಕೊಂಡ ಪರಕೀಯರು, ಅವನನ್ನು ಈ ಮೂಲಕವಾಗಿಯೇ ಬಗ್ಗಿಸಿ, ನೆಗ್ಗಿಸಿ, ಅಂಜಿಸಿ, ಅಂಜಿದ ಅವನ ಮೇಲೆ ಕಪ್ಪೆಯನ್ನೂ ಎತ್ತಿ ಹಾಕಿ, ಎಂತೂ ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಲು ಹವಣಿಸಿದ್ದಾರೆ-ಹವಣಿಸುತ್ತಿದ್ದಾರೆ.

ಮುಹಮ್ಮದೀಯರ ತರುವಾಯ ಈ ದೇಶವನ್ನು ಆಕ್ರಮಿಸಿ ರಾಜ್ಯಭಾರವನ್ನು ಗಳಿಸಿದ ಪಾಶ್ಚಾತ್ತ ಜನಾಂಗಗಳವರಾದರೂ ಸಾಮಾಜಿಕ ನೈತಿಕ ರಾಜಕೀಯ ಪ್ರಶ್ನೆಗಳೆಲ್ಲಕ್ಕೂ ಈ ಧಾರ್ಮಿಕ ಪ್ರಶ್ನೆಯನ್ನೇ ಮುಂದುಮಾಡಿಕೊಂಡು ಈ ದೇಶೀಯರನ್ನು ತಮ್ಮ ಧರ್ಮಕ್ಕೆ ಮಿಷನೆರಿಗಳ ಮೂಲಕ ಹೆಚ್ಚುಹೆಚ್ಚಾಗಿ ಸೇರಿಸಿಕೊಳ್ಳತೊಡಗಿದರು. ಇದರಿಂದ ಪ್ರಪಂಚದ ಯಾವ ದೇಶೀಯರೇ ಆಗಲಿ, ಧಾರ್ಮಿಕ ಪ್ರಶ್ನೆಯಿಂದಲೇ ಉಪಜೀವಿಸುತ್ತಿದ್ದಾರೆಂದು ಭಾವಿಸುವದಕ್ಕೆ ಸಂಶಯವಿಲ್ಲ. ಆದರೆ ಭಾರತೀಯರಿಗೂ ಇತರರಿಗೂ ಈ ವಿಷಯದಲ್ಲೂ ಒಂದು ಪ್ರಬಲ ವ್ಯತ್ಯಾಸವುಂಟು! ಭಾರತೀಯರು ತಮ್ಮ ಧಾರ್ಮಿಕ ವಿಚಾರದ ರಕ್ಷಣೆಗಾಗಿ ಸಾಮಾಜಿಕ ಆರ್ಥಿಕ ರಾಜಕೀಯ ವಿಚಾರಗಳನ್ನೂ ಕೊನೆಗೆ ತಮ್ಮಪ್ರಾಣಗಳನ್ನೂ ಬಲಿ ಕೊಡಲು ಸಿದ್ಧರಾಗುವರು. ಇತರರಾದರೋ ತಮ್ಮ ಸಾಮಾಜಿಕ ಆರ್ಥಿಕ ರಾಜಕೀಯ ವಿಚಾರಗಳ ಪ್ರಾಪ್ತಿಗಾಗಿ - ಲಾಭಕ್ಕಾಗಿ, ಧಾರ್ಮಿಕ ವಿಚಾರವನ್ನು ಒಂದು ಉಪಕರಣವಾಗಿ ಉಪಯೋಗಿಸಿಕೊಳ್ಳುವರು. ಭಾರತೀಯರ ದೃಷ್ಟಿಯಲ್ಲಿ ಧರ್ಮವೇ ಜೀವನವಾಗಿದ್ದರೆ, ಪರಕೀಯರ ದೃಷ್ಟಿಯಲ್ಲಿ ಧರ್ಮವೇ ಜೀವನವನ್ನೊದಗಿಸಿಕೊಡುವ ಸಾಧನವಾಗಿದೆ. ಇಷ್ಟೇ ವ್ಯತ್ಯಾಸ!

ಹೀಗೆ ಹೇಳುವುದರಿಂದ, ನಾವು ಆಬಾಲವೃದ್ಧ ಹಿಂದೂ ಜನಾಂಗವು ಧರ್ಮದ ಅಪರಾವತಾರವೆಂದು ಸ್ಥಾಪಿಸಲೆಳೆಸಿದ್ದೇವೆಂದು ಯಾರೂ ಭಾವಿಸಬಾರದು. ಆದರೆ ನಾವು ಹೇಳತೊಡಗಿದ್ದೇನಂದರೆ, ಹಿಂದೂ ಜನರಿಗೆ ಧರ್ಮಾಚರಣೆಯಿಂದ ಲಭಿಸಲುಳ್ಳ ಅವ್ಯಕ್ತವಾಗಿರುವ ಪರಲೋಕದಲ್ಲಿರುವಷ್ಟು ನಂಬಿಕೆಯು, ವ್ಯಕ್ತವಾಗಿರುವ-ಆಮರಣಾಂತ ಸುಖ ಕಷ್ಟಗ

ಳನ್ನನುಭವಿಸುತ್ತ ಎದ್ದು ಬಿದ್ದು ಸಾಗಬೇಕಾಗಿರುವ ಇಹಲೋಕ ಜೀವಿತ ದಲ್ಲಿಲ್ಲ.—ಈ ಭಾವನೆಯಿದ್ದ ಮಾತ್ರಕ್ಕೇ ಅವರಲ್ಲೊಬ್ಬೊಬ್ಬನೂ ವೈರಾ ಗ್ಯಚಕ್ರವರ್ತಿಯಾಗಿದ್ದಾನೆಂದೂ ಭಾವಿಸಬಾರದು. ವಿಷಯೇಂದ್ರಿಯಾ ದಿಗಳ ಎಳೆತಕ್ಕೆ ಸಿಕ್ಕಿ ಅವನೂ ರಾಗದ್ವೇಷಾದಿಗಳಿಗೂ ಕಾಮಮೋಹಾದಿ ಗಳಿಗೂ ಒಳಗಾಗಿ ನರಳುವುದು ತಪ್ಪಿಲ್ಲ. ಆದರೂ ಈ ಬಗೆಯ ಭಾವನಾ ಶಕ್ತತೆಯಿಂದಲೇ ಅವನು ಪರಕೀಯರಂತೆ ಲೌಕಿಕ ವಿಚಾರಗಳಲ್ಲಿ ಹಟಮಾ ರಿತನದಿಂದ ಮುಂದರಿಸಲಾರನು. ಒಂದುವೇಳೆ ಕಾಲವಿಶೇಷದಿಂದ ಪ್ರೇರಿ ತನಾಗಿ ಅತಿಶಯ ಉತ್ಸಾಹ ಸಾಹಸಾದಿಗಳಿಂದ ಹೊರಡುವನಾದರೂ, ಉತ್ತರಕ್ಷಣದಲ್ಲೇ- "ಅಯ್ಯೋ, ಎಷ್ಟುಮಾಡಿ ಏನು ಹೊತ್ತುಕೊಂಡು ಹೋಗಲಿಕ್ಕಾಗಿ ? ಎಂದಿದ್ದರೊಂದುದಿನ ಈ ಎಲ್ಲವನ್ನೂಬಿಟ್ಟು ಹೊರಡ ಲೇಬೇಕಾಗಿರುವ ನಾನು, ಈ ಕ್ಷಣಿಕ ಸುಖಕ್ಕಾಗಿ ಏಕಿಷ್ಟು ಶ್ರಮಿಸಬೇಕು. ಏಕೆ ಅವನಿವನಿಗೆ ವಿರೋಧಿಯಾಗಬೇಕು-ದ್ರೋಹಿಯಾಗಬೇಕು ? ಅಥವ ನಾಲ್ಕು ಕಾಸಿಗಾಗಿ ಏಕೆ ವೃಥಾ ಕಾರ್ಪಣ್ಯಪಟ್ಟು ಸಾಯಬೇಕು?" ಎಂದು ನುಡಿದು ನಿರ್ವಿಣ್ಣನಾಗಿ ಕುಳಿತುಬಿಡುವನು. ಈ ಭಾವನೆಯೇ ಅವನನ್ನು ಲೌಕಿಕವಾದ ಸಮಸ್ತ ಸ್ಥಿತಿಗತಿಗಳಲ್ಲೂ ಹಿಂದೆಹಾಕುತ್ತಿರುವುದು. ಈ ಭಾವನೆಯೇ ಅವನನ್ನು ಯಾವುದೊಂದು ಕಾರ್ಯಸಾಧನೆಗಾಗಿ ಪ್ರಾಣವ ನ್ನಾದರೂ ಕೊಟ್ಟು ಶ್ರಮಿಸದಂತೆ ತಡೆಗಟ್ಟುತ್ತಿರುವುದು, ಮತ್ತು ಈ ಭಾವನೆಯೇ ಅವನ ಧೈರ್ಯ ಉತ್ಸಾಹ ಸಾಹಸ ಆತ್ಮಾವಲಂಬನೆ ಮುಂ ತಾದುವುಗಳಿಗೆ ಬೆಂಬಲಕೊಡಲು ಅಶಕ್ತವಾದುದಾಗಿ, ಅವನನ್ನು ಪ್ರಕೃತ ಪ್ರಪಂಚಕ್ಕೆ ಅನುಪಯೋಗ ಜೀವಿಯೆನ್ನಿಸುತ್ತಿರುವುದು.

ಭಾರತೀಯರ ಈ ಭಾವನೆಯು ಯುಕ್ತವೇ ಅಥವ ಅಯುಕ್ತವೆ ಎಂ ಬುದನ್ನು ಕುರಿತು ಈಗ ಯೋಚಿಸೋಣ ! ಆದಿಕಾಲದಿಂದಲೂ ಭಾರತೀ ಯರು ಧರ್ಮ ಪರಲೋಕ ಪಾಪಪುಣ್ಯಾದಿಗಳು ಮುಂತಾದುವುಗಳಲ್ಲಿ ಇದೇ ಭಾವನೆಯನ್ನೇ ಉಂಟಾಗಿದ್ದರೂ, ಅವರು ಹೇಡಿಗಳೆನಿಸದಿದ್ದುದಕ್ಕೂ ಆದರೆ ಈ ಭಾವನೆಯನ್ನು ಉಂಟಾಗಿರುವ ಸಾಂಪ್ರತಕಾಲದ ಭಾರತೀಯ ರು ಮಾತ್ರ ಅಧೋಗತಿಗೆ ಇಳಿದಿರುವುದಕ್ಕೂ ಕಾರಣವಿಲ್ಲದೆ ಇಲ್ಲ. ಪೂರ್ವ ದವರು ಮೇಲ್ಕಂಡ ಆಧ್ಯಾತ್ಮವಿಚಾರಗಳ ನಿಶ್ಚಯಸ್ವರೂಪವನ್ನು ತಿಳಿದಿದ್ದ

ರು. ಅವರು ಮೇಲ್ಕಂಡ ಆಧ್ಯಾತ್ಮಪ್ರಶ್ನೆಗಳನ್ನು ಕುರಿತು ಈಗಿನವರಂತೆ ಕೇವಲ ಚರ್ಚೆನಡೆಸುವಿಕೆಯೇ ಧರ್ಮಾಚರಣೆಯೆಂದು ತಿಳಿದುಕೊಂಡಿರಲಿಲ್ಲ. ಅವುಗಳಂತೆ ನಡೆವಳಿಕೆಯನ್ನಿಟ್ಟುಕೊಳ್ಳುವುದು ಕರ್ತವ್ಯವೆಂದು ತಿಳಿದು ಆರೀತಿ ನಡೆಯುತ್ತಿದ್ದರು. ಪರಲೋಕ ಜೀವಿತವು ಇಹಜೀವಿತಕ್ಕಿಂತಲೂ, ಶಾಶ್ವತವಾದುದೂ ನಿಶ್ಚಯವಾದುದೂ ಎಂದು ತಿಳಿದು ಅದರಲ್ಲಿ ನಂಬಿಕೆಯನ್ನಿಟ್ಟುಕೊಂಡಿದ್ದರು. ತಮ್ಮ ಪರಲೋಕ ಜೀವಿತದ ಉತ್ತಮಸ್ಥಿತಿಯಾಗಲೀ ಅಥವ ಅಧಮಸ್ಥಿತಿಯಾಗಲೀ ಇಹಲೋಕದಲ್ಲಿ ತಾವು ನಡೆಯಿಸುವ ನಿತ್ಯಜೀವಿತವನ್ನು ಅನುಸರಿಸುವುದೆಂಬ ದೃಢನಂಬಿಕೆಯು ಅವರಿಗೆ ಇದ್ದುದರಿಂದ ಇಹಲೋಕ ಜೀವಿತವನ್ನು ಸತ್ಯ ಧರ್ಮ ನ್ಯಾಯ ಪರೋಪಕಾರ ಮುಂತಾದುವುಗಳ ಆಚರಣೆಯಿಂದ ಉಪಯುಕ್ತವಾದುದನ್ನಾಗಿ ಮಾಡಿಕೊಳ್ಳುತ್ತಿದ್ದರು. ಲೌಕಿಕಜೀವಿತವು ಇದೊಂದು ಜನ್ಮದಿಂದಲೇ ಕೊನೆಯಾಗುವುದಿಲ್ಲವೆಂಬ ಸ್ಥಿರಭಾವನೆಯೂ, ಮರಣದೊಂದಿಗೇ ಸಮಸ್ತವೂ ಮುಕ್ತವಾಗುವುದಿಲ್ಲವೆಂಬ ನಂಬಿಕೆಯೂ ಅವರಿಗಿದ್ದುದರಿಂದ-ಅವರು ಯಾರನ್ನಾದರೂ ದೋಚಿಕೊಂಡು, ಯಾವನನ್ನಾದರೂ ಮುಳುಗಿಸಿ ಎರಡು ದಿನ ಸುಖಪಡಬೇಕೆಂದಾಗಲೀ ಅದೇ ಜೀವಿತದ ಪರಮಾವಧಿ ಸಾಧನೆಯೆಂದಾಗಲೀ ಭಾವಿಸುತ್ತಿರಲಿಲ್ಲ. ಜೀವನು ಅನಾದಿಯು ಅನಂತನು ಅವಿನಾಶಿಯು ಎಂಬ ನಿಶ್ಚಯಭಾವವು ಅವರಿಗಿದ್ದುದರಿಂದ ತಾವು ಕೈಕೊಳ್ಳುವ ಒಂದಾನೊಂದು ಸತ್ಕಾರ್ಯದ ಸಾಧನೆಯಾಗಲಿ, ಅಥವ ಅದರ ಭಂಗವಾಗಲಿ ಜೀವನ ಬೆಳೆವಣಿಗೆಯ ವೃದ್ಧಿ ಅಥವ ಹಾನಿಗೆ ಸಂಬಂಧಿಸುವುದೆಂದು ತಿಳಿದು, ಆದರಿಂದ ಪ್ರಾಪ್ತವಾಗಬಹುದಾದ ಲಾಭನಷ್ಟಗಳನ್ನೂ ಕಷ್ಟಕಾರ್ಪಣ್ಯಗಳನ್ನೂ ಲಕ್ಷ್ಯಮಾಡದೆ ಮುಂದರಿಸುತ್ತಿದ್ದರು. ಅವರಿಗೆ ಜನ್ಮಾಂತರದಲ್ಲಿದ್ದ ನಂಬಿಕೆಯು- ಒಂದುಬಾರಿ ಪ್ರಾರಂಭಿಸಿದ ಒಂದಾನೊಂದು ಸತ್ಕಾರ್ಯಕ್ಕೆ ಅಕಸ್ಮಾತ್ ವಿಘ್ನವುಂಟಾದರೆ ಅದನ್ನು ಒಂದಲ್ಲ-ಹತ್ತು ಜನ್ಮಗಳನ್ನಾದರೂ ಎತ್ತಿ ಸಾಧಿಸೇನೆಂಬ ಹುರುಪನ್ನು ಉಂಟುಮಾಡುತ್ತಿತ್ತಲ್ಲದೆ, ವಿಘ್ನಕ್ಕೆ ಹೆದರಿ ಜೋಲುಮುಖದಿಂದ ಕುಳಿತುಕೊಳ್ಳುವಂತಹ ನಿರುತ್ಸಾಹವನ್ನು ಹುಟ್ಟಿಸುತ್ತಿರಲಿಲ್ಲ. ಅವರಿಗೆ ಜಗದ್ರಕ್ಷಣಾಸೂತ್ರವು ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದ ಪರಮಾತ್ಮನ ಸ್ವಾಧೀನದಲ್ಲಿದೆ ಎಂಬ ವಿಶ

ಯದಲ್ಲಿ ಅಪನಂಬಿಕೆಯಿರಲಿಲ್ಲ. ಆದುದರಿಂದ ಅವರು, ತಮ್ಮ ಸಮಸ್ತ ಲೌಕಿಕವಿಚಾರಗಳಲ್ಲೂ ಲೋಕಸಂಗ್ರಹಣದೃಷ್ಟಿಯಿಂದ ಆ ಪರಮಾತ್ಮನ ಸೇವೆಯೆಂದು ತಿಳಿದು ಪ್ರವೇಶಿಸುತ್ತಿದ್ದರಲ್ಲದೆ, ಲಾಭೋದ್ದೇಶದಿಂದ ಯಾವ ಕಾರ್ಯವನ್ನೂ ಕೈಕೊಳ್ಳುತ್ತಿರಲಿಲ್ಲ—ಸಾಂಪ್ರತಕಾಲದವರೂ, ತಮ್ಮ ಭಾವನೆಯನ್ನು ಮೇಲ್ಕಂಡಂತೆ ಪರಿಶುದ್ಧಗೊಳಿಸಿಕೊಳ್ಳುವರಾದರೆ, ಅಂಥ ಪರಂಪರೆಯ ಮಾಯಾಕವಚವನ್ನು ಕಿತ್ತೊಗೆದು ದೃಷ್ಟಿಯನ್ನು ವಿಸ್ತಾರಗೊಳಿಸಿಕೊಂಡು ವಿಷಯವಿಮರ್ಶೆ ಮಾಡತೊಡಗುವರಾದರೆ, ಒಣಚರ್ಚೆಯಲ್ಲ—ಧಾರ್ಮಿಕಾಚರಣೆಯೇ ಕರ್ತವ್ಯವೆಂದು ನಂಬುವರಾದರೆ, ಈಗ ಯಾವಭಾವನೆಗೆ ದಾಸರಾಗಿ ಅಧೋಗತಿಗೆ ಇಳಿಯುತ್ತಿದ್ದಾರೋ, ಅದೇ ಭಾವನೆಯಿಂದಲೇ ಅತ್ಯುಚ್ಚ ಶಿಖರವನ್ನೇರಿ ತೇಜಃಪುಂಜರಾಗಿ ಮೆರೆಯಬಹುದು.

ಪ್ರಪಂಚವು ಕೇವಲ ಭಾವನಾಮಯವಾದುದು. ಪ್ರಪಂಚದಲ್ಲಿ ದಯಾಮಯನಾದ ಸರ್ವೇಶ್ವರನು ಪ್ರಾಣಿಗಳಿಗೆ ಸುಖಪ್ರದಗಳಾದ ಅನಂತ ಸಾಮಗ್ರಿಗಳನ್ನು ಸಿದ್ಧಗೊಳಿಸಿಟ್ಟಿರುವನು. ಇವು ಸರ್ವಕಾಲದಲ್ಲೂ ಸಮೃದ್ಧವಾಗಿರುವುವು. ಆದರೆ, ರೋಗಿಯು ತನ್ನ ಎಡೆಯಲ್ಲಿ ರುಚಿ ರುಚಿಯಾದಪದಾರ್ಥಗಳು ತುಂಬಿದ್ದರೂ, ತನ್ನ ನಾಲಿಗೆಯೇ ಅರುಚಿಯಾಗಿರುವುದರಿಂದ ಹೇಗೆ ಯಾವುದನ್ನೂ ಅಪೇಕ್ಷಿಸದೆ ಅಸಹ್ಯಪಡುವನೋ, ಹಾಗೆಯೇ ಪ್ರಪಂಚದಲ್ಲಿ ತುಂಬಿರುವ ಪ್ರೇಮಸ್ವರೂಪೀ ಪರಮಾತ್ಮನ ಸೃಷ್ಟಿ ರಚನೆಯನ್ನು ನೋಡಿ ಆನಂದಿಸಲು, ಸಹಕರಿಸಲು, ಧರ್ಮಾರ್ಥಕಾಮಮೋಕ್ಷಗಳನ್ನು ಸಾಧಿಸಿಕೊಳ್ಳಲು, ಮನಸ್ಸೇ—ಭಾವನೆಯೇ ಸ್ವಸ್ಥತೆಯಲ್ಲಿಲ್ಲದೆ ರೋಗಗ್ರಸ್ತವಾಗಿದ್ದರೆ, ಎಷ್ಟಿದ್ದು ಏನುಸಾರ್ಥಕಕ್ಕಾಗಿ! ಇಂದು ಜನಮನವು ಅಂತಾಗಿದೆ. ಆದರೆ ಇದಕ್ಕಾಗಿ ಯಾರೂ ಹತಾಶರಾಗಬೇಕಾದ್ದಿಲ್ಲ! ಜಗತ್ತಿನಲ್ಲಿ ಜನಸಮೂಹದ ಭಾವನೆಯು ಮೇಲೆ ಮೇಲೆ ವ್ಯತ್ಯಾಸವಾಗುತ್ತಿರುವುದೂ ಮ್ಲಾನವಾಗುತ್ತಿರುವುವೂ ಸ್ವಾಭಾವಿಕವು! ಹಾಗೆ ಭಾವನೆಯು ಮ್ಲಾನವಾದಕಾಲದಲ್ಲಿ ಜನಸಮೂಹವು ಕರ್ತವ್ಯತಾಜ್ಞಾನ ವಿಹೀನವಾಗುವುದು ಯಾವ ಮಾರ್ಗವನ್ನನುಸರಿಸಿ ನಡೆಯಬೇಕೆಂಬುದು ತೋರದೆ ತಲ್ಲಣಗೊಳ್ಳುವುದು. ಅಂತಹ ವೇಳೆಯಲ್ಲಿ ಜನತೆಯ ಮನಸ್ಸಿನಮೇಲೆ, ಮುಸುಕಿದ ಆ ಭ್ರಾಂತಿಯನ್ನು ನಿವಾರಿಸಿ, ಕರ್ತವ್ಯತಾಜ್ಞಾನವನ್ನು ಉಂಟುಮಾಡಲು

ಒಬ್ಬೊಬ್ಬ ಮಹಾತ್ಮರು ಉದಯಿಸುವರು. ಪ್ರಕೃತ ನಮ್ಮ ಕಥಾನಾಯಕರೂ ಹಾಗೆಯೇ ಹಿಂದೂ ಮಹಮ್ಮದೀಯರ ಧರ್ಮಸಂಘರ್ಷಣದ ಸಂಧಿಕಾಲದಲ್ಲಿ ಉದಯಿಸಿ, ಉಭಯ ಧರ್ಮಗಳ ರಹಸ್ಯಗಳನ್ನೂ ತಿಳಿಸಿ, ಪರಸ್ಪರರಲ್ಲಿ ಸಹಾನುಭೂತಿಯನ್ನುಂಟುಮಾಡಲುಪಕ್ರಮಿಸಿದ ಮಹಾಪುರುಷರು. ಇವರ ಈ ಪವಿತ್ರ ಚರಿತ್ರೆಯೂ ಕರ್ಣಾಟಕ ವಾಚಕಮಹಾಶಯರಿಗೆ ಮನೋಲ್ಲಾಸವನ್ನುಂಟುಮಾಡಲಿ !

ಕ್ರಿ. ಶ. ಹದಿನೈದನೆಯ ಶತಮಾನದ ಪ್ರಾರಂಭದಲ್ಲಿ ಹಿಂದೂಸ್ಥಾನದ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಕಾಶೀಪಟ್ಟಣದಲ್ಲಿ ನೂರ್ಅಲ್ಲಿ ಎಂಬೊಬ್ಬ ಮಹಮದೀಯನು, ತನ್ನ ಹೆಂಡತಿಯಾದ ನೀಮಾಬೀ ಎಂಬಾಕೆಯೊಂದಿಗೆ ವಾಸಿಸುತ್ತಿದ್ದನು. ಗಂಡಹೆಂಡಿರಿಬ್ಬರೂ ಕೇವಲ ಅನ್ಯೋನ್ಯತೆಯಿಂದ ತಮ್ಮ ಕುಲ ಕಸಬಾದ ನೇಯ್ಗೆಯಿಂದ ಕಾಸುವೀಸಗಳನ್ನು ಗಳಿಸಿಕೊಂಡು, ಯಾರೊಬ್ಬರ ತಂಟೆಗೂ ಹೋಗದೆ, ತಮಗೆ ತಿಳಿದಿದ್ದ ಮಟ್ಟಿಗೆ ದೇವರನ್ನು ಕುರಿತು ಧ್ಯಾನಿಸುತ್ತ, ದೇಹಿ ಎಂದವರಿಗೆ ನಾಸ್ತಿ ಎನ್ನದೆ, ಕೈಯಲ್ಲಾದಷ್ಟು ಧರ್ಮ ಮಾಡುತ್ತ, ಅಂಗಹೀನ ಅಶಕ್ತರನ್ನು ಕಂಡರೆ ಮರುಗಿ ಸಹಾಯಕರಾಗುತ್ತ, ಹೀಗೆ ಉತ್ತಮರೆನ್ನಿಸಿಕೊಂಡು, ಕಾಲಯಾಪನೆ ಮಾಡುತ್ತಿದ್ದರು. ನೂರ್ಅಲ್ಲಿ ನೀಮಾಬೀ ಇವರು ಬಡವರೇಆದರೂ-ನಿತ್ಯವೂ ತಮ್ಮ ಕೈಕೆಲಸದಿಂದ ಅಲ್ಪಸ್ವಲ್ಪವನ್ನು ಗಳಿಸಿ ಅಷ್ಟರಲ್ಲೇ ಜೀವನಮಾಡತಕ್ಕವರೇ ಆದರೂ-ಅವರು ತೃಪ್ತರೂ ಶಾಂತರೂ ಆಗಿದ್ದರು. ಅವರ ತೃಪ್ತಿಯೇ ಅವರಿಗೆ ಮಹತ್ಸಂತೋಷಪ್ರದವಾಗಿದ್ದಿತು. ಆ ತೃಪ್ತಿಭಾಗ್ಯವನ್ನು ಅಕ್ಷಯವಾಗಿ ಗಳಿಸಿದ್ದ ಆ ದಂಪತಿಗಳು, ತಮ್ಮ ಆ ಚಿಕ್ಕ ಗುಡಿಸಿಲಿನಲ್ಲೇ ಶ್ರೀಮಂತರಿಗೂ ಆಗೋಚರವೆಂಬಂತಹ ಅಖಂಡ ಸುಖವನ್ನು ಅನುಭವಮಾಡುತ್ತಿದ್ದರು. ಆ ಇಬ್ಬರಲ್ಲೂ, ನೂರಲ್ಲಿಯುಮಾತ್ರ ಪ್ರಪಂಚ ಸ್ವಾಭಾವಿಕವಾದ ಸುಖದುಃಖ ಉಬ್ಬರವಿಳಿತಗಳನ್ನು ತಿಳಿದವನಾಗಿ ತೃಪ್ತಿಶಾಂತತೆಗಳಿಂದ ಇದ್ದನಾದರೂ, ನೀಮಾಬೀಗೆಮಾತ್ರ ಬಹುದಿನಗಳಾದರೂ ತನಗೊಂದು ಮಗುವಾಗಲಿಲ್ಲವಲ್ಲಾ-ಮಗುವಿನ ಆಟಪಾಟಗಳನ್ನೂ ಮುದ್ದುಮಾತುಗಳನ್ನೂ ನೋಡಿ-ಕೇಳಿ ಹರ್ಷಿಸುವ ಭಾಗ್ಯವಿಲ್ಲವಲ್ಲಾ ಎಂದು ಸದಾ ಚಿಂತಿಸುತ್ತಿದ್ದಳು. ಮಕ್ಕಳಿಲ್ಲದೆ ಇಂತು ಚಿಂತಾಕ್ರಾಂತರಾಗಿದ್ದ ಆ ದಂಪತಿಗಳಿಗೆ ಪುತ್ರಲಾಭ

ವಾದ ವಿಷಯದಲ್ಲಿ ಒಂದು ವಿಚಿತ್ರವಾದ ಕಥೆಯಿದೆ. ಅದನ್ನು ಆಧುನಿಕ ದೃಷ್ಟಿಯಿಂದ ನಂಬಲು ಸಾಧ್ಯವಿಲ್ಲವಾದರೂ, ಭಕ್ತಿವಿಜಯಕಾರರು, ಕಬೀರದಾಸರನ್ನು ಶುಕಬ್ರಹ್ಮರ್ಷಿಗಳ ಅವತಾರಮೂರ್ತಿಯೆಂದು ಒಕ್ಕಣಿಸಿ-ದಾಸರು ಭೂಮಿಯಲ್ಲಿ ಅಯೋನಿಜರಾಗಿಯೇ ಜನ್ಮಿಸಿದರೆಂದು ಹೇಳಿದ್ದಾರೆ. ಅವರ ಜನ್ಮವಿಚಾರದಲ್ಲಿ ಇತರ ಯಾವ ಆಧಾರವೂ ದೊರೆಯುತ್ತಿಲ್ಲವಾದುದರಿಂದ ಆ ಕಥೆಯನ್ನೇ ಯಥಾಸ್ಥಿತವಾಗಿ ಇಲ್ಲಿ ಕೊಡುತ್ತೇವೆ.

ಒಂದು ದಿನ ನೂರ್‌ಅಲ್ಲಿಯು ಎಂದಿನಂತೆ ರೇಷ್ಮೆಯದಾರದ ಲಡಿಯನ್ನು ತೊಳೆಯುವುದಕ್ಕಾಗಿ 'ಲಾಹರತಲಾವ್' ಎಂಬೊಂದು ಕೆರೆಯ ಒಳಿಗೆ ಹೋಗಿ, ಅಲ್ಲಿ ನೀರಿನಲ್ಲಿಳಿದು ದಾರದ ಲಡಿಯನ್ನು ಜಾಲಾಡುತ್ತಿದ್ದನು ಆಗ ಸಮೀಪದಲ್ಲಿ ಮತ್ತಾರೂ ಇರಲಿಲ್ಲ. ನೂರ್‌ಅಲ್ಲಿಯು ತನ್ನ ಕೆಲಸದಲ್ಲಿ ತೊಡಗಿ ತನ್ಮಯನಾಗಿರುವಲ್ಲಿ-ಅಕಸ್ಮಾತ್ತಾಗಿ-'ರಾಮ ರಾಮ' ಎಂಬ ಶಬ್ದಗಳು ಅವನ ಕಿವಿಗೆ ಬಿದ್ದುವು. ಮಹಮ್ಮದೀಯನಾದ ಅವನು, ಅದನ್ನು ಕೇಳಿ ಚಕಿತನಾಗಿ, ಸಮೀಪದಲ್ಲಿ ಯಾರೂ ಇಲ್ಲದಿದ್ದುದರಿಂದ ಆ ಶಬ್ದವು ಎಲ್ಲಿಂದ ಬಂತೆಂದು ತಿಳಿಯಲಾರದೆ, ಆಶ್ಚರ್ಯದಿಂದ ಸುತ್ತಲೂ ನೋಡಿಕೊಂಡನು. ಆಗ ಅವನ ಕಣ್ಣಿಗೆ, ಪಕ್ಕದಲ್ಲೇ * ದಂಡೆಯಮೇಲೆ ತಾವರೆಯ ಎಲೆ-ಕಲ್ಹಾರಪುಷ್ಪಗಳ ಹಾಸಿಗೆಯಲ್ಲಿ ಮಲಗಿ- ಉದಯಿಸುತ್ತಿದ್ದ ಸೂರ್ಯನ ಕಿರಣಗಳ ಪ್ರಕಾಶದಿಂದ ಆಹ್ಲಾದಗೊಂಡು ಕಳಕಳನೆ ನಗುತ್ತಿದ್ದ ಪುರುಷಶಿಶುವೊಂದು ಕಾಣಿಸಿತು. ನೂರ್‌ಅಲ್ಲಿಯು ಪರಮಾಶ್ಚರ್ಯಯುಕ್ತನಾಗಿ ತನ್ನ ಕಣ್ಣುಗಳನ್ನೇ ನಂಬಲಾರದೆ, ಕೈಲಿದ್ದ ರೇಷ್ಮೆದಾರದ ಲಡಿಯನ್ನು ಹಾಗೇ ನೀರಲ್ಲೇ ಬಿಟ್ಟು, ಶೀಘ್ರವಾಗಿ ದಡಕ್ಕೆ ಬಂದು ನೋಡಿದನು. ಕಪ್ಪನೆಯ ಮುಂಗುರುಳುಗಳ, ನೀಲವರ್ಣದ ಸ್ವಚ್ಛನೇತ್ರಗಳ, ತುಂಬುಗಲ್ಲಗಳ, ದುಂಡುದುಂಡಾದ ಮೈ ಕೈ ಕಾಲುಗಳಿಂದ ಪುಷ್ಟವಾದ-ಸುಂದರವಾದ ಶಿಶುವು ಅಲ್ಲಿ ಏಕಾಂಗಿಯಾಗಿ ಹೂಗಳ ಹಾಸಿಗೆಯ ಮೇಲೆ ಮಲಗಿದೆ! ನೂರ್‌ಅಲ್ಲಿಯು ಅಕಸ್ಮಾತ್ತಾಗಿ ಒದಗಿದ ಆ ಪರಿಯಿಂದ ಶುದ್ಧ ಅವಾಕ್ಕಾಗಿ, ಸುತ್ತುಮುತ್ತಲೂ ನೋಡಿ ಯಾರನ್ನೂ ಕಾಣದಿರಲು, ಸಂತತಿವಿಹೀನ

* ಶಿಶುವು ನೀರಿನಮೇಲೆ ದೊಡ್ಡದೊಂದು ಶಂಖದ ಚಿಪ್ಪಿನಲ್ಲಿ ತೇಲುತ್ತಿದ್ದಿತೆಂದೂ ಒಂದು ಹೇಳಿಕೆಯುಂಟು.

ಸಾದ ತನಗೆ ಭಗವಂತನೇ ಆ ಪುತ್ರರತ್ನವನ್ನು ಕರುಣಿಸಿದನೆಂದು ಪರಮಾ ನಂದದಿಂದ, ಆ ಕಂದನನ್ನೆತ್ತಿ ಎದೆಗಪ್ಪಿಕೊಂಡು, ದೊಡ್ಡ ಹೆಜ್ಜೆಗಳನ್ನಿ ಡುತ್ತಾ ಬಹು ಶೀಘ್ರವಾಗಿ ಮನೆಗೆ ಬಂದು, ತನ್ನ ಪತ್ನಿಯನ್ನು ಕರೆದು, ಆ ಶಿಶುವನ್ನು ಆಕೆಯ ಕೈಗಿತ್ತನು. ಸೀಮಾಬೀಗೆ ಸ್ವರ್ಗವೇ ಅಂಗೈಯೊ ಳಗೆ ಬಂದಷ್ಟು ಆನಂದವಾಯಿತೆಂದು ಹೇಳಬೇಕಾದುದೇನು! ಹರ್ಷೋದ್ರೇ ಕದಿಂದ ಅವಳ ಕಣ್ಣುಗಳಲ್ಲಿ ಅವಿರಳ ಅಶ್ರುವರ್ಷವು ಸುರಿಯಲಾರಂಭಿಸಿತು. ಶಿಶುವಿನ ದೇಹಸ್ಪರ್ಶದಿಂದ ಮೈ ರೋಮಾಂಚವಾಯಿತು. ಆನಂದದ ಪರ ಮಾವಧಿಸ್ಥಿತಿಯಲ್ಲಿ ಪ್ರೇಮಪೂರ್ಣಹೃದಯದಿಂದ ಸೀಮಾಬೀಯು ಆ ಮಗು ವನ್ನು ಎದೆಗಪ್ಪಿಕೊಂಡಳು ಆಶ್ಚರ್ಯವಾಶ್ಚರ್ಯವು! ಪ್ರೇಮದ ಅದ್ಭುತ ಮಹಿಮೆಯನ್ನು ವರ್ಣಿಸಲಶಕ್ಯವು! ಮಗುವನ್ನು ಎದೆಗಪ್ಪಿಕೊಂಡೊಡ ನೆಯೇ, ಹುಟ್ಟುಬಂಜೆಯಾದ ಅವಳ ಸ್ತನಗಳಲ್ಲಿ ಕ್ಷೀರವು ಉಕ್ಕಿ ಬಂದಿತು. ಮಗುವಿಗೆ ಸ್ತನ್ಯಪಾನಮಾಡಿಸಿದಳು. ಆ ದೀನದಂಪತಿಗಳು ಭಗವನ್ಮಹಿ ಮೆಗೆ ಪರಮಾಶ್ಚರ್ಯಪಟ್ಟರು. ತಮ್ಮ ದೀನವಾಣಿಯನ್ನು ಲಾಲಿಸಿ, ಲೋ ಕಪಿತನು, ತಮಗೆ ಆ ಕಂದನನ್ನೇ ಸಂತತಿಯನ್ನಾಗಿ ಕರುಣಿಸಿದನೆಂದುಕೊಂ ಡರು ಪುನಃಪುನಃ ಆ ಮಗುವಿನ ಮುದ್ದುಮುಖವನ್ನು ನೋಡಿ ಆನಂದ ಗೊಳ್ಳುವರು. ಮುತ್ತಿಕ್ಕುವರು, ಅಪ್ಪಿಕೊಳ್ಳುವರು.

ಭಕ್ತಿಯುಕ್ತಮನಸ್ಥಿತಿಯ ಜನರು, ಭಗವತ್ಸಂಬಂಧವಾದ ಈ ಬಗೆಯ ಕಥೆಗಳು ಎಷ್ಟು ಅಗಾಧವೆನಿಸುವಂತಿದ್ದರೂ ಅವುಗಳ ಕಾರ್ಯಕಾರಣಗಳನ್ನು ಕುರಿತು ಪ್ರಶ್ನಿಸದೆ—'ಎಲ್ಲಾ ಭಗವನ್ಮಹಿಮೆ, ಎಲ್ಲಾ ಜಗವಲ್ಲೀಲೆ, ಸರ್ವಶ ಕ್ತನಾದ ಭಗವಂತನು, ಅಸಂಭವವೆಂಬಂತಿಹ ಸಂಗತಿಗಳೂ ಸಂಭವಿಸು ವಂತೆಮಾಡಲು ಶಕ್ತನು' ಎಂದು ನುಡಿದು ಸಂತುಷ್ಟರಾಗಿರುವರು. ಇದರ ಪ್ರಪಂಚವೆಲ್ಲವೂ ಆ ಬಗೆಯ ಮನೋಭಾವನೆಯಿಂದಲೇ ಇಲ್ಲವಷ್ಟು! ಅಂಥ ವರು, ಪ್ರಕೃತಿವಿರುದ್ಧವೆಂದು ತೋರುವ ಈಬಗೆಯ ಕೆಲವಿಚಾರಗಳನ್ನು ಒಪ್ಪಲಾರರು. ಅಂಥವರಲ್ಲಿ ಕೆಲವರು, ನೂರ್‌ಅಲ್ಲಿಗೆ ಆ ಶಿಶುವು ದೊರೆತ ಸಂದರ್ಭವನ್ನು ಕುರಿತು--'ಕಾಶೀನಗರದ ಒಬ್ಬ ಬ್ರಾಹ್ಮಣ ವಿಧವೆಯು ತಾನು ರಹಸ್ಯದಲ್ಲಿ ಹೆತ್ತ ಮಗುವನ್ನು, ಲೋಕಾಪವಾದಕ್ಕೆ ಹೆದರಿ, ಆ ಕೆರ ಯ ಬಳಿ ಮಲಗಿಸಿಹೋಗಿರಬಹುದೆಂದೂ, ಅದು ಕಾಲಕರ್ಮ ಸಂಯೋಗ

ದಿಂದ, ಅವನಿಗೆ ದೊರೆತಿರಬಹುದೆಂ' ದೂ ಊಹಿಸುತ್ತಾರೆ. ಎಂತೂ ಮೋಲ್ಕಂಡಂತೆ ಕೆರೆಯ ಬಳಿ ಅನಾಥನಾಗಿ ಪುಷ್ಪಶಯ್ಯೆಯಲ್ಲಿ ಮಲಗಿದ್ದ ಆ ಕಂದನು, ಇಂತು ಸನಾಥನಾಗಿ ತೊಟ್ಟಿಲಲ್ಲಿ ಮಲಗಿ ನಿದ್ರಿಸುವಂತಾದನು.

**ಅಧ್ಯಾಯ ೨. 'ಶಾಲು—ಸಂತೆ.'**

ಇಂದು ನೂರ್‌ಅಲ್ಲಿಯ ಆ ಬಡಗುಡಿಸಿಲಿನಲ್ಲಿ ಪರಮಸಂಭ್ರಮ! ಆ ಚಿಕ್ಕ ಮಗುವಿಗೆ ಅವಶ್ಯಕವಾದ ಅಲ್ಪ ಸ್ವಲ್ಪ ಅನುಕೂಲತೆಗಳನ್ನು ಒದಗಿಸಲಿಕ್ಕಾಗಿ ಅತನು ಬಹು ಆತುರದಿಂದ ಹೊರಗೆ ಒಳಗೆ ಓಡಾಡುತ್ತಿದ್ದಾನೆ. ತೊಟ್ಟಿಲನ್ನು ಸಿದ್ಧಗೊಳಿಸಿ ಮಗುವನ್ನು ಆದರಲ್ಲಿ ಮಲಗಿಸಿದ್ದಾದಮೇಲೆ ನೂರ್‌ಅಲ್ಲಿಯು ಒಬ್ಬ ಖಾಜೀಯನ್ನು ಕರೆತಂದು ಮಗುವನ್ನು ತೋರಿಸಿ, ಅದನ್ನು ಯಾವ ಹೆಸರಿನಿಂದ ಕರೆಯಬೇಕೆಂಬ ಬಗ್ಗೆ ಖುರಾನನ್ನು ನೋಡಬೇಕೆಂದು ಪ್ರಾರ್ಥಿಸಿದನು. ಪ್ರಶ್ನೆಯನ್ನು ನೋಡಿದ್ದಾಯಿತು. ಖುರಾನುಗ್ರಂಥವನ್ನು ತೆರೆದೊಡನೆಯೇ ಖಾಜಿಯ ದೃಷ್ಟಿಗೆ 'ಕಬೀರ್' ಎಂಬೊಂದು ಪದವು ಗೋಚರವಾಯಿತು. ಆ ಪದಕ್ಕೆ 'ದೊಡ್ಡವ-ಘನವಂತ' ಎಂದು ಅರ್ಥವಿದ್ದು, ಆಬಗೆಯ ಪರಿಸ್ಥಿತಿಯಲ್ಲಿ ದೊರೆತ ಮಗುವಿಗೆ ಇಟ್ಟು ಕರೆಯಲು, ಆ ಪದವು ಸಮಂಜಸವಾದುದೆಂದು ಅವರಿಗೆ ತೋರಿತು. ಅದರಂತೆಯೇ ಆ ಮಗುವನ್ನು **ಕಬೀರ್** ಎಂದು ಕರೆದರು. ಮಗುವು ಆ ದಂಪತಿಗಳ ಪ್ರೇಮಾದರಗಳಿಗೆ ಪಾತ್ರವಾಗಿ ದಿನದಿನಕ್ಕೆ ಅಭಿವೃದ್ಧಿಯಾಗುತ್ತಾ ಬಂದಿತು.

ಕಬೀರನ ಬಾಲ್ಯ ವಿಷಯದಲ್ಲಿ ಎಲ್ಲೂ ಉಲ್ಲೇಖ ದೊರೆಯುವುದಿಲ್ಲ. ಆದರೂ- "ತನ್ನ ವಯಸ್ಸಿನ ಇತರ ಹುಡುಗರೆಲ್ಲರೂ ಬಗೆಬಗೆಯ ಆಟಪಾಟಗಳಲ್ಲಿ ತೊಡಗಿ ಹಾರಾಟ ಓಡಾಟ ನೆಗೆದಾಟಗಳಲ್ಲಿ ಮಗ್ನರಾಗಿದ್ದಾಗ್ಗೆ ಅವನು ಮಾತ್ರ ಮಂಕಾಗಿರುವಂತೆ ಒಂದೆಡೆ ಕುಳಿತು, ಮಹದಾಶ್ಚರ್ಯಕರವಾದ ಈ ಸೃಷ್ಟಿಯ ವಿಚಿತ್ರಗಳನ್ನು ಕುರಿತು ಯೋಚನಾಮಗ್ನನಾಗಿರುವನು. ಯೋಚಿಸಿದಂತೆಲ್ಲಾ ಸಂಗತಿಗಳು ಒಂದಕ್ಕೊಂದಕ್ಕೆ ಸಂಬಂಧಿಸಿಕೊಂಡು ನಡೆದು ಕೊನೆಗೆ ಅವನು ಅವುಗಳೆಲ್ಲಕ್ಕೂ ಮೂಲವಾವುದೆಂದು ಚಿಂತಿಸುವನು. ಸ್ವಾಭಾವಿಕವಾಗಿಯೇ ಭಕ್ತಿ ಯುಕ್ತ ಮನಸ್ಕನಾಗಿದ್ದ ಆ ಬಾಲಕನಿಗೆ ಭಗವಂತನೇ ಜಗದ ಸಮಸ್ತ ವಸ್ತುಗಳ ಸೃಷ್ಟಿಕರ್ತನೆಂದೂ ಸಂರಕ್ಷಕನೆಂದೂ

ಮನಸ್ಸಿಗೆ ಭಾಸವಾಗುವುದು. ಒಡನೆ 'ರಾಮ ರಾಮ ರಾಮ' ಎಂದು ನಾಮಭಜನೆಗೆ ತೊಡಸಿ, ಸ್ವಲ್ಪ ಹೊತ್ತು ಹಾಗೇ ನಾಮೋಚ್ಚಾರಣೆ ಮಾಡಿಕೊಳ್ಳುವುದರೊಳಗಾಗಿ ತನ್ಮಯನಾಗುವನು. ಬಾಹ್ಯಜ್ಞಾನವು ಲೋಪವಾಗುವುದು. ಎಷ್ಟೋ ಹೊತ್ತು ಹಾಗೆಯೇ ಇದ್ದುಬಿಡುವನು." ಎಂದು ಮುಂತಾಗಿ ಆತನ ಬಾಲ್ಯ ವಿಚಾರವು ಹೇಳಲ್ಪಟ್ಟಿದೆ.

ನೂರ್‌ಅಲ್ಲಿಯು ಹುಟ್ಟು ಮುಹಮ್ಮದೀಯನಾದುದರಿಂದ ತನ್ನ ಮಗನು, ಮುಹಮ್ಮದೀಯ ಧರ್ಮವನ್ನು ಅನುಸರಿಸಿದ ದೈವಸಂಬಂಧವಾದ ವಿಚಾರವನ್ನು ಗಮನಿಸದೆ, 'ರಾಮರಾಮ'ನೆಂದು ಹಿಂದೂದೇವರ ನಾಮೋಚ್ಚಾರ ಮಾಡುತ್ತಿದ್ದುದನ್ನು ಕಂಡು ಕೆಲವುವೇಳೆ ರೇಗುವನು. ಹಾಗೆ ತಂದೆಯು ಕೋಪಿಸಿಕೊಂಡಾಗ ಕಬೀರನು, ಮನೆಯನ್ನು ಬಿಟ್ಟು ಹೊರಟು ಎಲ್ಲಾದರೂ ಸಾಧುಸಂತರೂ, ಬೈರಾಗಿಗಳೂ ಇದ್ದ ಸ್ಥಳಗಳನ್ನು ಸೇರಿ ಅವರೊಂದಿಗೆ ತತ್ವವಿಚಾರದಲ್ಲಿ ತೊಡಗುವನು. ಭಗವಂತನ, ಆತನ ಲೀಲೆಗಳ, ಆಶ್ಚರ್ಯಕರವೂ, ರಹಸ್ಯಪೂರ್ಣವೂ ಆದ ಈ ಸೃಷ್ಟಿಯ, ವಿಚಾರದ ಹಲವು ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯುವನು. ಆ ಸಂಬಂಧ ಪ್ರಶ್ನೋತ್ತರಗಳಲ್ಲೂ ವಿಚಾರಗಳಲ್ಲೂ ಮಗ್ನನಾಗಿ ಬಿಟ್ಟನೆಂದರೆ, ಅವನಿಗೆ ಹಸಿವೆ ಬಾಯಾರಿಕೆಗಳ ಚಿಂತೆ ಸಹಾ ತೋರುತ್ತಿರಲಿಲ್ಲ. ಆದರೆ ಅತ್ತ ಮನೆಯಲ್ಲಿ ಮಗನನ್ನು ಕಾಣದೆ ತಲ್ಲಣಿಸುತ್ತಿದ್ದ ನೀಮಾಬೀಯ ಪ್ರಾರ್ಥನೆಯನ್ನೂ, ತಿಳಿಯದ ಬಾಲಕನನ್ನು ಕ್ಷಮಿಸಿ ಯೋಗ್ಯಮಾರ್ಗದಲ್ಲಿ ಬುದ್ಧಿಗಲಿಸಬೇಕಲ್ಲದೆ, ಹಾಗೆ ಕೋಪಿಸಿ ಗದರಿಸಿಕೊಳ್ಳಬಾರದೆಂಬ ಆಕೆಯ ಯುಕ್ತಿ ಯುಕ್ತ ಹೇಳಿಕೆಗಳನ್ನೂ ಕೇಳಿ, ಸಮಾಧಾನಗೊಂಡ ಆ ಬಡ ನೇಯ್ಗಾರನು ಅವನನ್ನು ಹುಡುಕಿಕೊಂಡು ಹೊರಟು, ಮನೆಗೆ ಕರೆತರುವನು.

ಹೀಗೆ ಕೆಲವು ದಿನಗಳು ಕಳೆಯುವ ವೇಳೆಗೆ ಕಬೀರನು ಹತ್ತು ಹನ್ನೆರಡು ವರ್ಷಗಳ ಹುಡುಗನಾದನು. ನೂರ್‌ಅಲ್ಲಿಯು ತನ್ನ ಕುಲಕಸಬಾದ ನೇಯ್ಗೆಯ ವೃತ್ತಿಯಲ್ಲಿ ತನ್ನಮಗನನ್ನು ಪ್ರವೀಣನನ್ನು ಮಾಡಬೇಕೆಂದು ಚಿಕ್ಕಂದಿನಿಂದಲೂ ಆ ಸಂಬಂಧ ಸಣ್ಣ ಪುಟ್ಟ ಕೆಲಸಗಳನ್ನು ಹೇಳಿಕೊಡುತ್ತ, ನೇಯ್ಗೆಯ ಮಗ್ಗದ ಮುಂದೆ ಕುಳ್ಳಿರಿಸಿ, ಲಾಳಿಯನ್ನು ಆಡಿಸುತ್ತ ನೇಯುತ್ತಿರುವಂತೆ ನಿಯಮಿಸುವನು. ನೇಯ್ಗೆಯು ಲಾಳಿಯು ಕ್ರಮವಾದ

ಕಾಲಪ್ರಮಾಣದಲ್ಲಿ ಆಡುತ್ತಿದ್ದುದು, ಅವನಿಗೆ ಭಜನೆಗೆ ತಕ್ಕ ತಾಳದಂತೆ ಅನುಕೂಲವಾಗಿ ಪರಿಣಮಿಸಿತು. ಕಬೀರನು—'ರಾಮ ರಾಮ ರಾಮ ಸೀತಾ ರಾಮ' ಎಂದು ಭಜನೆಮಾಡುತ್ತ-ಅದಕ್ಕೆ ಸರಿಯಾಗಿ ಲಾಳವನ್ನು ಸರಿಪಡಿಸಿಕೊಂಡು, ಆ ಆನಂದದಲ್ಲಿ ಮಗ್ನನಾಗಿ ಬಿಡುವನು. ಹಾಗೆಯೇ ಬಾಹ್ಯಪ್ರಜ್ಞೆಯು ತಪ್ಪಿ ಸಮಾಧಿಸ್ಥಿತಿಯು ಪ್ರಾಪ್ತಿಸಿ ಬಿಡುವುದು; ಬಹು ಹೊತ್ತಿನ ಮೇಲೆ ಎಚ್ಚತ್ತು, ಪ್ರಸನ್ನಚಿತ್ತದಿಂದ ಪುನಃ ಆ ಕೆಲಸದಲ್ಲಿ ತೊಡಗುವನು.

ಬಾಲಕನು ಭಗವದ್ವಿಚಾರದಲ್ಲಿ ಮಗ್ನನಾಗುವ ಈ ಸಂಗತಿಯೂ, ಸಮಾಧಿವಿಚಾರವೂ, ಭಗವದ್ಭಕ್ತಿಯು ಇಂತಹ ಪರಾಕಾಷ್ಟದೆಸೆಯಲ್ಲಿ ಭಕ್ತರ ಮನಸ್ಸಿನಲ್ಲಿ ಪ್ರಾಪ್ತವಾಗುವ ಅವ್ಯಕ್ತಸ್ಥಿತಿಯು ಏನೆಂಬುದೂ ತಿಳಿಯದಿದ್ದುದರಿಂದ, ಆ ದಂಪತಿಗಳು, ಬಾಲಕನಿಗೆ ಅದೊಂದು ಬಗೆಯ ಮೂರ್ಛೆರೋಗವು ಪ್ರಾಪ್ತವಾಗುತ್ತಿದೆಯೆಂದು ತಿಳಿದರು. ಮನೆಯಲ್ಲಿ ಒಬ್ಬ ಗಂಡು ಮಗನೆಂದಿದ್ದು, ಬಡಗೃಹಕೃತ್ಯಕ್ಕೆ ಸಂಬಂಧಪಟ್ಟ ಯಾವ ಕೆಲಸವನ್ನೂ ಮಾಡದೆ, ಚಟುವಟಿಕೆಯಿಂದ ಜೊತೆಯ ಹುಡುಗರೊಂದಿಗೆ ಆಟಪಾಟಗಳಲ್ಲಿ ಬೆರೆಯದೆ, ಮಂಕನಂತೆ ಎಲ್ಲಿನಿಂತರಲ್ಲೇ, ಎಲ್ಲಿ ಕುಳಿತರಲ್ಲೇ, ಎಲ್ಲಿ ನೋಡತೊಡಗಿದರಲ್ಲೇ ಹೀಗೆ ಇರುತ್ತಿದ್ದ ಆ ಹುಡುಗನ ವಿಷಯದಲ್ಲಿ, ಸ್ವಾಭಾವಿಕವಾಗಿಯೇ ಬೇಸರಗೊಳ್ಳುತ್ತಿದ್ದರು. ಆಗಾಗ ಬಯ್ಯುತ್ತಿದ್ದರು. ಸರಿಯಾಗಿ ಮನಸ್ಸಿಟ್ಟು ಕೆಲಸಕಾರ್ಯಗಳಲ್ಲಿ ತೊಡಗದಿದ್ದರೆ, ಹೊಡೆಯುವೆವೆಂದೂ ಬೆದರಿಸುತ್ತಿದ್ದುದುಂಟು. ಹಾಗೆ ಬೆದರಿಕೆಯನ್ನು ತೋರಿಸಿದಾಗ, ಕಬೀರನು ಸ್ವಲ್ಪ ಹೊತ್ತು ಚಟುವಟಿಕೆಯಿಂದ ಬಾಹ್ಯ ಪ್ರಜ್ಞೆಯಿಂದ ಕೂಡಿ ಕೈಕಾಲುಗಳನ್ನಾಡಿಸಿ ಕೆಲಸ ಮಾಡುತ್ತಲೂ ಇದ್ದನು. ಹೀಗಿರುವಲ್ಲಿ ಒಂದುದಿನ ಕಬೀರನು ಬಹುಬೆಲೆಯ ರೇಷ್ಮೆ ಕಲಾಬತ್ತುಗಳಿಂದ ಕೂಡಿದ ಶಾಲೊಂದನ್ನು ನೇಯುತ್ತಾ, ಮಧ್ಯೆ ಶ್ರೀರಾಮಚಂದ್ರನ ಪವಿತ್ರ ನಾಮವೂ, ತನ್ಮೂಲಕ ಆತನ ಅದ್ಭುತ ಚರಿತ್ರೆಯೂ ಜ್ಞಾಪಕಕ್ಕೆ ಬರಲು ನಾಮಸ್ಮರಣೆಯಲ್ಲಿ ತೊಡಗಿ, ಸ್ವಲ್ಪಹೊತ್ತಿನಲ್ಲೇ ಬಾಹ್ಯಜ್ಞಾನಶೂನ್ಯನಾದನು. ಆ ದಿನಗಳಲ್ಲಿ ಕೆಲಸ ಮಾಡದಿದ್ದರೆ ಹೊಡೆಯುವೆವೆಂದು ಕೇವಲ ಬೆದರಿಸುವಿಕೆಯು ನಿಂತು, ಹೊಡೆಯುವಿಕೆಯೂ ಪ್ರಾರಂಭವಾಗಿದ್ದಿತು.

ಆದರೆ ಕಬೀರನು ಆ ಹೊಡೆತಗಳಿಗೂ ಬೈಗಳಿಗೂ ಅಂಜಿ ತನ್ನ ಭಜನೆ ಧ್ಯಾನ ಮಗ್ನತೆ ಮುಂತಾದುವುಗಳನ್ನು ಬಿಡಲು ಅಶಕ್ತನಾಗಿದ್ದನು. ಆ ಸ್ಥಿತಿಯಲ್ಲಿ ಕಾರ್ಯಗಳೆಲ್ಲವೂ ಕೇವಲ ಅವಶವಾಗಿ ನಡೆಯತೊಡಗುವುವು ಕಬೀರನು ಹಾಗೆ ಬಾಹ್ಯಜ್ಞಾನ ಶೂನ್ಯನಾಗಿ, ಮಗ್ಗದಲ್ಲಿ ಕೆಲಸವು ನಿಂತೊಡನೆಯೇ ಒಳಮನೆಯಲ್ಲಿದ್ದ ನೀಮಾಬೀಯು—'ಎಲೋ ಕಬೀರಾ ಏನು-ಕೆಲಸವನ್ನು ನಿಲ್ಲಿಸಿದೆಯೋ!' ಎಂದು ಒಂದುಸಾರಿ ಕೂಗಿದಳು. ಆ ವೇಳೆಗೆ ಕಬೀರನು ಹೊರಗೆ ಏನು ನಡೆಯುತ್ತಿದೆ ಎಂಬುದನ್ನು ತಿಳಿಯುವ ಸ್ಥಿತಿಯು ಮೀರಿ ಹೋಗಿದ್ದಿತು. ಮನಸ್ಸು ಪಂಚೇಂದ್ರಿಯಗಳ ಹದ್ದನ್ನು ಮೀರಿ ಹೊರಟು ಹೋಗಿತ್ತು. ಆಕೆಯು ಕೂಗಿದ ಕೂಗು ಅವನಿಗೆ ಕೇಳಿಸಲೇ ಇಲ್ಲ. ಅವನ ಮನಸ್ಸು ಮಹದಾನಂದ ಮಗ್ನವಾಗಿ ಶ್ರೀರಾಮಚಂದ್ರನ ದಿವ್ಯಸ್ವರೂಪ ವನ್ನು ದರ್ಶಿಸುತ್ತಾ ತನ್ಮಯವಾಗಿದ್ದಿತು!

ಭಗವಂತನು ಭಕ್ತ ಪರಾಧೀನನಲ್ಲವೆ! ಹೀಗೆ ತನ್ನ ಭಜನೆಯಲ್ಲಿ ತೊಡಗಿ ಧ್ಯಾನಮಗ್ನನಾದ ಬಾಲಕನ ಸ್ಥಿತಿಯನ್ನು ತಿಳಿಯಲಾರದ ಅವನ ತಾಯಿಯು, ಇನ್ನೇನು ಎದ್ದು ಬಂದು ಹೊಡೆಯತೊಡಗುವ ಸಂಭವ: ಅಷ್ಟರಲ್ಲಿ ಮಗ್ಗದ ಲಾಳಿಯು ಪುನಃ ಆಡತೊಡಗಿತು. ಕಬೀರನ ಕೆಲಸದ ಆಲಸ್ಯದಿಂದ ಎರಡು ಗೇಣಿನ ನೇಯ್ಗೆ ಕೂಡ ಸಾಗಿರದಿದ್ದುದು, ಈಗ ಸ್ವಲ್ಪ ಹೊತ್ತಿನ ಕೆಲಸ ದೊಳಗಾಗಿ ಮುಕ್ಕಾಲುಪಾಲು ಶಾಲು ನೇಯಲ್ಪಟ್ಟಿತು. ತರುವಾಯ ಸ್ವಲ್ಪ ಹೊತ್ತಿಗೆ ಎಚ್ಚತ್ತ ಕಬೀರನು, ಕಿರೀಟಕುಂಡಲಾಲಂಕೃತನಾಗಿ ತಾನು ಈ ವರೆಗೆ ತನ್ನ ಹೃದಯದೊಳಗೆ ದರ್ಶಿಸುತ್ತಿದ್ದ ದಿವ್ಯ ಮೂರ್ತಿಯೇ ಮಗ್ಗದ ಎದುರಿಗೆ ಕುಳಿತು ಲಾಳಿಯನ್ನು ಆಡಿಸುತ್ತಾ ಬಹು ಚಮತ್ಕಾರವಾಗಿ ನೇಯು ತ್ತಿದ್ದುದನ್ನು ಕಂಡು, ಅತ್ಯಂತ ಕೌತುಕಪಟ್ಟನಾದರೂ, ಬಾಯ್ತೆಗೆದು ಏನೆಂದು ಹೇಳಲೂ ತೋರದೆ, ನೀನು ಯಾರೆಂದು ಪ್ರಶ್ನಿಸಲೂ ಅರಿಯದೆ ಚಿತ್ರ ಪ್ರತಿಮೆಯಂತೆ ಕುಳಿತು ನೋಡುತ್ತಾ ಇದ್ದನು.

ಮುಂದೆ ಸ್ವಲ್ಪ ಹೊತ್ತಿಗೆ ಶಾಲು ನೇಯ್ಗುದು ಮುಗಿಯಿತು. ಒಡನೆ ಮಗ್ಗದ ಮುಂದೆ ಕುಳಿತಿದ್ದ ಆ ದಿವ್ಯ ವ್ಯಕ್ತಿಯು ಅದೃಶ್ಯವಾಯಿತು. ಕಬೀರನ ಮನಸ್ಸು ಸುಪ್ರಸನ್ನವಾಗಿ ಆಗಿನಿಂದ ಸುತ್ತಲಿನ ಪ್ರಪಂಚವು ಅಪೂರ್ವವಾದ ಬೇರೊಂದು ದೃಷ್ಟಿಯಿಂದ ತೋರತೊಡಗಿತು. ಆವರೆಗೆ

ಅವನ ಮನಸ್ಸನ್ನು ಮುಸುಕಿದ್ದ ಒಂದು ಬಗೆಯ, ಮಬ್ಬು ದೂರಾದಂತೆ ತೋರಿತು. ಕಬೀರನು, ಮಗ್ಗದಲ್ಲಿ ನೇತ್ರಾನಂದಕರವಾಗಿ ಪ್ರಕಾಶಿಸುತ್ತಿದ್ದ ಆ ಶಾಲನ್ನು ಹೊರಕ್ಕೆ ತೆಗೆದು ಪರಮ ಸಂತೋಷದಿಂದ ಒಳಮನೆಗೆ ಕೊಂಡೊಯ್ದು—"ಅಮ್ಮಾ ಇಲ್ಲಿ ನೋಡು. ಶಾಲು, ಶಾಲು, ಕಲಾಬತ್ತಿನ ಶಾಲು! ಎಷ್ಟು ಚೆನ್ನಾಗಿದೆ!" ಎಂದು ತೋರಿಸತೊಡಗಿದನು. ನೀಮಾ ಬೀಯು, ತಾನು ಆ ವರೆಗೆ ತನ್ನ ಪತಿಯು ಕೈಕೆಲಸದಲ್ಲೂ ಅಷ್ಟುಮಟ್ಟಿನ ಸೌಂದರ್ಯದಿಂದ ನೇಯಲ್ಪಟ್ಟುದನ್ನು ಕಂಡರಿಯದಿದ್ದುದರಿಂದ, ತನ್ನ ಮಗನ ಜಾಣ್ಮೆಗಾಗಿ ಪರಮ ಸಂತುಷ್ಟಳಾಗಿ, ಎದ್ದು ಒಂದು ಚಿನ್ನ ಮೇಲೆ ಕೈಯಾಡಿಸಿ, ತಲೆಯ ಕೂದಲನ್ನು ನೇವರಿಸಿ, ಒಳ್ಳೊಳ್ಳೆಯ ಮಾತುಗಳಿಂದ ಉಪಚರಿಸಿ, ಅವರೆಗೇ ಸಿದ್ಧವಾಗಿದ್ದ ರೊಟ್ಟಿಯನ್ನು ತಿನಲಿತ್ತು—'ಮಗು ಕಬೀರಾ, ಈ ದಿನ ಈ ಊರಿನ ಸಂತೆ! ನಿಮ್ಮ ತಂದೆಯು ಊರಲ್ಲಿಲ್ಲ. ಮನೆ ಯುಲ್ಲೊಂ ಶುದ್ಧವಾಗಿ ಒಂದು ಪದಾರ್ಥವೂ ಇಲ್ಲ. ಹೇಗೂ ನಿನ್ನ ಶಾಲೂ ನೇ ಯ್ದು ಮುಗಿದಿದೆಯಲ್ಲವೆ! ಇದನ್ನು ಸಂತೆಗೆ ಒಯ್ದು ಸರಿಯಾದ ಬೆಲೆಗೆ ಮಾರಿ ಏನಾದರೂ ಪದಾರ್ಥಗಳನ್ನು ಕೊಂಡು ತರಬಾರದೇನಪ್ಪಾ?" ಎಂದಳು. ತಾಯಿಯ ಉಪಚಾರದ ಮಾತುಗಳಿಂದ ಸಂತುಷ್ಟನಾದ ಕಬೀರನು-'ಹಾಗೇ ಆಗಲಿ' ಎಂದು, ಆ ಶಾಲನ್ನು ಮಡಿಸಿ ಕೈಯಲ್ಲಿ ತೆಗೆದುಕೊಂಡು ಸಂತೆ ಗೆಂದು ಹೊರಟನು.

ತಾಯಿಯಿಂದ ಪ್ರೋತ್ಸಾಹಿತನಾಗಿ ಹೊರ ಹೊರಟು, ಬೀದಿಯಲ್ಲಿ ಹೋಗುತ್ತಾ ಇರುವಾಗ ಸ್ವಭಾವಿಕವಾಗಿಯೇ ನೀಲವರ್ಣರಂಜಿತವಾದ ಆ ಕಾಶ, ಗಿಡಮರಗಳಲ್ಲಿ ಪ್ರಕಾಶಿಸುತ್ತಿದ್ದ ಎಳೆದಳಿರು, ಬಗೆಬಗೆಯ ಪುಷ್ಪಾ ದಿಗಳು, ತಾಯಿಯೊಂದಿಗೆ ಕುಣಿದಾಡುತ್ತ, ನೆಗೆದಾಡುತ್ತ, ಓಡಿಯಾಡು ತ್ತಿದ್ದ ಎಳೆಗರು, ಅಂತರಿಕ್ಷದಲ್ಲಿ ಕೋಲಾಹಲದಿಂದ ಹಾರಿಯಾಡುತ್ತಿದ್ದ ಬ ಗೆಬಗೆಯ ಪಕ್ಷಿಗಳು, ಹಸುರು ಚಾಪೆಯನ್ನು ಹಾಸಿದೆಯೋ ಎಂಬಂತೆ ಭೂಮಿಗೆ ಒತ್ತಿ ಬೆಳೆದಿದ್ದ ಎಳೆಯ ಗರಿಕೆಯಹುಲ್ಲು ಈ ಮುಂತಾದ ಪ್ರಕೃ ತಿಸಿದ್ಧ ವಸ್ತುಗಳು, ಕಬೀರನ ದೃಷ್ಟಿ ಗೋಚರವಾದುವು. ಒಡನೆಯೇ ಅವನ ಭಾವನಾಮಯ ಮನಸ್ಥಿತಿಯು, ತನ್ನ ಮನೆ, ತನ್ನ ತಾಯಿ, ತನ್ನ ಕೈ ಯಲ್ಲಿದ್ದ ಶಾಲು, ಅದನ್ನು ಮಾರುವುದಕ್ಕೆ ಹೊರಟ ತಾನು, ಹೋಗ

ಬೇಕೆಂದು ಹೊರಟ ಸಂತೆ, ಈ ವಿಚಾರಗಳನ್ನೆಲ್ಲಾ ಒಟ್ಟಿಗೆ ಮರೆಸಿ ಬಿಟ್ಟಿತು. ಕಬೀರನು, ಕೇವಲ ಅವಶನಾಗಿ, ಕಾಲುಗಳು ಒಯ್ದಲ್ಲಿಗೆ ಸಾಗುತ್ತಲಿದ್ದನು. ಸ್ವಲ್ಪ ಹೊತ್ತಿನಲ್ಲೇ ಸಂತೆಯೂ ಸಿಕ್ಕಿತು. ಅನೇಕ ಜನರು, ಸಂತೆಯಲ್ಲಿದ್ದ ತಮ್ಮ ಪದಾರ್ಥಗಳನ್ನು ಕೊಳ್ಳುತ್ತಾ-ಮಾರುತ್ತಾ, ವ್ಯಾಪಾರದಲ್ಲಿ ತೊಡಗಿದ್ದರು. ಕಬೀರನ ಕೈಯಲ್ಲಿದ್ದ ಬಹು ಬೆಲೆಯ ಕಲಾಬತ್ತಿನ ಆ ಶಾಲು ಅನೇಕರ ದೃಷ್ಟಿಯನ್ನು ಎಳೆಯದಿರಲಿಲ್ಲ. ಅದನ್ನು ಬಿಚ್ಚಿ, ಅದರ ಸೆರಗು ಒಡಲುಗಳ ಸೊಬಗನ್ನೂ, ಅಂಚಿನ ಅಂದವನ್ನೂ ನೋಡಬೇಕೆಂದು ಅನೇಕರಿಗೆ ಬಯಕೆಯಾಯಿತು. ಆದರೆ ಕಬೀರನು ಅದನ್ನು ಮಾರಬೇಕೆಂಬ ಇಚ್ಛೆಯೇ ಇಲ್ಲದವನಂತೆ ಹುಚ್ಚನಂತೆ ಹೋಗುತ್ತಿದ್ದುದರಿಂದ ಕೆಲ ಹೊತ್ತು ಯಾರೂ ಏನೂ ಮಾಡಲಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ, ಅದನ್ನು ನೋಡಬೇಕೆಂಬ ಜನರ ಆಸೆಯು ತಡೆಯಲಶಕ್ಯವಾಯಿತು. ಕೆಲವರು, ಕಬೀರನನ್ನು ಹಿಡಿದು ನಿಲ್ಲಿಸಿ, —'ಏಯ್ಯ ಇದೇನು, ಈ ಶಾಲನ್ನು, ಮಾರಲಿಕ್ಕೆ ತಂದಿದ್ದೀಯಾ? ಎಲ್ಲಿ ನೋಡೋಣ' ಎಂದರು. ತನ್ನ ಮಾರ್ಗಕ್ಕೆ ಹೀಗೆ ತಡೆಯುಂಟಾದುದು, ಕಬೀರನ ಮನಸ್ಸನ್ನು ಬಾಹ್ಯಕ್ಕೆ ತಿರುಗಿಸಿತು. ಒಡನೆ, ಎದುರಿಗಿದ್ದು ನೋಡಬೇಕೆಂದು ಬಯಸಿದ ಅವರ ಕೈಗೆ ಆ ಶಾಲನ್ನು ಕೊಟ್ಟು ಸುಮ್ಮನೆ ನಿಂತುಬಿಟ್ಟನು. ಅದನ್ನು ತೆಗೆದುಕೊಂಡವರು, ಬಿಚ್ಚಿ ಅದರ ಸೆರಗನ್ನೂ ಒಳಮೈಯನ್ನೂ, ಅಂಚನ್ನೂ ನೋಡಿ, ಅದರ ಅಂದ ಚಂದಗಳಿಗಾಗಿಯೂ, ನೇಯ್ಗೆಯ ಸೊಬಗಿಗಾಗಿಯೂ, ಪರಮಾಶ್ಚರ್ಯ ಪಡುತ್ತ, ಅಂತಹ ಉತ್ತಮವರ್ಗದ ಶಾಲನ್ನು ತಮ್ಮಲ್ಲಿ ಯಾರೂ ಆವರೆಗೆ ಕಂಡುದಿಲ್ಲವೆಂದು ಹೇಳಿಕೊಳ್ಳುತ್ತಾ ಒಬ್ಬೊಬ್ಬರಾಗಿ ಹೊರಟು ನಡೆದರು. ಆ ಶಾಲಿಗೆ ಎಷ್ಟು ಬೆಲೆಯೆಂದು ಕೇಳುವ ಇಚ್ಛೆ ಸಹ ಅಲ್ಲಿ ನೆರೆದಿದ್ದ ಯಾರಿಗೂ ಉಂಟಾಗಲಿಲ್ಲ. ಸಾಕ್ಷಾದ್ಭಗವಾನನ ಪ್ರತ್ಯಕ್ಷ ಕರಕಮಲ ನಿರ್ಮಿತವಾದ ಆ ಶಾಲಿಗೆ ಬೆಲೆಯನ್ನು ಕೇಳಲೂ ನಿರ್ಧರಿಸಲು ಯಾರಿಗೆ ಸಾಧ್ಯ?

ಹಾಗೆಯೇ ಸಾಯಂಕಾಲವಾಯಿತು, ಸಂತೆಮುಗಿಯಿತು. ಸಂತೆಗೆ ಬಂದವರೊಬ್ಬೊಬ್ಬರೂ ತಮ್ಮ ವ್ಯಾಪಾರವನ್ನು ಮುಗಿಸಿಕೊಂಡು ಹೊರಟುನಡೆದರು. ಕಬೀರನು ಇನ್ನೂ ಆ ಶಾಲನ್ನು ಕೈಯಲ್ಲಿ ಹಿಡಿದುಕೊಂಡು ಸುಮ್ಮನೆ ನಿಂತಿದ್ದಾನೆ. ಆ ವೇಳೆಗೆ ಮುಸಕುಮುಸಕು ಕತ್ತಲಾಯಿತು. ಆಗ

ಕಬೀರನು ತನ್ನ ಸುತ್ತುಮುತ್ತಲೂ ನೋಡಿಕೊಂಡನು. ಸಂತೆಯ ಸ್ಥಳ ವು ಬರಿಯ ಬಯಲಾಗಿದೆ. ಅವರೆಗೆ ತನ್ನ ಶಾಲಿಗೆ ಯಾರೂ ಗಿರಾಕಿ ಸಿಕ್ಕದೆ, ಅಷ್ಟು ಹೊತ್ತಿನಮೇಲೆ, ಅದನ್ನು ಮಾರದೆ ಬರಿಗೈಯಿಂದ ತಾನು ಮನೆಗೆ ಹೋದರೆ, ತನ್ನ ತಾಯಿಯು ತಪ್ಪದೆ ಹೊಡೆಯುವಳೆಂದು ಅವನಿಗೆ ಭಯವುಂಟಾಯಿತು. ಒಡನೆ ಅಲ್ಲಿಂದ ಹೊರಟು ಊರೊಳಕ್ಕೆ ಬರುತ್ತಾ ಮಾರ್ಗದಲ್ಲಿದ್ದ ಒಂದು ನಿರ್ಜನವಾದ ಹಳೆಯ ಮುರುಕುಮನೆಯನ್ನು ಪ್ರವೇಶಿಸಿ ಅಲ್ಲೊಂದುಕಡೆ ಅಡಗಿಕೊಂಡು, ಅಲ್ಲಿ ಯಾರ ಉಪದ್ರವವೂ ಇಲ್ಲದೆ ಇರಬಹುದೆಂದು ರಾಮಭಜನೆಯಲ್ಲಿ ತೊಡಗಿದನು.



## ಅಧ್ಯಾಯ ೩ 'ಗುರೂಪದೇಶ'

'ಶ್ರೇಯಾಂಸಿ ಬಹು ವಿಘ್ನಾನಿ' ಎಂಬೊಂದು ಪ್ರಾಚೀನ ಹೇಳಿಕೆಯನ್ನು ಆಗಾಗ ಕೇಳುತ್ತಿರುವುದುಂಟಷ್ಟೆ! ಸತ್ಕಾರ್ಯದಲ್ಲಿ ತೊಡಗುವವರಿಗೆ ಹಲವು ವಿಘ್ನಗಳು ಪ್ರಾಪ್ತವಾಗುತ್ತವೆಯೆಂದು ಇದರ ಅರ್ಥ. ಇದು ಸ್ವಾಭಾವಿಕವಾದುದು! ಪ್ರತಿಯೊಂದು ಪ್ರಾಣಿಯ ಪ್ರಾಪಂಚಿಕ ಜೀವಿತದಲ್ಲಿ ಮೂರು ಬಗೆಯ ಗತಿಗಳುಂಟು. ಸದ್ಗತಿದಾಯಕವಾದ ಉನ್ನತಮಾರ್ಗಗಮನ, ಅಧೋಗತಿದಾಯಕವಾದ ಅಧಮ ಮಾರ್ಗಗಮನ, ಈ ಎರಡನ್ನೂ ಬಿಟ್ಟರೆ, ಯಾವ ವಿಶೇಷವೂ ಇಲ್ಲದೆ, ಸುಮ್ಮನೆ ಪಶುವಿನಂತೆ ಉಂಡು ಕಾಲಯಾಪನೆ ಮಾಡುತ್ತಿರುವ ಸಮತಳ ಸ್ಥಿತಿಯೊಂದು! ಅಧೋಗತಿಗಿಳಿಯುವ ಸ್ಥಿತಿಗಿಂತಲೂ ಸುಮ್ಮನೆ ಕಾಲಯಾಪನೆ ಮಾಡುತ್ತಿರುವುದಾದರೂ ಲೇಸೆಂದು ತೋರಬಹುದು! ಆದರೆ ಉನ್ನತಿಯ ಮಾರ್ಗದಲ್ಲಿ ನಡೆಯಲು ಮನುಷ್ಯನಾದವನು ಪ್ರಯತ್ನಪೂರ್ವಕ ಶ್ರಮಿಸಲೇ ಬೇಕೆಂಬುದನ್ನು ಸರ್ವರೂ ಒಪ್ಪಬಹುದಲ್ಲವೆ? ಉನ್ನತಿಯ ಮಾರ್ಗವು ಬೆಟ್ಟವನ್ನು ಏರಿದಂತೆ! ಅದರಲ್ಲಿ ಒಂದೊಂದು ಕ್ಷಣಕ್ಕೂ ಪ್ರತಿಬಂಧಕಗಳಿದ್ದೇ ಇವೆ. ಕಲ್ಲು ಮುಳ್ಳುಗಳೂ, ಏರಲಸಾಧ್ಯವಾದ ಕಡಿದಾದ ಬಂಡೆಗಳೂ ಇರುತ್ತವೆ. ಒಂದೊಂದು ಕ್ಷಣಕ್ಕೂ ಒಂದೊಂದು ಹೆಜ್ಜೆಗೂ ಏರುವವನ ಕಾಲುಗಳ ಬಲವು ಪರೀಕ್ಷಿಸಲ್ಪಡುತ್ತಿದೆ. ಹೀಗೆ ಕಾಲು ನೋವಾದರೂ, ಮಧ್ಯೆ ಮಧ್ಯೆ ಒಂದೆರಡು ಮುಳ್ಳು ಕಲ್ಲುಗಳು ನೆಟ್ಟರೂ, ರಕ್ತ ಬಂದರೂ, ನಿಟ್ಟುಸಿರು ಬಿಡುವಂತಾ

ದರೂ, ಮನುಷ್ಯನು ಹಿಂಜರಿಯದೆ, ಬೆಟ್ಟದ ಮೇಲಕ್ಕೆ ಹತ್ತಿ ನಡೆವನಾದರೆ, ಅಲ್ಲಿಂದ ಸುತ್ತಲೂ ಬಹು ದೂರದ ವರೆಗಿನ ಪ್ರಕೃತಿ ಸೌಂದರ್ಯವನ್ನು ಕಣ್ದಣಿಯೆ ನೋಡಬಹುದು. ಪರ್ವತದ ಬುಡದ ಸಮತಳ ಪ್ರದೇಶದಲ್ಲೇ ಇದ್ದರೆ ಕಾಣಲಾಗದ ಸಹಸ್ರಾರು ಆಶ್ಚರ್ಯಕರ ಸಂಗತಿಗಳೆಲ್ಲಾ ಅಲ್ಲಿ ದೃಷ್ಟಿಗೋಚರವಾಗುವುವು. ಇಷ್ಟು ಮಾತ್ರವಲ್ಲ-ಅಲ್ಲಿಂದ ನೋಡುವಾಗ್ಗೆ, ಭೂಮಿಯ ಮೇಲಿನ ತಗ್ಗು ದಿಣ್ಣೆಗಳೂ, ಹೆಚ್ಚು ಕಡಿಮೆಗಳೂ, ಕಲ್ಲುಕಂಟೆಗಳೂ ಕಾಣುವುದಿಲ್ಲ. ವಿಶೇಷ ರೀತಿಯಿಂದ ಸಮಾನ ಭಾವವೇ ಕಂಡುಬರುವುದಲ್ಲದೆ, ಸಮೀಪದಲ್ಲಿದ್ದರೆ ತೋರುವ ಭೇದಗಳೂ ವ್ಯತ್ಯಾಸಗಳೂ ಕಂಡುಬರುವುದಿಲ್ಲ. ಮನಸ್ಸು ಅಷ್ಟು ಬಗೆಯ ವಸ್ತುಗಳನ್ನು ಏಕಕಾಲದಲ್ಲಿ ನೋಡುವುದರಿಂದ ಬಹುಮಟ್ಟಿಗೆ ಪ್ರಸನ್ನತೆಯನ್ನು ಹೊಂದುವುದಲ್ಲದೆ ಆ ಅನುಭವದಿಂದ ಮನಸ್ಸಿನ ಕ್ಷುದ್ರಭಾವ, ಭೇದಭಾವ, ಕೂಪಕೂರ್ಮ ಭಾವಗಳು ನಾಶವಾಗಿ ದೃಷ್ಟಿಗೆ ವೈಶಾಲ್ಯತೆಯು ಪ್ರಾಪ್ತವಾಗುವುದು. ಕ್ಷುದ್ರಕಾರಣಗಳಿಂದ ಪ್ರಾಪ್ತವಾಗುವ ಅನೇಕ ಸಂಕಟಗಳಿಗೂ ಮನೋವ್ಯಥೆಗಳಿಗೂ ಅಲ್ಲ ಅವಕಾಶವಿರುವುದಿಲ್ಲ. ಭಗವತ್ಪ್ರಾಪ್ತಿಗಾಗಿ ಸದ್ಗುಣ ಸದಾಚರಣೆಗಳನ್ನಿಟ್ಟುಕೊಂಡು, ಆತ್ಮೋನ್ನತಿಯನ್ನು ಹೊಂದಲೆಳೆಸಿದ ಮಹನೀಯರಿಗೆ ಪ್ರಾಪಂಚಿಕರ ದೃಷ್ಟಿಯಲ್ಲಿ ಕಷ್ಟ ಪ್ರಾಪ್ತಿಯಾದಂತೆ ತೋರಿದರೂ, ಆದರಿಂದ ಅವರಿಗೆ ಸುಖವೇ ತೋರುವುದಲ್ಲದೆ ಅನ್ಯಥಾ ಇಲ್ಲ! ಬೆಟ್ಟವನ್ನು ಹತ್ತಿ ಹೋದವನೊಬ್ಬನು ಮಾತ್ರವೇ ಹೇಗೆ ಸುತ್ತುಮುತ್ತಲಿನ ಪ್ರಕೃತಿ ಸೌಂದರ್ಯವನ್ನು ನೋಡಲು ಸಾಧ್ಯವಿರುವುದೋ, ಹಾಗೆಯೇ ಆತ್ಮೋನ್ನತಿಗಾಗಿ ಕಷ್ಟಪಡಲು ಯಾವನು ಸಿದ್ಧನಾಗುವನೋ ಅವನೊಬ್ಬನಿಗೆ ಮಾತ್ರವೇ, ಆ ಬಗೆಯ ಮನಶ್ಶಾಂತಿಯೂ ತೃಪ್ತಿಯೂ ಪ್ರಸನ್ನತೆಯೂ ದೃಷ್ಟಿವೈಶಾಲ್ಯತೆಯೂ, ಸೃಷ್ಟಿತತ್ವದ ನಿಶ್ಚಯ ಸ್ವರೂಪದರ್ಶನವೂ ಪ್ರಾಪ್ತವಾಗುವುವು. ಇಂತು ಐಹಿಕವಾದುದಾಗಲಿ ಪಾರತ್ರಿಕವಾದುದಾಗಲಿ- ಕಷ್ಟಪಡದೆ ಯಾರಿಗೂ ಏನೂ ಸಾಧ್ಯವಾದುದಿಲ್ಲ. ಕೈ ಕೆಸರಾದರೆ ಬಾಯಿಗೆ ಮೊಸರು ಸಿಕ್ಕುವುದು. ಕೈಯನ್ನು ಕೆಸರು ಮಾಡಿಕೊಳ್ಳಲು ಒಪ್ಪದಿದ್ದರೆ ಬಾಯಿಗೆ ಮೊಸರೂ ಇಲ್ಲ.

ಸತ್ಕಾರ್ಯದಲ್ಲೂ, ಭಗವದ್ವಿಚಾರದಲ್ಲೂ, ಪ್ರವೇಶಿಸಲಿಚ್ಛೆಪಡುವವರಿಗೆ ಅನೇಕ ಬಗೆಯ ಪರೀಕ್ಷೆಗಳು ಪ್ರಾಪ್ತವಾಗುವುವೆಂಬುದನ್ನು ಕಾರ್ಯ

ಕಾರಣ ಸಮೇತ ಈ ವರೆಗೆ ಅನೇಕವೇಳೆ ಪ್ರಸ್ತಾಪಿಸಿದ್ದಾಗಿದೆ! ಕಬೀರನೂ ಪ್ರಾಪಂಚಿಕ ವಿಚಾರಗಳಲ್ಲಿ ಅನಸ್ಯ ಮನಸ್ಕನಾಗಿ ಭಗವನ್ನಾಮಸ್ಮರಣೆಯಲ್ಲಿ ನಿರತನಾಗುತ್ತಿದ್ದ ಆ ಸ್ಥಿತಿಯಲ್ಲಿ ಆತನ ಮನಸ್ಸು ಸ್ಥಿರವಾಗಿರುವುದೋ ಎಂಬುದರ ಪರೀಕ್ಷೆಯೂ, ಅವನು ಲಾಭ ನಷ್ಟ, ಸುಖ ದುಃಖ, ಮಾನ ಅವಮಾನ ಮುಂತಾದುವುಗಳ ವಿಷಯದಲ್ಲಿ ಸಮಾನ ಭಾವವುಳ್ಳವನಾಗಿದ್ದಾನೆಯೋ ಎಂಬುದರ ಪರೀಕ್ಷೆಯೂ ಆಗ ನಡೆಯಬೇಕಾಯಿತು. ಮುರುಕು ಮನೆಯ ಕತ್ತಲು ಪ್ರದೇಶವನ್ನು ಆಶ್ರಯಿಸಿ ಕುಳಿತು, ತನ್ನ ಹೃದಯೇಶನಾದ ಶ್ರೀರಾಮಚಂದ್ರನ ಪಾದಧ್ಯಾನದಲ್ಲಿ ಮಗ್ನನಾಗಿದ್ದ ಕಬೀರನ ಎದುರಿಗೆ, ಆಗ ಕೇವಲ ಹರಿದ ಒಂದು ತುಂಡು ಬಟ್ಟೆಯನ್ನು ಉಟ್ಟು ಹೊದೆದು, ಚಳಿ ಮಳೆಗಳಲ್ಲಿ ಗಡಗಡನೆಂದು ನಡುಗುತ್ತಿದ್ದ ಒಬ್ಬ ಬ್ರಾಹ್ಮಣನು ಬಂದುನಿಂತು 'ಅಯ್ಯಾ, ಚಳಿಯಿಂದ ನಡುಗುತ್ತಿದ್ದೇನೆ. ಪ್ರಾಣಹೋಗುತ್ತಿದೆ. ಒಂದು ತುಂಡು ಬಟ್ಟೆಯನ್ನು ಕೊಟ್ಟು ಪುಣ್ಯಸಂಪಾದನೆ ಮಾಡಬಾರದೆ?' ಎಂದು ನುಡಿದನು. ದಯಾಶಾಲಿಯಾದ ಕಬೀರನಿಗೆ, ಆ ಬಡಮನುಷ್ಯನ ಸ್ಥಿತಿಯನ್ನು ನೋಡಿ, ಕನಿಕರವುಂಟಾಯಿತು. 'ಹೇಗೂ ಈ ಶಾಲು ಮಾರಿಗೆಯಾಗಲಿಲ್ಲ. ಸುಮ್ಮನೆ ನನ್ನಲ್ಲಿದ್ದರೆ ಪ್ರಯೋಜನವೇನು? ಆತನ ಚಳಿಯನ್ನಾದರೂ ಪರಿಹರಿಸಲಿ' ಎಂದುಕೊಂಡು ಅಮೌಲ್ಯ ಬೆಲೆಯುಳ್ಳ ಆ ಶಾಲನ್ನು ಮಧ್ಯಕ್ಕೆ ಎರಡಾಗಿ ಹರಿದು ಒಂದು ತುಂಡನ್ನು ಆ ಬ್ರಾಹ್ಮಣನಿಗೆ ಕೊಟ್ಟು ಬಿಟ್ಟನು. ಬ್ರಾಹ್ಮಣನು ಸಂತುಷ್ಟನಾದಂತೆ ನಟಿಸಿ, ಅಲ್ಲಿಂದ ಹೊರಟು ನಡೆದನು. ಸ್ವಲ್ಪ ಹೊತ್ತಾಯಿತು. ವಿಭೂತಿ ರುದ್ರಾಕ್ಷಿ ದಂಡ ಕಮಂಡಲುಗಳನ್ನು ಹಿಡಿದು 'ಜಯಮಹದೇವ' ಎಂದು ಕೂಗುತ್ತಾ ಗೋಸಾವಿಯೊಬ್ಬನು ಬಂದು ಎದುರಿಗೆ ನಿಂತು— 'ಎಲೈ ಇದೇನಾಶ್ಚರ್ಯ! ಜಾತಿಯಲ್ಲಿ ನೀನು ಮಹಮ್ಮದೀಯ! ನೀನು ರಾಮ ರಾಮ, ಎಂದು ಕಾಫರರ ದೇವರನ್ನು ಭಜನೆ ಮಾಡುವುದರ ಅರ್ಥವೇನು! ನಿನಗೆ ಬುದ್ಧಿಯಿಲ್ಲವೆ? ಎಂದು ಪ್ರಶ್ನಿಸಿದನು. ಆ ಮಾತನ್ನು ಕೇಳಿದ ಕಬೀರನು- 'ಅಯ್ಯಾ ಮಹಮ್ಮದೀಯನಿಗೆ ಬೇರೆ ಹಿಂದೂವಿಗೆ ಬೇರೆ ಸೂರ್ಯನಿಲ್ಲವಷ್ಟೆ! ನೀರೂ ವಾಯುವೂ ಎಲ್ಲರಿಗೂ ಒಂದೇ ಅಲ್ಲದೆ, ಅವುಗಳಲ್ಲಿ ಒಬ್ಬೊಬ್ಬರಿಗೂ ಬೇರೆ ಬೇರೆಯಾಗಿವೆಯೋ. ಅವುಗಳನ್ನು ಅವರು ಬೇರೆಬೇರೆ ಹೆಸರಿನಿಂದ ಕರೆಯುತ್ತಿರ

ಒಹುದು. ಅದಮಾತ್ರಕ್ಕೆ ಆ ವಸ್ತುಗಳೇನೋ ಬದಲಾಗುವುದಿಲ್ಲವಷ್ಟೆ! ಹಾಗೆಯೇ, ಅಲ್ಲಾ ಎನ್ನಲಿ - ರಾಮನೆನ್ನಲಿ! ದೇವರಿರುವನು ಒಬ್ಬನೇ! ಅವನನ್ನು ಬೇರೆ ಬೇರೆ ಮತಗಳವರು ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ, ಅಷ್ಟೆ! ಇದರಲ್ಲಿ ಭೇದವಿಲ್ಲವೆಂಬುದನ್ನು ತಿಳಿ' ಎಂದು ಹೇಳಿದನು. ಕಬೀರನ ಮನೋನಿಶ್ಚಯವನ್ನು ತಿಳಿದ ಆ ಫಕೀರನು ಸಂತುಷ್ಟನಾಗಿ, ಆತನನ್ನು ಬೇಡಿ ಆ ಮಿಕ್ಕ ಅರ್ಧ ಶಾಲಿನ ತುಂಡನ್ನೂ ಪಡೆದು ಹೊರಟುಹೋದನು. ಭಕ್ತಿವಿಜಯ ಕಥೆಯಲ್ಲಿ ಶ್ರೀಕೃಷ್ಣನೇ ಬ್ರಾಹ್ಮಣ ಮತ್ತು ಫಕೀರನ ವೇಷಗಳಿಂದ ಬಂದು ಅವನನ್ನು ಮೇಲ್ಕಂಡಂತೆ ಪರೀಕ್ಷಿಸಿದನೆಂದು ಹೇಳಿಲ್ಪಟ್ಟಿದೆ. ಅಂತೂ ಈ ಪ್ರಥಮ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಕಬೀರನು, ಮುಂದೆ ಅಡಿಯಿಡಲು ಯೋಗ್ಯನೆನ್ನಿಸಿಕೊಂಡನು.

ಹೀಗೆ, ಶಾಲು ತನ್ನ ಕೈಬಿಟ್ಟು ಹೋದುದು ಕಬೀರನಿಗೆ ತೃಪ್ತಿಯನ್ನುಂಟುಮಾಡಿತು. 'ಹೋಗಲಿ! ಅದು ಈ ದಿನ ಬೆಲೆಯಾಗಿ ಹೋಗಿದ್ದರೆ, ಈ ಬಡಜನಗಳಿಗೆ ದಾನಕೊಡಲು ಮಾರ್ಗವಿರುತ್ತಿರಲಿಲ್ಲವಲ್ಲವೆ! ಉತ್ತಮವೇ ಆಯಿತು' ಎಂದುಕೊಂಡು ನಿಶ್ಚಿಂತೆಯಾಗಿ ಭಗವಧ್ಯಾನ ಮಾಡಿಕೊಳ್ಳುತ್ತಾ ಕುಳಿತಿದ್ದನು. ಅತ್ತ ಆ ಬ್ರಾಹ್ಮಣನೇ, ಕಬೀರನ ಮನೆಗೆ ನಡೆದು ಆತನ ತಾಯಿಯನ್ನು ಕಂಡು,— ಅಮ್ಮಾ, ನಿನ್ನ ಮಗನು, ಶಾಲನ್ನು ಅಂಗಡೀಬೀದಿಯಲ್ಲಿಟ್ಟುಕೊಂಡು, ಬಂದು ಕೇಳಿದವರಿಗೆ ಧಾರಣೆಯನ್ನೇ ಹೇಳದೆ, ಮನಸ್ಸಿಟ್ಟು ವ್ಯಾಪಾರವನ್ನೇ ಮಾಡದೆ, ಸಂಜೆಯವರೆಗೂ ಹಾಗೇ ಕುಳಿತಿದ್ದನು. ಈಗ ಅದನ್ನು ಬ್ರಾಹ್ಮಣರಿಗೂ ಫಕೀರರಿಗೂ ಹರಿದು ಹಂಚಿಕೊಟ್ಟು ನಿನ್ನ ಭಯಕ್ಕಾಗಿ ಒಂದು ಮುರುಕು ಮನೆಯಲ್ಲಿ ಅವಿತುಕೊಂಡಿದ್ದಾನೆ' ಎಂದು ಹೇಳಿದನು. ಆ ಮಾತನ್ನು ಕೇಳಿದ ಆ ಸಾಧ್ವಿಯು ಅತ್ಯಂತ ಆಶ್ಚರ್ಯ-ಗಾಬರಿಗಳಿಂದ ಆತನೊಂದಿಗೆ ಹೊರಟು, ಕಬೀರನು ಕುಳಿತಿದ್ದ ಮುರುಕು ಮನೆಯ ಸಮೀಪಕ್ಕೆ ಬಂದು, ಶಾಲು ಎಲ್ಲಿಂದೂ, ಏಕೆ ಹೊತ್ತಿಗೆ ಸರಿಯಾಗಿ ಮನೆಗೆ ಬರಲಿಲ್ಲವೆಂದೂ ಕೇಳಿದಳು. ಕಬೀರನು ಏನೂ ಪ್ರತ್ಯುತ್ತರ ಹೇಳಲಾರದೆ, ಸುಮ್ಮನೆ ತಲೆಬಗ್ಗಿಸಿಕೊಂಡು ಕುಳಿತಿರಲು, ಬ್ರಾಹ್ಮಣನು- ಅಮ್ಮಾ, ಅವನನ್ನು ಹೀಗೆ ಕೇಳಿ ಪ್ರಯೋಜನವಿಲ್ಲ. ಬೈಗಳೂ ಅವನಿಗೆ ಹತ್ತವು. 'ಇಗೋ ತೆಗೆದುಕೋ' ಎಂದು ಒಂದು ಚಿತ್ರವನ್ನು ಆಕೆಯ

ಕ್ಕೈಗಿತ್ತು 'ಅದರಿಂದ ಹೊಡೆ' ಎಂದನು. ಬಹು ಬೆಲೆಯ ಶಾಲನ್ನು ಹಾಳು ಮಾಡಿದನೆಂಬ ರೋಷದಿಂದ ನೀಮಾಬೀಯು ಮನದಣಿಯೆ ಮಗನನ್ನು ಹೊಡೆದಳು. ಆದರೇನು, ಕಬೀರನಿಗೆ ಅವುಗಳಿಂದ ಯಾವ ವಿಧದಲ್ಲೂ ಬಾಧೆ ಯುಂಟಾಗದೆ ಅವನು ಮೊದಲಿನಂತೆಯೇ ಹಸನ್ಮುಖದಿಂದಲೇ ಇದ್ದನು. ಆದರೆ ಕಬೀರನಿಗೆ ಆಕೆಯು ಕೊಡುತ್ತಿದ್ದ ಏಟುಗಳಿಂದ ಆ ಬ್ರಾಹ್ಮಣನ ದೇಹದಮೇಲೆ ಬಾಸುಂಡೆಗಳು ಬಿದ್ದುವು! ರಕ್ತವು ಹೊರಹೊಮ್ಮ ತೊಡಗಿತು. ಅದನ್ನು ಕಂಡು, ನೀಮಾಬೀಯು ಗಾಬರಿಪಟ್ಟು ಕಾರಣವೇನಿರಬಹುದೆಂದು ಆಶ್ಚರ್ಯದಿಂದ ನೋಡಿಕೊಂಡಿರಲು, ಇದ್ದುದಿದ್ದಂತೆಯೇ ಆ ಬ್ರಾಹ್ಮಣನು ಕಾಣದಂತಾಗಿ, ಆ ಸ್ಥಳದಲ್ಲಿ ಶ್ರೀರಾಮಸ್ವಾಮಿಯು, ಕಾಣಿಸಿಕೊಂಡನು. ದಿವ್ಯ ಪೀತಾಂಬರವನ್ನುಟ್ಟು ಎದೆಯಲ್ಲಿ ಕೌಸ್ತುಭಹಾರಪದಕವೂ, ಮಹಾ ಪ್ರಕಾಶಮಾನವಾದ ಕಿರೀಟ ಕುಂಡಲಗಳೂ, ಕೈಗಳಲ್ಲಿ ಪ್ರಚಂಡ ಬಿಲ್ಲುಬಾಣ ಗಳೂ ಒಪ್ಪಿದುವು. ಕಬೀರನು ಒಡನೆ ಆ ದಿವ್ಯಮೂರ್ತಿಗೆ ನಮಸ್ಕಾರ ಮಾಡಿದನು. ಕ್ಷಣಮಾತ್ರದಲ್ಲ ಆ ಮೂರ್ತಿಯೂ ಅದೃಶ್ಯವಾಯಿತು. ನೀಮಾಬೀಗೆ ಬಾಲಕನಮೇಲೆ ಕೋಪವಣಗಿ, ತಾನು ಹೊಡದ ಏಟುಗಳಿಗಾಗಿ ಪಶ್ಚಾತ್ತಾಪವೂ ಕನಿಕರವೂ ಉಂಟಾದುವು. ಮುಂದೆ ಅವರಿಬ್ಬರೂ ಅಲ್ಲಿಂದ ಹೊರಟು ಮನೆಯನ್ನು ಸೇರಿದರು.

ದಿನಗಳು ಕಳೆದಂತೆಲ್ಲಾ ಕಬೀರನ ಮನಸ್ಸು ಹೆಚ್ಚುಹೆಚ್ಚಾಗಿ ಭಗವದ್ವಿಷಯ ವಿಚಾರದಲ್ಲೂ, ಅಧ್ಯಾತ್ಮ ವಿಚಾರದಲ್ಲೂ ಮಗ್ನವಾಗತೊಡಗಿತು. ಕಣ್ಣಿಂದ ನೋಡಿದ್ದೆಲ್ಲವೂ ವಿಚಿತ್ರ ಸ್ವರೂಪದಿಂದ ಕಾಣುವುದು. ಕಬೀರನು ಅವನ್ನೇ ನಟ್ಟದೃಷ್ಟಿಯಿಂದ ನೋಡಿ, ಮಹದಾಶ್ಚರ್ಯಗೊಂಡು, ಒಡನೆ ಅದರ ಮೂಲವೇನಿರಬಹುದೆಂದು ವಿಚಾರಮಗ್ನನಾಗುವನು. ಒಂದಾನೊಂದುದಿನ ಬೀದಿಯಲ್ಲಿ ಹೋಗುತ್ತಿರುವಾಗ್ಗೆ, ಒಬ್ಬ ಬನಿಯಾಕುಲದ ಎಂದರೆ ವೈಶ್ಯಜಾತಿಯ ಹೆಂಗಸು ತನ್ನ ಮನೆಯ ಜಗುಲಿಯ ಮೇಲೆ, ಬೀಸುವಕಲ್ಲನ್ನು ಹಾಕಿಕೊಂಡು, ಗೋಧಿಯನ್ನು ಬೀಸುತ್ತಿದ್ದಳು. ಬೀದಿಯಲ್ಲಿ ಹೋಗುತ್ತಿದ್ದ ಕಬೀರನು, ಅಲ್ಲಿಗೆ ಹೋಗಿ, ಅದನ್ನು ನೋಡುತ್ತಾ ನಿಂತುಕೊಂಡನು. ಗೋಧಿಯ ಕಾಳುಗಳು ಸುತ್ತಿಸುತ್ತಿ ತಿರುಗುತ್ತಿರುವ ಆ ಕಲ್ಲಿನ ಎರಡು ಹೋಳುಗಳ ನಡುವೆ ಸಿಕ್ಕಿ ಪುಡಿಪುಡಿಯಾಗುತ್ತಿರುವುದನ್ನು ಕಂಡು,

ಕಬೀರನು ಮಹಾ ಚಿಂತಾಕ್ರಾಂತನಾಗಿ,—'ಅಕ್ಕಟಾ, ಈ ದುರ್ದೈವಿ ಕಾಳುಗಳು ಆ ಕಲ್ಲುಗಳ ಮಧ್ಯೆ ಸಿಕ್ಕು ಪುಡಿಪುಡಿಯಾಗುವಂತೆಯೇ, ಮನುಷ್ಯರಾದ ನಾವೂ ಸಹ ಸಂಸಾರ ಯಂತ್ರದಲ್ಲಿ ಸಿಕ್ಕು ಹೀಗೆಯೇ ಪುಡಿಪುಡಿಯಾಗಿ ವ್ಯರ್ಥವಾಗುವೆವಲ್ಲವೆ' ಎಂದು ಮನಸ್ಸಿಗೆ ತೋರಲು, ಅಲ್ಲೇನಿಂತು, ಕಣ್ಣುಗಳಿಂದ ನೀರು ಸುರಿಸುತ್ತ, ಬಿಕ್ಕಿಬಿಕ್ಕಿ ಅಳತೊಡಗಿದನು. ಆ ದಾರಿಯಲ್ಲಿ ನಡೆದಾಡುವವರೆಲ್ಲರೂ, ಇವನನ್ನು ನೋಡಿ—'ಏಕೆ ಅಳುತ್ತೀ, ಯಾರೇನು ಮಾಡಿದರು' ಎಂದು ಕಾರಣಗಳನ್ನು ಕೇಳುವರು. ಆದರೆ ಕಬೀರನು, ತನ್ನ ವ್ಯಸನ ಕಾರಣವನ್ನು ಯಾರೊಂದಿಗೆ ಹೇಳಿದರೂ, ಅವರಾರೂ ಅದಕ್ಕೆ ಪ್ರತ್ಯುತ್ತರ ಕೊಟ್ಟು ತನ್ನ ವ್ಯಸನವನ್ನು ಹೋಗಲಾಡಿಸಲಾರರೆಂದು ತಿಳಿದು ಸುಮ್ಮನೆ ವ್ಯಸನಪಡುತ್ತಲಿದ್ದನು. ಜನರೆಲ್ಲರೂ ಆಶ್ಚರ್ಯಪಟ್ಟು ಸುತ್ತಲೂ ನೆರೆದಿದ್ದರು. ಆಗ ನಿಪಾತ್ ಎಂಬೊಬ್ಬ ಸಾಧುವು ಅಲ್ಲಿಗೆ ಬಂದು ಕಬೀರನ ವ್ಯಸನಕ್ಕೆ ಕಾರಣವನ್ನು ಕೇಳಲು, ಕಬೀರನು ಅವನಾದರೆ ತನ್ನ ಪ್ರಶ್ನೆಯನ್ನು ತಿಳಿದುಕೊಳ್ಳಲು ಅರ್ಹನೆಂದು ಗ್ರಹಿಸಿ,—'ಅಕ್ಕಟಾ ಅಲ್ಲಿ ನೋಡು ಆ ಕಾಳುಗಳನ್ನು, ಅವು ಆ ಎರಡು ಕಲ್ಲಿನ ಹೋಳುಗಳ ಮಧ್ಯಕ್ಕೆ ಸಿಕ್ಕು ಪುಡಿಪುಡಿಯಾಗುತ್ತಿವೆಯಲ್ಲಾ-ಹಾಗೆಯೇ ಮನುಷ್ಯನೂ ಸಂಸಾರಚಕ್ರಗಳ ಮಧ್ಯೆ ಸಿಕ್ಕು ನಾಶವಾಗುತ್ತಾನಲ್ಲವೆ? ಎಂದು ವ್ಯಸನಪಡುತ್ತೇನೆ' ಎಂದನು. ಆ ಮಾತನ್ನು ಕೇಳಿದ ಆ ಸಾಧುವು- ಹಸನ್ಮುಖದಿಂದ—'ಅಯ್ಯಾ ಕಬೀರ್ ಚಿಂತಿಸಬೇಡ. ಅಲ್ಲ ನೋಡು ಆ ಎರಡು ಕಲ್ಲುಗಳ ಮಧ್ಯೆ ಚೆನ್ನಾಗಿ ನೋಡು, ಎರಡು ಕಲ್ಲುಗಳ ಮಧ್ಯಭಾಗದಲ್ಲಿ ಒಂದು ಗೂಟವಿದೆಯಲ್ಲವೆ. ಆದರ ಸುತ್ತಲೂ- ಕೆಲವು ಕಾಳುಗಳಿವೆ, ನೋಡು. ಅವು ಕಲ್ಲುಗಳ ಮಧ್ಯೆ ಇದ್ದರೂ ಆ ಗೂಟದ ಪಕ್ಕದಲ್ಲೇ ಅದನ್ನು ಆಶ್ರಯಿಸಿಕೊಂಡಿರುತ್ತಾ, ಕಲ್ಲುಗಳೆರಡರ ಮಧ್ಯೆ ಸಿಕ್ಕು ಪುಡಿಯಾಗದೆ ಉಳಿದಿವೆ. ಹಾಗೆಯೇ ಮನುಷ್ಯನೂ ಸಹ ಸಂಸಾರದ ಮಧ್ಯದಲ್ಲೇ ಇದ್ದರೂ, ಜಗದಾಧಾರ ಸ್ವರೂಪನಾದ ಭಗವಂತನನ್ನು ನಂಬಿಕೊಂಡು ಆತನ ಸಮೀಪದಲ್ಲೇ ಇರುವುದಾದರೆ ಯಾವ ಭೀತಿಯಾಗಲಿ ಯಾವ ಅಪಾಯವಾಗಲೀ ಸಂಭವಿಸಲಾರದು. ಹಾಗೆಯೇ ಇಹಪರಗಳೆಂಬ ಎರಡು ಲೋಕಗಳ ಬಂಧಕಗಳಿಂದಲೂ ದೂರನಾಗುವನು'' ಎಂದು ನುಡಿದನು. ಆ ಮಾತುಗಳನ್ನು ಕೇಳಿದ ಕಬೀರನು ನಿಜವಾಗಿ ಬಹು ಸಂತೋಷ

ಪಟ್ಟನು ಮನಸ್ಸಿಗೆ, ಆ ಕಾಳುಗಳು ಆ ಗೂಟದ ಆಶ್ರಯದಿಂದ ಸುರಕ್ಷಿತ ವಾಗಿವೆಯಲ್ಲಾ ಎಂದು ಪರಮಾನಂದವಾಯಿತು. ಅಲ್ಲಿಂದ ಹೊರಟು ಮೆಲ್ಲಗೆ ಮುಂದಕ್ಕೆ ಸಾಗಿದನು.

ಕಬೀರನು ತನ್ನ ಮನಸ್ಸಿಗೆ ವಿಚಿತ್ರವೆಂದು ತೋರುವ ಈ ಬಗೆಯ ಆಧ್ಯಾತ್ಮ ವಿಚಾರಗಳನ್ನು ಕುರಿತು, ಬಹುಮಂದಿ ಯೋಗಿಗಳು, ಸನ್ಯಾಸಿಗಳು, ಜಂಗಮರು ಫಕೀರರು ಮುಂತಾದವರೊಂದಿಗೆಲ್ಲಾ ಪ್ರಶ್ನೋತ್ತರಗಳನ್ನು ನಡಿಸುವನು. ಆವನ ಭಾವನೆಯಲ್ಲಿ, ಜಾತಿಯಲ್ಲಿ ಒಬ್ಬನು ಹೆಚ್ಚು ಒಬ್ಬನು ಕುಂದು ಎಂದಿರಲಿಲ್ಲ. ಆವನು ಮುಸಲ್ಮಾನ್ ಮೌಲ್ವಿಗಳು ಮುಂತಾದವರೊಂದಿಗೆ, ಹೇಗೆ ಅಧ್ಯಾತ್ಮ ವಿಷಯಗಳನ್ನು ಕುರಿತು ಚರ್ಚಿಸುವನೋ ಹಾಗೆಯೇ ಹಿಂದೂ ಸಾಧು ಸನ್ಯಾಸಿಗಳು ವಿದ್ವಾಂಸರು ಮುಂತಾದವರೊಂದಿಗೂ ಚರ್ಚಿಸುವನು. ಇದರಿಂದ ಆವನಿಗೆ ಭೇದಭಾವವೂ, ಧರ್ಮಸಂಕುಚಿತಭಾವವೂ ನಷ್ಟವಾಗಿ, ಆತನು ಉದಾರಹೃದಯದ ಪರಮಾಸ್ತಿಕ ಭಕ್ತನಾದನು. ಯಾರೊಬ್ಬರ ವಿಷಯದಲ್ಲಾಗಲೀ ಯಾವುದೊಂದು ಪ್ರಾಣಿಗಳ ವಿಷಯದಲ್ಲಾಗಲೀ ಸಹಾಯಮಾಡಲು ಸರ್ವದಾ ಸಿದ್ಧನಾಗಿರುವನು. ಯಾರು ಸಂಕಟಪಡುತ್ತಿದ್ದರೂ ಆವನು ನೋಡಿ ಸಹಿಸಿ-ಸುಮ್ಮನಿರದೆ ತನ್ನ ಕೈಯಲ್ಲಾದ ಸಹಾಯ ಉಪಕಾರಗಳನ್ನು ಮಾಡಲು ಎಂದಿಗೂ ಹಿಂಜರಿಯದೆ ಮುಂದೆ ನುಗ್ಗಿ ತನ್ನಿಂದ ಆದಷ್ಟು ಕಾರ್ಯವನ್ನು ತಪ್ಪದೆ ಮಾಡುವನು. ಹಿಂದೂಗಳೂ ಮಹಮ್ಮದೀಯರೂ, ದೇವರು-ಪರಲೋಕ ಮುಂತಾದುವುಗಳ ವಿಷಯದಲ್ಲಿ ಒಡೆದಾಡುತ್ತಿದ್ದುದನ್ನು ಕಂಡು, ಬಹು ವ್ಯಸನಪಟ್ಟ ಕಬೀರನು, ನಾಮರೂಪಗಳಿಂದ ಭೇದವಿರುವುದಾದರೂ, ಎಲ್ಲವೂ ಒಂದೇ ಭಗವದ್ರೂಪವೆಂದು ಅವರಿಗೆ ತಿಳಿಯಹೇಳುವನು. ಈ ಕೆಳಗಿನ - ಆತನಿಂದ ರಚಿತವಾದ ಕೀರ್ತನೆಯಲ್ಲಿ. ಆ ಸಂಗತಿಯು ವಿಶದವಾಗಿ ಹೇಳಲ್ಪಟ್ಟಿದೆ.

ಭಾಯಿಸಾರೆ! ದುಯಿ ಜಗದೀಶ್ ಕಹಾಸೆ ಆಯೇ ಕಹು ಕೌನೇ ಭರಮಾಯಾ
ಅಲ್ಲಾ ರಾಮ್ ಕರೀಮ್ ಕೇಶವ್ ಹರಿ ಹಜರತ್ ನಾಮ್ ಧರಾಯಾ ೧
ಗಹನಾ ಏಕ್ ಕನಕ್ ತೇ ಗಹನಾ ತಾಮೇ ಭಾವ್ ನದೂಜಾ ಕಹನ್
ಸುನನಕೊ ದುಯಿ ಕರೀ ಥಾಪೆ ಯಕ್ ನಿಮಾಜ್ ಯಕ್ ಪೂಜಾ ೨
ವಹೀ ಮಹಾದೇವ್ ವಹೀ ಮಹಮ್ಮದ್ ಬ್ರಹ್ಮಾ ಆದಮ್ ಕಹೀಯೆ

ಕೋಯಿ ಹಿಂದೂ ಕೋಯಿ ತುರುಕ್ ಕಹಾವೈ ಏಕ್‌ಜಮೀನ್ ರಹಿಯೆ ॥
ವದ್ ಕಿತಾಬ್ ಪಢೈವೆ ಖುತ್ಬಾವೇ ಮೊಲ್ಲಾ ವೇ ಪಾಡೇ ಬಗತ್
ಬಿಗತ್ ಕೈ ನಾಮುಧರಾಯಾ ಯುಕ್ ಮಾಟೀಕೇ ಭಾಂಡೇ
ಕಹತ್ ಕಬೀರ್ ವೇ ದೂನೌ ಭೋಲೇ ರಾಮುಹಿ ಕಿನ ಹುನಪಾಯಾ
ಬೇಖಾಸಿಯಾ ವೇ ಗಾಯ್ ಕಟಾವೇ ಬಾದೈ ಜನ್ಮ ಗವಾಯಾ ೨೪

'ಅಯ್ಯಾ ಬಾಂಧವರೇ ಏಕೆ ಜಡಿದಾಡುವಿರಿ. ಆಭರಣಗಳು ಹಲವು ರೂಪಭೇದಗಳಿಂದ ಮಾಡಲ್ಪಟ್ಟಿದ್ದರೂ, ಅವುಗಳಿಗಾಗಿ ಉಪಯೋಗಿಸಿದ ಬಂಗಾರ ಒಂದೇ ಅಲ್ಲವೇ? ಗಡಿಗೆ ಹರವಿಗಳೆಂದು ಹಲವು ರೂಪಗಳಿಂದ ಮಾಡಿದ್ದರೂ ಅವುಗಳಿಗಾಗಿ ಉಪಯೋಗಿಸಿದ ಮಣ್ಣು ಒಂದೇ ಅಲ್ಲವೆ! ಹಾಗೆಯೇ, ಅಲ್ಲಾ ಎನ್ನಲಿ, ರಾಮನೆನ್ನಲಿ, ರಹೀಮನೆನ್ನಲಿ, ಕೇಶವನೆನ್ನಲೀ, ಹರಿಯೆನ್ನಲಿ, ಹಜರತ್ ಎನ್ನಲಿ ಎಲ್ಲವೂ ಒಂದೇ ಸರ್ವೋತ್ತಮ ದೈವವನ್ನು ಉದ್ದೇಶಿಸುವವು' ಎಂದು ನುಡಿದು ಸಮಾಧಾನ ಗೊಳಿಸಲೆತ್ನಿಸುವನು.

ಕಬೀರನು ಹೀಗೆ ಸದಾ ಆಧ್ಯಾತ್ಮವಿಚಾರದಲ್ಲಿ ತೊಡಗಿ, ಸಮಸ್ತ ಲೌಕಿಕ ವ್ಯಾಪಾರಗಳನ್ನೂ ಭಗವತ್ಪ್ರೀತಾಭಾವನೆಯಿಂದ ಮಾಡುತ್ತ, ಕಂಡುಕೇಳಿದುದೆಲ್ಲ ಭಗವದ್ರೂಪಗಳೆಂದು ಅನುಸಂಧಾನ ಮಾಡುತ್ತ ಇದ್ದನಾದರೂ ಆತನ ಮನಸ್ಸಿಗೆ ತೃಪ್ತಿಯುಂಟಾಗಲಿಲ್ಲ. ಚಿತ್ತಶಾಂತಿಯುಂಟಾಗಲಿಲ್ಲ. ಆಗಲವನು—'ನಾನು ಎಷ್ಟು ಧ್ಯಾನ ಮಾಡಿದರೇನು! ಎಷ್ಟು ಭಜನೆ ಮಾಡಿದರೇನು! ಗುರುವಿನ ದಯೆಯನ್ನು ಗಳಿಸದ ನನಗೆ ಹರಿಯ ದಯೆಯು ಹೇಗುಂಟಾದೀತು? ಹೇಗಾದರಾಗಲಿ,—ಯಾರೊಬ್ಬ ಗುರುವನ್ನು ಆಶ್ರಯಿಸಿ ತನ್ಮೂಲಕ ಭಗವಂತನ ಸಾನ್ನಿಧ್ಯಕ್ಕೆ ಹೋಗಲು ಸುಲಭಮಾರ್ಗವನ್ನು ತಿಳಿಯಬೇಕು. ಹಾಗಲ್ಲದೆ, ಕತ್ತಲಲ್ಲಿ ಕೈಯಾಡಿಸಿ ಹುಡುಕಿದಂತೆ, ಈ ಅಜ್ಞಾನಸ್ಥಿತಿಯಲ್ಲಿ ಏನು ಮಾಡಿದರೆ ಏನು ಪ್ರಯೋಜನ! ಅಜ್ಞಾನ ನಿವಾರಣೆಗೆ ಗುರುವಿನ ಚರಣಾನುಗ್ರಹವಲ್ಲದೆ ಅನ್ಯಥಾ ಉಪಾಯವೇ ಇಲ್ಲ'ವೆಂದು ನಿರ್ಧರಿಸಿದನು. ಆದರೆ, ಬೇಕೆಂದಾಗ ದೊರೆಯಲು ಗುರುವೆಂಬಾತನು ಅಂಗಡಿಯಲ್ಲಿ ದೊರೆವ ಒಂದು ಪದಾರ್ಥ ವಿಶೇಷವೇ! ಶಿಷ್ಯನ ಜೀವನ ಸಂಸ್ಕಾರವನ್ನೂ ಆತ್ಮೋನ್ನತಿಯನ್ನೂ, ಅವನ ಪ್ರಕೃತಿ ಸ್ವಭಾವವನ್ನೂ ತಿಳಿದುಕೊಂಡು, ಆ ವ್ಯಕ್ತಿಯ ದೈಹಿಕ ಆತ್ಮಿಕ-ಲೌಕಿಕ ಪಾರತ್ರಿಕ, ಅಭಿವೃದ್ಧಿಗಳನ್ನು

ಪ್ರಸಾದಿಸುವ ಗುರುವು ಬೇಕೆಂದ ಒಡನೆಯೇ ದೊರೆಯುವನೇ? ಕಬೀರನು ತನ್ನ ಅಶಕ್ತತೆಗಳನ್ನು ತಿಳಿದುಕೊಂಡು, ಅವುಗಳನ್ನು ನೀಗಿಸಿ ಮಾರ್ಗದರ್ಶಕನಾಗಲುಳ್ಳ ಗುರುವಾರೆಂದು ಎಲ್ಲೆಲ್ಲೋ ಹುಡುಕಿದನು. ಕೊನೆಗೆ, ಆಗ ಕಾಶೀಪಟ್ಟಣದಲ್ಲೇಇದ್ದ ಸಾಧುವರ್ಯ ರಾಮಾನಂದರನ್ನು ಶರಣುಹೋಗುವುದೇಪ್ರಥಮೋಪಾಯವೆಂದು ನಿಶ್ಚಯಿಸಿ, ಅವರನ್ನು ಸಮೀಪಿಸಿ- ಅವರ ಅನುಗ್ರಹ ಸಂಪಾದನೆ ಮಾಡುವ ಮಾರ್ಗವಾವುದೆಂದು ಯೋಚಿಸತೊಡಗಿದನು.

ಶ್ರೀರಾಮಾನಂದರು, ಶ್ರೀ ರಾಮಾನುಜಾಚಾರ್ಯರಿಂದ ಸ್ಥಾಪಿತವಾದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸಿದ ಸಾಧುಶ್ರೇಷ್ಠರು. ಇವರ ಜನ್ಮಸ್ಥಾನವು ಮೈಸೂರು ಸಂಸ್ಥಾನದಲ್ಲಿನ ಮೇಲುಕೋಟೆಯೆನ್ನುವರು. ಇವರು ಚಿಕ್ಕಂದಿನಿಂದಲೂ ಶ್ರೀ ರಾಘವಾನಂದರೆಂಬ ಯತಿಶ್ರೇಷ್ಠರನ್ನು ಆಶ್ರಯಿಸಿ, ಅವರಲ್ಲಿ ಶಿಷ್ಯವೃತ್ತಿ ಮಾಡಿ, ವಿಶಿಷ್ಟಾದ್ವೈತಸಿದ್ಧಾಂತದ ಸಮಸ್ತ ವಿಚಾರಗಳಲ್ಲೂ ಚನ್ನಾಗಿ ಶಿಕ್ಷಿತರಾದರು. ತರುವಾಯ ಪುಣ್ಯಕ್ಷೇತ್ರಗಳ ದರ್ಶನಕ್ಕೆಂದು ಹೊರಟು ಉತ್ತರ ಹಿಂದೂಸ್ಥಾನದ ಅನೇಕ ಭಾಗಗಳಲ್ಲಿ ಸಂಚರಿಸಿ, ಕೊನೆಗೆ ಕಾಶೀ ಪಟ್ಟಣವನ್ನೇ ತಮ್ಮ ಮುಖ್ಯ ವಾಸಸ್ಥಾನವನ್ನಾಗಿ ಮಾಡಿಕೊಂಡು ಮಠವನ್ನು ಸ್ಥಾಪಿಸಿದ್ದರು. ಅವರ ಬಳಿ ಅನೇಕ ಶಿಷ್ಯರು ಬಂದು ಸೇರಿ, ಮತವಿಚಾರದಲ್ಲಿ ಶಿಕ್ಷೆಹೊಂದುತ್ತ ಜನ್ಮಸಾರ್ಥಕದ ಮಾರ್ಗವನ್ನು ನೋಡಿಕೊಳ್ಳುತ್ತಿದ್ದರು. ಶಿಷ್ಯಪರಂಪರೆಯ ಮೂಲಕ ಅವರ ಕೀರ್ತಿಯು ದಿನದಿನಕ್ಕೆ ಸುತ್ತಲೂ ವ್ಯಾಪಿಸುತ್ತಿದ್ದಿತು. ತನಗೆ ಮಾರ್ಗದರ್ಶಕನಾದ ಗುರುವೊಬ್ಬರು ಬೇಕೆಂದು ಹಂಬಲಿಸುತ್ತಿದ್ದ ಕಬೀರನಾದರೂ, ಶ್ರೀ ರಾಮಾನಂದರ ಆಶ್ರಯ ಹೊಂದಲಾಶಿಸಿ, ಅನೇಕಸಾರಿ ಅವರೊಂದಿಗೆ ಸಂಭಾಷಣೆ ಮಾಡಬೇಕೆಂದು ಪ್ರಯತ್ನಿಸಿದನು. ಅವರ ದರ್ಶನ ಮಾಡಬೇಕೆಂದು ಹವಣಿಸಿದನು. ಆದರೆ, ಗುರುಗಳ ಹತ್ತಿರದಲ್ಲಿದ್ದ ಉತ್ತಮವರ್ಣದ ಶಿಷ್ಯರು ತುರುಷ್ಕನಾದ ಅವನು, ಬಂದು ತಮ್ಮ ಗುರುಗಳನ್ನು ಕಾಣುವದಾದರೆ, ಅದರಿಂದ ಗುರುಗಳ ಪಾವಿತ್ರ್ಯತೆಗೆ ಲೋಪ ಬರುವುದೆಂದು ಭಾವಿಸಿ, ಅವನಿಗೆ ಗುರುಗಳೊಂದಿಗೆ ದರ್ಶನ ಸಂಭಾಷಣಾದಿಗಳೊಂದಕ್ಕೂ ಅವಕಾಶ ಕೊಡಲಿಲ್ಲ.

ಸ್ವತಃ ರಾಮಾನಂದರು ಪರಮೌದಾರ್ಯ ಸ್ವಭಾವದವರು. ಅವರು ಇವನು ಬ್ರಾಹ್ಮಣ, ಇವನು ಶೂದ್ರ, ಇವನು ತುರುಷ್ಕ, ಇವನು ಚಂಡಾಲ ಎಂಬ ಬಾಹ್ಯ ವ್ಯತ್ಯಾಸಗಳನ್ನೇ ಮುಖ್ಯವಾಗಿ ಗಮನಿಸದೆ, ಅವನವನ ಆತ್ಮದ ಉನ್ನತಿಯನ್ನೂ, ಜನ್ಮ ಪರಿಪಕ್ವತೆಯನ್ನೂ ಕುರಿತು ಲಕ್ಷ್ಯಕೊಡುತ್ತಿದ್ದರು. ಅವರ ದೃಷ್ಟಿಯಲ್ಲಿ, ಮತಾಚಾರ್ಯರುಗಳೂ ಸಾಧುಸಂತರೂ ಬೋಧಿಸಬೇಕಾದುದು ಪಂಡಿತರಿಗಲ್ಲ- ಪಂಡಿತರೂ ವಿದ್ಯಾವಂತರೂ ಗ್ರಂಥಗಳನ್ನು ನೋಡಿ ತಮ್ಮ ಕರ್ತವ್ಯವೇನೆಂಬುದನ್ನು ತಿಳಿದುಕೊಳ್ಳಬಲ್ಲರು; ಅವರುಗಳ ಅಭಿವೃದ್ಧಿಗಾಗಿ ಮತ ಗುರುಗಳು ಮಾಡಬೇಕಾದ ಕಾರ್ಯವು ಬಹು ಸ್ವಲ್ಪ! ಆದರೆ, ವಿದ್ಯಾವಂತರಲ್ಲದ - ಜ್ಞಾನವೆಂಬುದರ ಪ್ರಕಾಶವನ್ನೇ ಕಂಡರಿಯದ ಜನ ಸಾಮಾನ್ಯವನ್ನು ಉದ್ಧರಿಸಬೇಕಾದುದೇ ಸದ್ಯಃಕಾಲದಲ್ಲಿ ಮತ ಗುರುಗಳ ಮುಖ್ಯ ಕರ್ತವ್ಯವಾಗಿದೆ ಎಂಬುದಾಗಿದ್ದಿತು. ಆ ಮಹನೀಯರು, ದಕ್ಷಿಣ ದೇಶದಲ್ಲಿ ಸಮಾಜಾಭಿವೃದ್ಧಿಗೆ ಇರುವ ಅನೇಕ ಬಗೆಯ ಇಂತಹ ಕಗ್ಗಂಟುಗಳನ್ನು ಬಿಡಿಸಿ, ದೇವರು, ಆತ್ಮವಿಚಾರ, ಭಕ್ತಿ, ಭಗವದಾರಾಧನೆ ಮುಂತಾದ ಕಾರ್ಯಗಳಿಗಾಗಿ, ಸಕಲರೂ ಬೆರೆಯಬಹುದಾದಷ್ಟು ಸೌಲಭ್ಯತೆಯನ್ನು ಕಲ್ಪಿಸಿ, ಹಿಂದೂ ಧರ್ಮವನ್ನು ಉದಾರವಾದುದೆನ್ನಿಸಿದ್ದರು. ಅದರ ಕಾರ್ಯಕ್ಷೇತ್ರವನ್ನು ವಿಶಾಲಗೊಳಿಸಿದ್ದರು. ಕೇವಲ ಒಬ್ಬರನ್ನು ಮುಟ್ಟಿದರಾಗಲೀ, ಮಾತನಾಡಿಸಿದರಾಗಲಿ ಕೊನೆಗೆ ನೋಡಿದರಾಗಲೀ ಪಾಪವು-ಅಂಟುಜಾಡ್ಯವೋ ಎಂಬಂತೆ ವ್ಯಾಪಿಸುವುದೆಂಬ ಕ್ಷುದ್ರ—ಸಂಕುಚಿತ ಭಾವವು ಅವರ ಮನಸ್ಸಿನಿಂದ ದೂರವಾಗಿದ್ದಿತು. ಆದುದರಿಂದ ಅವರು ಸಮಾಜವನ್ನು ಸರ್ವ ವಿಧದಿಂದಲೂ ಉದ್ಧರಿಸಲು ಆತುರಗೊಂಡಿದ್ದುದು ಸಾರ್ಥಕ ಕಾರ್ಯವಾಗಿ ಪರಿಣಮಿಸುವುದು ಸುಲಭವಾಗಿದ್ದಿತು. ಆದರೆ, ಅವರ ಪರಿವಾರವೂ ಅವರಷ್ಟುಮಟ್ಟಿಗೆ ಪಕ್ವವಾದ ಮನಸ್ಥಿತಿಯುಳ್ಳುದಾಗಿರಲಿಲ್ಲವಾಗಿ, ಕಬೀರನಂತೆ ಯೋಗ್ಯ ಪಾತ್ರರಾಗಿದ್ದರೂ, ಜಾತಿ ಕುಲಗಳಿಂದ ಹೀನ ಸ್ಥಿತಿಯಲ್ಲಿದ್ದವರು ಅವರ ದರ್ಶನ ಸಂಭಾಷಣಾದಿಗಳಿಗೆ ಅವಕಾಶವಿಲ್ಲದೆ ತೊಂದರೆ ಪಡುವ ಪ್ರಸಂಗವುಂಟಾಯಿತು.

ಕಬೀರನು ಶ್ರೀ ರಾಮಾನಂದರ ವಿಶಾಲ ಮನಸ್ಕತೆಯನ್ನು ಅವರಿವರ ಮೂಲಕ ಅರಿತವನಾಗಿದ್ದರೂ, ಅವರನ್ನು ಸಮೀಪಿಸಿ, ತನ್ನ ಮನದಾಶಯ

ವನ್ನು ಅವರಲ್ಲಿ ವಿಜ್ಞಾಪಿಸಿಕೊಳ್ಳಲು ಸಮಯ ನಿರೀಕ್ಷಣೆ ಮಾಡಿಕೊಂಡಿದ್ದನು. ತುರುಷ್ಕನೊಬ್ಬನು, ಹಿಂದೂಗಳ ಗುರುವನ್ನು ಆಶ್ರಯಿಸಲಿದ್ದಾನೆಂಬುದು ಅವರ ಶಿಷ್ಯರಲ್ಲಿ ಅತಿಶಯ ಅಸಮಾಧಾನವನ್ನೆಬ್ಬಿಸಿ ತನ್ಮೂಲಕ ಅವರು ಸರ್ವ ಪ್ರಯತ್ನದಿಂದ ಅದಕ್ಕೆ ಸಾಧ್ಯವುಂಟಾಗದಂತೆ ನೋಡಿಕೊಳ್ಳ ತೊಡಗಿದರು. ಕಬೀರನಿಗಂತೂ ಅದೂ ಒಂದು ದೊಡ್ಡ ಪರೀಕ್ಷೆಯಾಗಿಯೇ ಏರ್ಪಟ್ಟಿತು. ಅವರನ್ನು ದರ್ಶಿಸಬೇಕೆಂದು, ಎಷ್ಟೋ ದಿನಗಳು, ಎಷ್ಟೋ ಸಂದರ್ಭಗಳನ್ನು ಕಾದನು. ಸಾಧ್ಯವಾಗಲಿಲ್ಲ. ಕೊನೆಗೆ ಒಂದು ಯುಕ್ತಿ ತೋರಿತು. ಅವರು, ಪ್ರತಿದಿನವೂ ಬ್ರಾಹ್ಮೀ ಮುಹೂರ್ತದಲ್ಲೇ ಎದ್ದು ಸ್ನಾನಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದುದು ಪದ್ಧತಿಯಾಗಿದ್ದುದರಿಂದ, ಅವರು ನದಿಯ ಮೆಟ್ಟಿಲಿಗೆ ಬರುವ ವೇಳೆಗೆ ಅವರ ಮಾರ್ಗದಲ್ಲಿ ಮಲಗಿದ್ದು, ಅವರನ್ನು ದರ್ಶಿಸಬೇಕೆಂದು ಯೋಚಿಸಿದನು. ಅದರಂತೆಯೇ, ಒಂದು ದಿನ ಪ್ರಾತಃಕಾಲ ಒಂದು ಮೆಟ್ಟಿಲಿಗೆ ಹೊಂದಿ ಅವರ ಮಾರ್ಗದಲ್ಲಿ ಮಲಗಿಬಿಟ್ಟಿದ್ದನು. ಶ್ರೀ ರಾಮಾನಂದರು, ಸ್ನಾನಕ್ಕೆಂದು ಮೆಟ್ಟಿಲಿಳಿದು ಬರುತ್ತಾ, ಮುಸಕು ಮುಸಕು ಕತ್ತಲಿನಲ್ಲಿ ಮಾರ್ಗವು ಸರಿಯಾಗಿ ಗೋಚರವಾಗದಿರಲು, ಕಾಣದೆ ಒಂದು ಮೆಟ್ಟಿಲಿನ ಕೆಳಗೆ ಮಲಗಿದ್ದ ಅವನನ್ನು ತುಳಿದುಬಿಟ್ಟರು. ಒಡನೆ ಸ್ಪರ್ಶದಿಂದ ಪಾದಕ್ಕೆ ಏನೋ ಮೆದುವಾದ ವಸ್ತುವು ತಗುಲಿದಂತೆ ಬೋಧವಾದುದರಿಂದ ಯಾರನ್ನೋ ತುಳಿದೆನೆಂದುಕೊಂಡು, ಆ ಸಾಧುವರ್ಯರು—'ರಾಮ ರಾಮ' ಎಂದುಚ್ಚರಿಸಿಕೊಳ್ಳುತ್ತಾ ಪಕ್ಕಕ್ಕೆ ಸರಿದರು. ಗುರುಗಳ ಬಾಯಿಂದ ಕೇಳಿದ—'ರಾಮ ರಾಮ' ಎಂಬ ಆ ಮಾತುಗಳೇ ತನಗೆ ಗುರೂಪದೇಶವೆಂದು ಭಾವಿಸಿದ ಕಬೀರನು, ಒಡನೆ ಮೇಲಕ್ಕೆದ್ದು—'ಅವರ ಪಾದಗಳಿಗೆ ದೀರ್ಘದಂಡ ನಮಸ್ಕಾರಮಾಡಿ—'ಮಹಾಪ್ರಭೋ ಗುರುವರ್ಯಾ, ತಮ್ಮ ಪಾದದರ್ಶನವಾಗಬೇಕೆಂದು ಎಷ್ಟೋ ದಿನಗಳಿಂದ ಕಾದಿದ್ದುದಕ್ಕೆ, ಈ ದಿನ ದರ್ಶನ ಮಾತ್ರವಲ್ಲದೆ, ಉಪದೇಶವೂ ಆಗಿ, ಈ ದೀನನ ಜನ್ಮ ಸಾರ್ಥಕವಾಯಿತು. ಪಾದದರ್ಶನದಿಂದ ಧನ್ಯನಾದೆ' ಎಂದು ಪುನಃ ಪುನಃ ನಮಸ್ಕರಿಸಿದನು.

ರಾಮಾನಂದರು ಅಕಸ್ಮಾತ್ತಾಗಿ ಉಂಟಾದ ಆ ವಿಚಾರವನ್ನು ಕಂಡು ಪರಮಾಶ್ಚರ್ಯಪಟ್ಟರು. ಆತನ ಅಪೂರ್ವ ಆಸ್ತಿಕ ಬುದ್ಧಿಗೂ, ಜ್ಞಾನ

ತೃಷ್ಣೆಗೂ ಎಣೆಯಿಲ್ಲವೆಂದುಕೊಂಡರು. ಅಧ್ಯಾತ್ಮಿಕ ಸಿದ್ಧಿಗಾಗಿ ಅಷ್ಟು ಮಟ್ಟಿಗೆ ಕಾತರಗೊಂಡ ಮನಸ್ಥಿತಿಯನ್ನು ಗಳಿಸಿದ ಆತನೇ ಧನ್ಯಜೀವಿಯೆಂದುಕೊಂಡರು. ಮತ್ತು ಆತನನ್ನು ಯುಕ್ತ ವಚನಗಳಿಂದ ಆದರಿಸಿ, ಮುಂದೆ, ಯಾವ ಬಾಧಕವೂ ಇಲ್ಲದೆ ಬೇಕೆಂದಾಗ ತಮ್ಮ ದರ್ಶನ ಸಂಭಾಷಣಾದಿಗಳನ್ನು ನಡೆಸಬಹುದೆಂದು ಅನುಮತಿಯನ್ನು ಕೊಟ್ಟರು. ಕಬೀರನು, ಗುರೂಪದೇಶದಿಂದ ತನ್ನ ಜನ್ಮವು ಸಾರ್ಥಕವಾಯಿತೆಂದು ಪರಮಾನಂದಪಟ್ಟು, ಎಂದಿನಂತೆ ರಾಮಭಜನೆ, ಇಷ್ಟದೈವಧ್ಯಾನ ಮುಂತಾದುವುಗಳಲ್ಲಿ ಮಗ್ನನಾಗಿ ಭಗವತ್ಕೀರ್ತನೆಗಳನ್ನು ಪಾಡಿಕೊಳ್ಳುತ್ತಾ ಕೆಲವು ದಿನಗಳನ್ನು ಕಳೆದನು.



**ಅಧ್ಯಾಯ ೪.** **'ಬೋಧನೆ'**

ತಮ್ಮ ಪವಿತ್ರವಾದ ಶ್ರೀ ರಾಮನಾಮವನ್ನು ತುರುಷ್ಕನೊಬ್ಬನು ಉಚ್ಚರಿಸಿ ಅಪವಿತ್ರಗೊಳಿಸುತ್ತಿರುವನೆಂದು ಹಿಂದೂಗಳೂ, ಕಾಫರರ ದೇವರ ಹೆಸರನ್ನು ಉಚ್ಚರಿಸಿ ತಮ್ಮ ಪವಿತ್ರವಾದ ಮಹಮ್ಮದೀಯ ಮತಕ್ಕೆ ಕಳಂಕಪ್ರಾಯನಾಗಿರುವನೆಂದು ಮಹಮ್ಮದೀಯರೂ ಕಬೀರದಾಸರ ಮೇಲೆ, ಕೋಪಾಕ್ರಾಂತರಾದರು. ಆದರೆ ದಾಸರಾದರೋ ಯಾರೊಬ್ಬರ ಭಯ-ದಯೆಗಳಿಗಾಗಲೀ, ಅಪಾದನೆ ಅನುಗ್ರಹಗಳಿಗಾಗಲೀ ಲಕ್ಷ್ಯಮಾಡದೆ ತಮ್ಮ ಇಷ್ಟ ದೈವವನ್ನು ಮನಸಾರೆ ಭಜಿಸಲು ಗುರುಕೃಪೆಯು ದೊರೆಯಿತಲ್ಲಾ ಎಂಬ ಪರಮಾನಂದದಿಂದ ಸದಾ ತಮ್ಮ ಕೆಲಸದಲ್ಲಿ ತಾವು ನಿರತರಾಗಿದ್ದರು. ಅವರ ನಡೆನುಡಿಗಳು ಜನಸಮಾಜದ ದೃಷ್ಟಿಯನ್ನು ವಿಶೇಷವಾಗಿ ಆಕರ್ಷಿಸುವಂತಿದ್ದುವು. ಅವರು, ಲೌಕಿಕ ಸಾಮಾನ್ಯರಂತೆಯೇ ವಿವಾಹಿತರಾಗಿ ಪತ್ನಿಯೊಂದಿಗೂ ವೃದ್ಧ ಮಾತಾಪಿತೃಗಳೊಂದಿಗೂ. ಆವರೆಗೇ ಜನಿಸಿದ್ದ ಒಬ್ಬ ಮಗನೊಂದಿಗೂ ಇದ್ದು ಎಲ್ಲರಂತೆಯೇ ಪ್ರಪಂಚಯಾತ್ರೆಯನ್ನೂ ಸಾಗಿಸುತ್ತಿದ್ದರು! ಆದರೆ, ಸಂಸಾರದಲ್ಲಿನ ಅವರ ನಡೆವಳಿಕೆಯು ಮಾತ್ರ ಅನೇಕರಿಗೆ ಪರಮಾಶ್ಚರ್ಯಕರವಾದುದಾಗಿದ್ದಿತು. ಅವರು ಕಾಳುಹರಟೆ ಮೂಳು ಪ್ರಸಂಗಗಳಿಗೆ ಯಾರೊಬ್ಬರೊಂದಿಗೂ ಬೆರೆಯದೆ, ಸದಾ ತಮ್ಮಾ ಬಡತನದ ಗೃಹಕೃತ್ಯ ನಿರ್ವಾಹಕ್ಕಾಗಿ ತಮ್ಮ ಕುಲ ವೃತ್ತಿ

ಯಲ್ಲಿ ನಿರತರಾಗಿರುವರು. ಆದರೆ ಆ ಕೆಲಸವನ್ನು ಕೇವಲ ಭಗವತ್ಸೇವೆ ಎಂಬ ಭಾವನೆಯಿಂದಲೇ ಮಾಡುತ್ತ, ಸದಾ ಶ್ರೀ ರಾಮನ ಪವಿತ್ರ ನಾಮೋಚ್ಚಾರಣೆಯಲ್ಲೇ ಮಗ್ನರಾಗಿರುವರು. ಅವರ ಬಾಯಿಂದ ಬರುವ ಪ್ರತಿಯೊಂದು ಮಾತೂ ಬಹು ಅರ್ಥ ಗರ್ಭಿತವಾಗಿಯೂ, ಗುಂಭಾರ್ಥದಿಂದ ಕೂಡಿದುದಾಗಿಯೂ ಇದ್ದು ಅವರ ಮನಸ್ಸು ಹೇಗೆ ಸದಾ ತತ್ವ ಚಿಂತನೆಯಲ್ಲೇ ಲೀನವಾಗಿರುವುದೆಂಬುದನ್ನು ಸೂಚಿಸುವಂತೆ ತೋರುವುದು. ಅವರ ಬಾಯಿಂದ ಎಂದೂ ಒಂದು ಬಿಡಿನುಡಿಯೂ ಹೊರಟುದಿಲ್ಲ. ಯಾವನೊಬ್ಬನ ಮೇಲೆ ದ್ವೇಷಭಾವವನ್ನಾಗಲೀ ದೋಷಾರೋಪಣೆಯನ್ನಾಗಲೀ ವ್ಯಕ್ತಪಡಿಸುವ ಒಂದು ನುಡಿಯಾದರೂ ಅವರ ಪವಿತ್ರವದನದಿಂದ ಹೊರಬಿದ್ದುದಿಲ್ಲ. ಮನಸ್ಸಿನಲ್ಲಿ ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಗೆ ಪ್ರವೇಶವಿದ್ದರಲ್ಲವೆ ಅವುಗಳ ಫಲವು ನುಡಿನೋಟಗಳ ಮೂಲಕವಾಗಿ ಹೊರಬೀಳುವುದು! ಅವರ ಹೃದಯದಲ್ಲ ಕೋಪತಾಪಾದಿಗಳು ದಹನವಾಗಿ ಅವುಗಳ ಬೂದಿಯ ರಾಸಿಯನ್ನೇ ಗೊಬ್ಬರವಾಗಿ ಉಪಯೋಗಿಸಿ, ಆ ಸ್ಥಳದಲ್ಲ ದಯೆ ಮಮತೆಗಳೆಂಬ ಅಮೃತ ಬೀಜಗಳು ನಾಟಲ್ಪಟ್ಟಿದ್ದವು. ಆ ಬೀಜಗಳು ಶ್ರೀ ರಾಮಚಂದ್ರಮೂರ್ತಿಯ ನಾಮೋಚ್ಚಾರಣೆಯೆಂಬ ವರ್ಷಜಲಶೇಚನೆಯಿಂದ ದಿನ ದಿನಕ್ಕೆ ಬೆಳೆದು ಅಗಾಧವಾದ ವೃಕ್ಷಗಳಾಗಿದ್ದುವು. ಅವರ ಬಳಿಗೆ ಹೋದವರು,-ಇವರವರೆಂಬ ಭೇದವಿಲ್ಲದೆ ಯಾರಾದರೂ, ಆ ಅಮೃತ ಫಲಗಳನ್ನು ಪಡೆಯಬಹುದಾಗಿದ್ದಿತು. ದಾಸರು, ಸದಾ ತತ್ವ ಚಿಂತನೆಯಿಂದ ಸಮಸ್ತ ಪ್ರಾಪಂಚಿಕ ವಿಚಾರಗಳನ್ನೂ ದೈವಿಕಮಯವನ್ನಾಗಿ ಮಾಡಿಬಿಟ್ಟಿದ್ದರು. ಯಾವ ಸಂಗತಿಯಾದರೂ ದೈವಿಕಭಾವದಿಂದಲ್ಲದೆ. ಅನ್ಯಥಾ ದೃಷ್ಟಿಯಿಂದ ಅವರಿಗೆ ಗೋಚರವಾಗುತ್ತಲೇ ಇರಲಿಲ್ಲ. ಶ್ರೀ ರಾಮಾನಂದರು, ತಮ್ಮ ಶಿಷ್ಯರ ಆತ್ಮಾಭಿವೃದ್ಧಿಯನ್ನೂ, ಅವರ ಹೃದಯ ಪರಿಶುದ್ಧ್ಯತೆಯನ್ನೂ ಕಂಡು ಪರಮ ಸಂತುಷ್ಟರಾಗಿದ್ದರು. ಸರ್ವಸಾಮಾನ್ಯವೆಂಬಂತೆ ತೋರಿದರೂ, ಬಹು ಗೂಢಾರ್ಥ ಗರ್ಭಿತವಾಗಿರುತ್ತಿದ್ದ ಅವರ ಮಾತುಗಳನ್ನು ಕೇಳಿ, ಕರ್ಣಾನಂದವನ್ನು ಹೊಂದುತ್ತಿದ್ದರು. ಆ ಧನ್ಯ ಜೀವಿಯ ಸೌಮ್ಯಮೂರ್ತಿಯನ್ನು ಕಂಡು ಭಗವದ್ಭಕ್ತರನ್ನು ದರ್ಶನ ಮಾಡಿದ ತಮ್ಮ ಕಣ್ಣುಗಳು ಸಾರ್ಥಕವಾದುವೆಂದುಕೊಳ್ಳುತ್ತಿದ್ದರು.

ಹೀಗಿರುವಲ್ಲಿ ಕೆಲವುದಿನಗಳ ಮೇಲೆ ಕಾಶೀಪಟ್ಟಣಕ್ಕೆ ಸರ್ವಜಿತ್ ಎಂಬೊಬ್ಬ ಪಂಡಿತನು ಬಂದನು. ಆತನು ಸಕಲಶಾಸ್ತ್ರ ಪಾರಂಗತನಾಗಿ, ವೇದಾಂತದಲ್ಲಿ ದಿಗ್ದಂತಿಯಾಗಿ ಪರವಾದಿ ಭಯಂಕರನೆನ್ನಿಸಿಕೊಂಡು, ತನ್ನನ್ನು ಜಯಿಸುವವರು ಯಾರೂ ಇಲ್ಲವೆಂಬುದನ್ನು ಸೂಚಿಸುವುದಕ್ಕಾಗಿ ತನ್ನ ಬಿರುದೆಂದು ಚಿನ್ನದ ಗಂಟೆಯನ್ನು ಕಟ್ಟಿಸಿಕೊಂಡಿದ್ದನು. ಅವನ ಪಾಂಡಿತ್ಯವನ್ನು ಕುರಿತು, ಕಾಶೀನಗರದ ಪಂಡಿತರೆಲ್ಲರೂ ಮಹದ್ಯೋಚನೆಗೆ ಒಳಗಾದರು. ನೂರಾರು ಸಭೆಗಳಲ್ಲಿ ಸಹಸ್ರಾರುಮಂದಿ ಪಂಡಿತರೊಂದಿಗೆ ವಾದಿಸಿ ಅಜೇಯನೆಂದು ಮೇಲುಗೈಯಿಂದ ಬಂದಿದ್ದ ಆತನೊಂದಿಗೆ ವಾದಕ್ಕೆ ಕುಳಿತು ಜಯಿಸುವ ಉಪಾಯವಾವುದೆಂದು ಮಹದ್ಯೋಚನೆಯಲ್ಲಿ ತೊಡಗಿದರು. ಎಷ್ಟು ಹೊತ್ತು ಯೋಚಿಸಿದರೂ, ಏನೂ ತೋರದಿರಲು, ಎಲ್ಲರೂ ನೇರ ಶ್ರೀ ರಾಮಾನಂದರ ಸಮೀಪಕ್ಕೆ ಬಂದರು. ರಾಮಾನಂದರು, ಭೀತರಾಗಿ ಬಂದ ಅವರನ್ನು ಆದರಿಸಿ, ಅಭಯವಿತ್ತು, ಆ ಪಂಡಿತನೊಂದಿಗೆ ವಾದಮಾಡಲು, ತಮ್ಮ ಶಿಷ್ಯಶ್ರೇಷ್ಠರಾದ ಶ್ರೀ ಕಬೀರದಾಸರನ್ನು ನಿಯಮಿಸಿದರು. ದಾಸರು ಆ ದಿಗ್ದಂತಿ ಪಂಡಿತನಿಗೆ ಅಭಿಮುಖವಾಗಿ ಕುಳಿತು ವಾದಿಸುವಂತಹ ಪಂಡಿತರಲ್ಲವಾದರೂ ಗುರುಗಳ ಆಜ್ಞೆಯಾದುದರಿಂದ ಉಪಾಯವಿಲ್ಲದೆ ಕೊನೆಗೆ ಸಮ್ಮತಿಸಿದರು. ಸರ್ವಜಿತ್ ಪಂಡಿತನು, ತನ್ನ ಪಾಂಡಿತ್ಯ ಪ್ರೌಢಿಮೆಗಳು ಮೆರೆಯುವಂತೆ, ಬಹು ಅಟ್ಟಹಾಸದಿಂದ ಬಂದು ಕುಳಿತು. ಶಾಠ್ಯದಿಂದ ಪ್ರಶ್ನೆಗಾರಂಭಿಸಿದನು. ಎದುರಾಳಿಯ ಸೌಮ್ಯರೂಪವೂ, ದಂಭ ಅಹಂಕಾರಾದಿಗಳ ಸೋಂಕನ್ನೇ ಅರಿಯದ ಅವರ ನಡೆವಳಿಕೆಯೂ, ಆತನ ದೃಷ್ಟಿಯಲ್ಲಿ ದಾಸರ ವ್ಯಕ್ತಿ ಗೌರವವನ್ನೇ ಹೋಗಲಾಡಿಸಿತು. ಆಗ ಆತನು ಎದುರಿಗೆ ಕುಳಿತ ಅವರನ್ನು ಬಹು ತುಚ್ಛಭಾವದಿಂದ ಕಂಡು, ಅವರನ್ನು ಕುರಿತು—" ಎಲೈ ನೀನು ಯಾರು ಮತ್ತು ಯಾವ ಕುಲದವನು ? " ಎಂದು ಪ್ರಶ್ನಿಸಿದನು. ದಾಸರು ತಮ್ಮದು ನೇಯಿಗೆಯವರ ಕುಲವೆಂದರು. ಆ ಪಂಡಿತನು ಬ್ರಾಹ್ಮಣನಲ್ಲದ ಆತನೊಂದಿಗೆ ವಾದಿಸಲು ಹೇಸಿದವನಂತೆ " ಎಲೈ ನೇಯ್ಗೆಯವನು ಬ್ರಾಹ್ಮಣರೊಂದಿಗೆ ವಾಕ್ಯಾರ್ಥ ವಿಚಾರಕ್ಕೆ ಬರುವುದೆಂದರೇನು ? ಇದು ಸಮನಲ್ಲ" ಎಂದನು. ಅದನ್ನು ಕೇಳಿದ ಕಬೀರನು, ಹಸನ್ಮುಖದಿಂದ ಆತನನ್ನು ಕುರಿತು, ನೆರೆದಿದ್ದ ಪ್ರಚಂಡ ಸಭೆಯ ಎದುರಿಗೆ-' ಕೇಳಯ್ಯ, ನೇಯ್ಗಾರನ ವಿಚಾರವೇನೆಂಬುದನ್ನು,

ಸೀಸಪದ್ಯ:—ಪಾರವಿಲ್ಲದರೀತಿಯೊಳು ಹಾಸುಹೊಕ್ಕುಗಳ ಸೇರಿಸುತ
ತನ್ನಿಷ್ಟಬಂದತೆರದಿ|
ತೋರುವೀಭೂಮಿಯಾಕಾಶಗಳ ನೇಯಿಗೆಯ ಚಾರುಶಾಲೆಯ
ನೆ ಮಾಡುತ್ತ ಮುದದಿ||
ಬಾರಿಬಾರಿಗೆ ಚಂದ್ರ ಸೂರ್ಯರೆಂಬೆರಡನ್ನು ಮೇರೆದಪ್ಪದ
ಲಾಳಿಗೈದು ಜವದಿ|
ಈರೇಳುಲೋಕಂಗಳೆಂದೆಂಬ ವಸ್ತ್ರವನು ಚಾರುಚಾತುರ್ಯದಿಂ
ನೇಯ್ವಂದದಿ||

ಜೂಲಮಹಿಮೆಯನೆ ತೋರಿರ್ಪುದಿನ್ನು
ಧಾರುಣಿಯ ನರನಾವನರಿವನಿನ್ನು
ವಾರಿಜಾಂಬಕನೆನಿಸಿದಾತನನ್ನು
ಪಾರಸೇವಿಸುತಿಹ ಕಬೀರ ನಿವನು!

'ಭರತಖಂಡದ ಜೀವಜ್ಯೋತಿಗಳು ಗ್ರಂಥದಿಂದ ಉದ್ಧೃತ.'

ಕಬೀರದಾಸರು ಹೇಳಿದ ಈ ಪ್ರತ್ಯುತ್ತರವು ಆ ಪಂಡಿತನನ್ನು ಬೆರಗುಗೊಳಿಸಿತು. ನೋಡಲು ಕೇವಲ ಹುಚ್ಚನಂತಿದ್ದರೂ, ಭಗವದ್ವಿಚಾರದಲ್ಲಿ ಆತನಿಗಿದ್ದ ಪ್ರಜ್ಞೆಗಾಗಿಯೂ, ಪ್ರಪಂಚವನ್ನೇ ಪರಮಾತ್ಮನ ಕಾರ್ಯಶಾಲೆಯನ್ನಾಗಿ ತಿಳಿದಿದ್ದ ಆತನ ತತ್ವವಿಚಾರ ಪ್ರವೀಣತೆಗಾಗಿಯೂ ಪರಮಾನಂದಪಟ್ಟು, ವೇದಾಂತ ವಿದ್ಯಾ ಮೂಲಕವಾಗಿ, ವೇದವೇದ್ಯನಾದ ಶ್ರೀಹರಿಯ ಪಾದಾರವಿಂದಗಳನ್ನು ಕಾಣಲರಿಯದೆ, ಕೇವಲ ಉದರಂಭರಣಕ್ಕಾಗಿಯೂ, ಕೀರ್ತಿ ಪ್ರತಿಷ್ಠೆಗಳಿಗಾಗಿಯೂ, ಆ ದೇವವಿದ್ಯೆಯನ್ನು ಉಪಯೋಗಿಸಿಕೊಳ್ಳುತ್ತಿದ್ದ ತನ್ನ ಹೀನಜೀವಿತವನ್ನು ಕುರಿತು ಬಹು ನಾಚಿಕೆಗೊಂಡನು. ನೆರೆದ ಜನಗಳೆಲ್ಲರೂ ಕಬೀರದಾಸರ ಪ್ರತಿಭೆಗಾಗಿ ಪರಮಾನಂದಗೊಂಡರು.

ಕಬೀರದಾಸರ ಬೋಧನಾ ರಹಸ್ಯವನ್ನೂ ಅದರಲ್ಲಿದ್ದ ಮಾಧುರ್ಯವನ್ನೂ ಕಂಡುಕೊಂಡ ಜನಸಾಮಾನ್ಯವು, ಮೇಲೆಮೇಲೆ ಗುಂಪುಗುಂಪಾಗಿ ಅವರ ಬಳಿಗೆ ಬಂದು ಅವರ ಬೋಧನೆಗಳನ್ನು ಕೇಳಲು ಆತುರಗೊಳ್ಳಲಾರಂಭಿಸಿತು. ದಾಸರಾದರೋ, ಅರ್ತನಾಗಿ ಬಂದು ದೇಹಿ ಎಂದವನಿಗೆ ನಾಸ್ತಿ ಎನ್ನಲರಿಯದ ಉದಾರಿಯಂತೆ, ಭಗವನ್ನಾಮಾಮೃತವನ್ನೂ, ಧರ್ಮಾ

ವೃತವನ್ನೂ, ಲೌಕಿಕ ನೀತಿಯನ್ನೂ, ಪಾರತ್ರಿಕಕ್ಕೆ ಸಾಧನವಾದ ಸಾರ್ಥಕ ನಡವಳಿಕೆಯ ವಿಧಾನವನ್ನೂ, ಸಜ್ಜನ ಸಮ್ಮತವಾದ ಸನ್ಮಾರ್ಗವನ್ನೂ ಕೇಳಲಾತುರಗೊಂಡು ಬರುವ ಜನರಿಗೆ ತಮ್ಮ ಕಾರ್ಯಸ್ಥಾನವಾದ ಸೇಯ್ಗೆಯ ಮಗ್ಗದ ಬಳಿಯಲ್ಲಿಯಾಗಲಿ ಅಂಗಡಿ ಬೀದಿಯಲ್ಲಿಯಾಗಲೀ ಹತ್ತಾರು ಮಂದಿ ನೆರೆಯಲರ್ಹವಾದ ಬಹಿರಂಗ ಸ್ಥಳಗಳಲ್ಲಾಗಲಿ, ಹೀಗೆ ಎಲ್ಲೆಂದರಲ್ಲಿ ಸಿಂತು· ಉಚ್ಚಸ್ವರದಿಂದ ಬೋಧನೆ ಮಾಡುವರು.

ಭಗವಂತನ ಕೃಪೆಯನ್ನು ಗಳಿಸುವುದಕ್ಕೆ ಮತಸಂಬಂಧವಾಗಿ ಏರ್ಪಟ್ಟಿರುವ ಹಲವು ಬಾಹ್ಯಾಚರಣೆಗಳಿಗಿಂತಲೂ, ಹೃದಯಾಂತರ್ಗತವಾದ ನಿರ್ಮಲ ಭಕ್ತಿಯೇ ಪ್ರಧಾನ ಸಹಕಾರಿಯೆಂಬುದನ್ನು ಕುರಿತು, ಶ್ರೀದಾಸರು ಒಂದು ಪದದಿಂದ ನುಡಿದಿರುತ್ತಾರೆ. ಅದನ್ನು ಈ ಕೆಳಗೆ ಕೊಡುತ್ತೇವೆ.

ರಾಮನಾಮ ತೂ ಭಜರೇ ಪ್ಯಾರೇ ಕಾಯಕು ಮಗರುರಿ ಕರತಾಹ್ಯೆ
ಕಚೇ ಮಟೀಕಾ ಬಂಗಲಾ ತೇರಾ ಪಾಪ ಪಲಕಮೇ ಗಿರತಾಹ್ಯೆ ೧
ಬ್ರಾಮ್ಮನ್ ಹೋಕರ್ ಪೋಥೀ ಬಾಚೇ ಇಸ್ನಾನ್ ತರ್ಪಣ ಕರತಾಹ್ಯೆ
ಸಬ್ ಕಾಲ್ ಸುಂಚಲ್ ಘುಮೇ ರಹತಾ ಯಾಂಕ್ಯಾ ಸಾಹೇಬ್
ಮಿಲ್ತಾಹ್ಯೆ ೨
ಜೋಗೀ ಹೋಕರ್ ಜಟಾಬಡಾವೇ ಹಾಲ್ ಮಸ್ತಮೇ ರಹತಾಹ್ಯೆ
ದೋನೋಹಾತ್ ಶಿರಪರ್ ಧರಕೇ ಯಾಂಕ್ಯಾ ಸಾಹೇಬ್ ಮಿಲ್ತಾಹ್ಯೆ ೩
* ಮಾನಭಾವಹೋಕರ್ ಕಾಲೇಕಪಡೇ ದಾಡೀಮುಚ್ಛೇ ಮುಂಡತಾಹ್ಯೆ
ಉಲಟೀ ಲಕಡೀ ಹಾತ್ಮೇ ಪಕಡೀ ಯಾಂಕ್ಯಾ ಸಾಹೇಬ್ ಮಿಲ್ತಾಹ್ಯೆ ೪
ಮುಲ್ಲಾಹೋಕರ್ ಬಾಂಗ್ ಪುಕಾರೇ ಓಕ್ಯಾ ಸಾಹೇಬ್ ಬಹಿರಾಹ್ಯೆ
ಮುಂಗಿಕೇ ಪಾವ್‌ಮೇ ಘುಂಗುರುಬಾಜೇ ಓಬೀ ಅಲ್ಲಾ ಸುನತಾಹ್ಯೆ ೫
ಜಂಗಮ್ ಹೋಕರ್ ಲಿಂಗ ಬಾಂಧೆ ಘರ್‌ಘರ್ ಫೇರಿ ಫಿರತಾಹ್ಯೆ
ಶಂಖ ಬಜಾಕರ್ ಭಿಕಾಮಾಗೇ ಯಾಂಕ್ಯಾ ಸಾಹೇಬ್ ಮಿಲ್ತಾಹ್ಯೆ ೬
ಕಹತ್ ಕಬೀರಾ ಸುನಭಾಯಿ ಸಾಧು ಮನಕೇ ಮಾಲಾ ಜಪತಾಹ್ಯೆ
ಭಾವಬಗತಸೇಧ್ಯಾನ ಧರತಹ್ಯೆ ಉಸಕೂ ಸಾಹೇಬ್ ಮಿಲ್ತಾಹ್ಯೆ ೭

---

* ಮಾನಭಾವ ಮತ ಅಥವ ಮಹಾನುಭಾವ ಮತ ಎಂದು ಉತ್ತರ ದೇಶದಲ್ಲಿ ಪ್ರಚಾರದಲ್ಲಿರುವ ಒಂದು ಮತ.

ಎಂದರೆ—"ಎಲೈ ಮಿತ್ರನೇ ರಾಮನಾಮವನ್ನು ಧ್ಯಾನಮಾಡು. ಏಕೆ ಅಹಂಕಾರ ಪಡುತ್ತೀಯೆ! ಹಸೀ ಮಣ್ಣಿನಿಂದ ಕಟ್ಟಿದ ಮನೆಯು ಬಹು ಕಾಲ ಇರದಂತೆಯೇ ನಿನ್ನ ಈ ದೇಹವಾದರೂ ಕ್ಷಣಿಕವಾದುದು. ೧

ನಿತ್ಯವೂ ಪಾರಾಯಣ ಸ್ನಾನ ತರ್ಪಣ ಇವುಗಳನ್ನು ಮಾಡುತ್ತ ನಿಶ್ಚಲನಾಗಿ ಸದಾ ಮನೆಯಲ್ಲೇ ಇದ್ದರೆ ಅಂತಹ ಬ್ರಾಹ್ಮಣನಿಗೆ ಭಗವಂತನು ದೊರಕುವನೆ? ೨

ಜಡೆಯನ್ನು ಬೆಳೆಸಿಕೊಂಡು ಡಂಭಯುಕ್ತವಾದ ಮೌನವನ್ನು ತಾಳಿ ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು ನಿಂತಿರುವ ಜೋಗಿಗೆ ದೇವರು ದೊರಕುವನೆ? ೩

ಜನಗಳಲ್ಲಿ ಪೂಜ್ಯನೆಂದು ಪ್ರಸಿದ್ಧನಾಗಬೇಕೆಂದು ಗಡ್ಡಮೀಸೆಗಳನ್ನು ಬೋಳಿಸಿಕೊಂಡು, ಕಾವೀ ಬಟ್ಟೆಯನ್ನು ಸುತ್ತಿಕೊಂಡು ದಂಡವನ್ನು ಹಿಡಿದುಕೊಂಡರೆ ಅದರಿಂದ ದೇವರು ದೊರಕುವನೆ? ೪

ಮಹಮ್ಮದೀಯ ಮತಸ್ಥರಾದ ಮುಲ್ಲಾಗಳು ಅಷ್ಟು ಗಟ್ಟಿಯಾಗಿ ಅರಚಿಕೊಳ್ಳಬೇಕಾದ್ದೇಕೆ? ಏನು ಭಗವಂತನು ಕಿವುಡನೆ? ಇರುವೆಯು ನಡೆದರೆ ಉಂಟಾಗುವ ಶಬ್ದವು ಕೂಡ ದೇವರಿಗೆ ಕೇಳಿಸುತ್ತದೆ! ೫

ಜಂಗಮನಾಗಿ ಲಿಂಗವನ್ನು ಧರಿಸಿ ಮನೆ ಮನೆ ತಿರುಗಿಕೊಂಡು, ಶಂಖವನ್ನೂದಿ ಭಿಕ್ಷಾಟನೆ ಮಾಡುವವನಿಗೆ ಭಗವಂತನು ದೊರಕುವನೆ? ೬

ಓ ಸಾಧು ಜನಗಳೇ, ಕಬೀರನು ಹೇಳುವ ಈ ಮಾತನ್ನು ಕೇಳಿರಿ. ಯಾವನಾದರೆ ಮನಸ್ಸನ್ನೇ ಜಪಮಾಲೆಯನ್ನಾಗಿ ಮಾಡಿಕೊಂಡು, ಭಾವಭಕ್ತಿಗಳಿಂದ ಧ್ಯಾನಮಾಡುವನೋ ಅವನಿಗೆ ಮಾತ್ರವೇ ಭಗವಂತನು ದೊರಕುವನು." ೭

ಕಬೀರದಾಸರಿಂದ ವಿರಚಿತವಾದ ಪ್ರತಿಯೊಂದು ಕೀರ್ತನೆಗೂ ಕೊನೆಯ ಚರಣಕ್ಕೆ 'ಕಹತ್ ಕಬೀರಾ' ಎಂಬ ಮುದ್ರಿಕೆಯು ಒಪ್ಪುತ್ತಿರುವುದು.

ಮನಸ್ಸೊಂದು ಶುದ್ಧವಾದರೆ, ಅದರಿಂದ ಸಮಸ್ತ ವಿಧವಾದ ಪಾವಿತ್ರ್ಯತೆಯೂ ಲಭ್ಯವಾಗುವುದೆಂಬುದನ್ನು ಆ ಮಹಾನುಭಾವರು ಮತ್ತೊಂದು ಕೀರ್ತನೆಯಿಂದ ಹಾಡಿದ್ದಾರೆ.

ತೀರಥ ಕೋನಕರೆ, ಹಮಾರೋ ತೀರಥ ಕೋನಕರೆ ಪ.
ಮನಮೇಗಂಗಾ, ಮನಮೇಕಾಶೀ, ಮನಮೇಸ್ನಾನಕರೆ-ಹಮಾರೋ ೧
ಮನಮೆ ಆಸನ, ಮನಮೆ ಕಷಾಸನ, ಮನಮೆ ಮೌನಧರೆ-ಹಮಾರೋ ೨
ಮನಮೆ ಮಾಲಾ, ಮನಮೆ ಮುದ್ರಾ, ಮನಮೆ ಧ್ಯಾನಧರೆ-ಹಮಾರೋ ೩
ಕಹತ್ ಕಬೀರಾ, ಸುನಭಾಯಿಸಾಧೂ, ಭಟಕತ ಕೋನಫಿರೆ-ಹಮಾರೋ ೪

ಎಂದರೆ 'ತೀರ್ಥಗಳನ್ನು ಯಾರು ಉಂಟುಮಾಡಿದರು? ಗಂಗಾ, ಕಾಶಿ, ಸ್ನಾನ, ಆಸನ, ಕಷಾಸನ, ಮೌನ, ಮಾಲಾ, ಮುದ್ರಾ, ಧ್ಯಾನ ಈ ಸಮಸ್ತವೂ ಮನಸ್ಸಿನಲ್ಲೇ ಅಣಗಿ ಇರಲಿಕ್ಕಾಗಿ, ಹುಚ್ಚು ಹಿಡಿದವರಂತೆ ಇಲ್ಲಿ ಅಲ್ಲಿ ಅಲೆಯಬೇಕೇತಕ್ಕೆ?' ಎಂದು ನುಡಿದಿರುವರು.

ಗುರುಭಕ್ತಿ ವಿಷಯದಲ್ಲಿ ಅವರು ನುಡಿದಿರುವ ವಾಕ್ಯವೂ ಮನನಾರ್ಹವಾಗಿದೆ.

ಗುರೂಕು ಶರಣ್ ನಹಿಗಯಾ ಮಾ ಬಾಪಸೆ ಜೂದಾರಹ್ಯಾ
ಅವರತ್ಕು ಪ್ಯಾರಾ ಭಯಾ ಗಯಾ ಗಯಾತೋ ಕ್ಯಾಹುವಾ ೧
ಅಹಂಕಾರತೋ ಉಡಾನಹೀ ಶಾಂತಿಮೊ ಮನ ಗಧಾನಹೀ
ಬ್ರಹ್ಮರೂಪಸೆ ಜಡಾನಹೀ ಪೋತೀ ಪಢಾತೋ ಕ್ಯಾಹುವಾ ೨

ಎಂದರೆ—"ಗುರುವಿಗೆ ಭಕ್ತಿಯಿಂದ ಶರಣಾಗತನಾಗದೆ, ಹೆಂಡತಿಯಲ್ಲಿ ಮೋಹವನ್ನಿಟ್ಟುಕೊಂಡ- ತಾಯಿತಂದೆಗಳವಿಷಯದಲ್ಲಿ ದ್ವೇಷವನ್ನು ವಹಿಸಿರುವವನು, ಗಯಾಕ್ಕೆ ಹೋಗಿ ಯಾತ್ರೆಮಾಡಿದರೆ ಅದರಿಂದ ಬಂದ ಫಲವೇನು?

ಯಾವನ ಅಹಂಕಾರವು ಅಣಗಲಿಲ್ಲವೋ, ಮನಸ್ಸು ಶಾಂತಿಯಲ್ಲಿ ಮಗ್ನವಾಗಿ, ಬ್ರಹ್ಮರೂಪದಲ್ಲಿ ಸೇರಲಿಲ್ಲವೋ ಅಂಥವನು ಪಾರಾಯಣ ಮಾಡಿದರೆ ಮಾತ್ರ ಏನು ಪ್ರಯೋಜನ."

ದೇವರು ಅಲ್ಲಿ ಇಲ್ಲ ಇರುವನೆಂದಲ್ಲ ಸರ್ವಾಂತರ್ಯಾಮಿಯೆಂಬರ್ಥವನ್ನು ಅವರು ಹೀಗೆಂದು ನುಡಿದಿದ್ದಾರೆ.

ಲಲಿತರಗಳೆ—'ಎಲೆ ಮನುಷ್ಯನೆ ನನ್ನನೆಲ್ಲಿ ಹುಡುಕುವೆ ನೀನು
ಬೆಳಗುತಿಹೆ ನಿನ್ನ ಹೃದಯದೊಳು ನಿತ್ಯವು ನಾನು

ಕೈಲಾಸದೊಳು ಕಾಬದೊಳು ನೋಡೆ ನಾನಿಲ್ಲ
ಕೇಳು ಗುಡಿಯೊಳು ಮಸೀತಿಯೊಳಡಗಿಹನಲ್ಲ
ಕರ್ಮದೊಳಗಿಲ್ಲ ವಾಚಾರ ವರ್ಗದೊಳಿಲ್ಲ
ಪೇರ್ಮೆಯಾ ಯೋಗಾಂಗಗಳಿಗೆ ದಕ್ಕುವನಲ್ಲ
ಎಲೆ ಕಬೀರಾ ಹುಡುಕಿದವರಿಗೊಲಿವಂಥವನು
ತಿಳಿನೀನು ಪ್ರಾಣಕ್ಕೆ ಪ್ರಾಣನಾಗಿಹೆ ನಾನು ||

'ಭರತ ಖಂಡದ ಜೀವಜ್ಯೋತಿಗಳು' ಗ್ರಂಥದಿಂದ ಉಧೃತ

ತೀರ್ಥಕ್ಷೇತ್ರಗಳ ಯಾತ್ರೆಗಳೆಂಬುವನ್ನೂ, ವಿಗ್ರಹಾರಾಧನೆಯನ್ನೂ ಅನುಪಯೋಗವೆಂದು ಹೇಳುತ್ತಾ ಅವರು ಹೀಗೆಂದು ಹೇಳಿದ್ದಾರೆ.

ದ್ವಿಪದಿ—ತೀರ್ಥಂಗಳೆಲ್ಲ ಬರಿನೀರಲ್ಲದಿಲ್ಲ
ತೀರ್ಥಂಗಳೊಳು ಮಿಂದು ನೋಡಿರ್ಪೆನೆಲ್ಲ
ವಿಗ್ರಹವು ನಿರ್ಜೀವವಲ್ಲದಿನ್ನೇನು
ವಿಗ್ರಹಕ್ಕೊರಲಿ ಬೇಸತ್ತಿಹೆನು ನಾನು
ಕೊರಾನ್ ಪುರಾಣವಿವು ಮಾತಿನರಮನೆಯು
ಬೇರೇನು ತೆರೆದು ನೋಡಿದರದರ ಪರಿಯು
ಅನುಭವದ ಬಲದಿಂ ಕಬೀರ ಪೇಳುವನು
ಮನವಿ ತಿಳಿದೆಲ್ಲವುಂ ಸುಳ್ಳೆಂಬುದನ್ನು

'ಭರತಖಂಡದ ಜೀವಜ್ಯೋತಿಗಳು' ಗ್ರಂಥದಿಂದ ಉಧೃತ.'

ಎಲ್ಲಾ ವಿಧವಾದ ಪೂಜೆ ಭಕ್ತಿ ವ್ರತ ಉಪವಾಸಾದಿಗಳಿಗಿಂತಲೂ, ಶ್ರೀ ಹರಿಯನ್ನು ಹೃದಯದಲ್ಲಿಟ್ಟಿರುವುದೇ ಸರ್ವೋತ್ಕೃಷ್ಟವಾದ ಪೂಜೆ ಎಂದು ಆ ಮಹಾನುಭಾವರು ಸಾರಿದ್ದಾರೆ.

ಮಂದಾನಿಲ-ಸುರಪುರವೆಂದಾನಂದಿಸಬೇಡ-ನರಕವೆಂದು ನೀ ಭಯಪಡಬೇಡ
ಏಳಿಗೆಯಾಗಲು ಹಿಗ್ಗಲುಬೇಡ-ಬಾಳುಕೆಡಲುನೀ ತಗ್ಗಲುಬೇಡ
ಪರಮಮಂಗಳಾತ್ಮಕನನುಬೇಗ-ಸ್ಮರಿಸಿಹಾಡು ಭಗವಂತನನೀಗ
ಭಕ್ತಿಯಿಲ್ಲದಿಹ ಯೋಗವುಸಾಕೆ?-ಭಕ್ತಿರಹಿತಗುಪವಾಸವದೇಕೆ
ಹೃದಯದೊಳಗೆ ದೇವನನಿಟ್ಟವನು-ಪದುಳದಿ ಪೂಜೆಯಗೈದವನವನು
ಮಾನವನಾಟವು ದೇವನಧೀನ-ಜ್ಞಾನಿಕಬೀರನ ಮಾತಿದುಮಾನ

ಮಹಾತ್ಮಾ ಕಬೀರದಾಸರು, ಗ್ರಂಥಪ್ರಾರಂಭದಲ್ಲಿ ಹೇಳಿದಂತೆ, ಹಿಂದೂ ಮಹಮ್ಮದೀಯ ಮತಗಳಲ್ಲಿದ್ದ ಮುಖ್ಯಾಭಿಪ್ರಾಯಗಳನ್ನು ಏಕತ್ರ ಹೇಳಿ ಎರಡಕ್ಕೂ ಮಿಳನವನ್ನುಂಟುಮಾಡುವುದರ ಮೂಲಕ ಶಾಂತಿಸ್ಥಾಪನೆ ಮಾಡಬೇಕೆಂಬ ಆಂತರ್ಯ ಅಪೇಕ್ಷೆಯಿಂದ ಪ್ರೇರಿತರಾಗಿಯೂ ಕೆಲವು ಬೋಧನೆಗಳನ್ನು ಮಾಡಿರುತ್ತಾರೆ. ಅವುಗಳಲ್ಲಿ ಒಂದನ್ನು ಇಲ್ಲಿ ಕೊಡುತ್ತೇವೆ

If God dwell only in the mosque, to whom belongeth the rest of the country ?

They who are called Hindus say that God dwelleth in an idol; I see not truth in either sect.

O God, whether Allah or Ram, I live by thy name.

O Lord, show kindness unto me.

Hari dwelleth in the south, Allah hath his place in the west. Search in Thy heart, search in the heart of hearts, there is His place and abode."

'ಭಗವಾನನು ಮಸೀದಿಯಲ್ಲಿ ಮಾತ್ರ ವಾಸಿಸುವಂತಿದ್ದರೆ ದೇಶದ ಮಿಕ್ಕ ಭಾಗದಲ್ಲೆಲ್ಲಾ ಇರುವವರು ಯಾರು? ಹಿಂದೂಗಳು ದೇವರು ಒಂದು ವಿಗ್ರಹದಲ್ಲಿ ಇದ್ದಾನೆಂದು ಹೇಳುತ್ತಾರೆ; ನನಗೆ ಈ ಎರಡು ಧರ್ಮಗಳವರ ಅಭಿಪ್ರಾಯವೂ ಸತ್ಯವೆಂದು ತೋರುವುದಿಲ್ಲ. ಓ ಭಗವಾನನೇ ನೀನು 'ಅಲ್ಲಾ' ಎಂದಾದರೂ, 'ರಾಮ' ನೆಂದಾದರೂ ಕರೆಯಲ್ಪಡಬಹುದು. ಆದರೆ ನಾನೇನೋ ನಿನ್ನ ಆ ನಾಮದಲ್ಲೇ ಜೀವಿಸುವೆನು. ಹರಿಯು ದಕ್ಷಿಣದಲ್ಲಿ ವಾಸಿಸುತ್ತಾನೆ. ಅಲ್ಲಾನ ವಾಸಸ್ಥಾನವು ಪಶ್ಚಿಮದಲ್ಲಿದೆ. ಎಲೈ, ನಿನ್ನ ಹೃದಯಾಂತರಾಳದಲ್ಲಿ ಹುಡುಕು. ಅಲ್ಲಿ ಆ ಪರಮಾತ್ಮನ ವಾಸಸ್ಥಾನವಿರುವುದು.'

ಈ ಭಕ್ತ ಶ್ರೇಷ್ಠರು, ತಮ್ಮ ಮನಸ್ಸಿಗೆ ಆನಂದಕರವಾಗಿರುವಂತೆ ಮಾತ್ರ ಧ್ಯಾನಮಾಡಿಕೊಂಡಿದ್ದು ಕಾಲಕಳೆಯಲಿಲ್ಲ! ಮೇಲೆ ಕಂಡಂತೆ, ಸಕಲ ಭಕ್ತ ಜನಾನಂದಕರವಾಗಿರುವಂತೆ ಸಹಸ್ರಾರು ಕೀರ್ತನೆಗಳನ್ನು ನುಡಿದು ತನ್ಮೂಲಕ ಅಗಾಧ ಲೋಕಸೇವೆಮಾಡಿದ್ದಾರೆ. ಕಬೀರದಾಸರ ಕೀರ್ತನೆಗಳು ಭರತಖಂಡದ ಸಕಲ ಪ್ರದೇಶಗಳಲ್ಲೂ ಹರಡಿ ಅನೇಕರಿಂದ ಹಾಡಲ್ಪಡುತ್ತಿವೆ. ಅವರ ಕೀರ್ತನೆಗಳ-ಬೋಧನೆಗಳ-ಒಂದು ನೂರು ಕವಿತೆಗಳನ್ನು ಇಂಗ್ಲೀಯ ಭಾಷೆಗೆ ಪರಿವರ್ತನಗೊಳಿಸಿ ಕವೀಂದ್ರ ರವೀಂದ್ರನಾಥ ಠಾಕೂರರು, ಪಾಶ್ಚಾತ್ಯ ದೇಶಗಳಿಗೂ, ಈ ಮಹಾತ್ಮರ ಬೋಧನೆಯ ಸಾರವು ತಿಳಿಯಲು ಅವಕಾಶವನ್ನುಂಟುಮಾಡಿದ್ದಾರೆ.

---

## ಅಧ್ಯಾಯ ೫ "ಮಹಿಮೆಗಳು"

ನಮ್ಮ ಕಥಾನಾಯಕರು, ಭಗವದಾವೇಶ ಯುಕ್ತರಾಗಿಯೋ ಎಂಬಂತೆ ಮಾಡತೊಡಗಿದ ಬೋಧನೆಗಳು, ನಿಷ್ಕಪಟಿಗಳೂ ಗುಣಗ್ರಾಹಿಗಳೂ ಆದ ಜನಸಮಾಜದ ಸಹಸ್ರಾರು ಮಂದಿಯನ್ನು ಆಕರ್ಷಿಸಿದುವು. ಜನಗಳು ಬೆಳಗಾದರೆ ಸಂಜೆಯಾದರೆ, ಗುಂಪು ಗುಂಪಾಗಿ ಅವರಿದ್ದಲ್ಲಿಗೆ ನಡೆದು ಕರ್ಣಾನಂದ ದಾಯಕವಾದ ಅವರ ಬೋಧನಾಮೃತವನ್ನು ಸವಿದು ಆನಂದಿಸ ತೊಡಗಿದರು. ಬೋಧನೆ, ಪೌರೋಹಿತ್ಯ, ಗುರುಪೀಠ ಮುಂತಾದುವುಗಳನ್ನೇ ಜೀವನೋಪಾಯಸಾಧನಗಳನ್ನಾಗಿ ಮಾಡಿಕೊಂಡಿದ್ದ ಹಲವರಿಗೆ ಕಬೀರದಾಸರ ಈ ಕಾರ್ಯವು ಸ್ವಾಭಾವಿಕವಾಗಿಯೇ ಸಹನೆಯಾಗಲಿಲ್ಲ. ತಮ್ಮ ಸ್ವಾರ್ಥವನ್ನು ತೀರಿಸಿದವರಿಗೆ ಮಾತ್ರ ಅಲ್ಪ ಸ್ವಲ್ಪವಾಗಿ ಹೇಳುತ್ತಾ ತಾವು ಬಹು ಗೋಪ್ಯವಾಗಿಟ್ಟುಕೊಂಡಿದ್ದ ಮತಧರ್ಮ ರಹಸ್ಯಗಳನ್ನೂ, ದೇವರು ಪರಲೋಕ ಪುಣ್ಯ ಪಾಪ ಸ್ವರ್ಗ ನರಕಗಳು, ತೀರ್ಥಯಾತ್ರೆಗಳು ಮುಂತಾದುವುಗಳ ನಿಜ್ಜಯಸ್ವರೂಪವನ್ನೂ ಯಾರಿಗೆಂದರವರಿಗೆ ಬಹು ಸರಳ ರೀತಿಯಿಂದ ತಿಳಿವಂತೆ ದೇಶಭಾಷೆಯಲ್ಲಿ ಹೇಳತೊಡಗಿದ ಕಬೀರದಾಸರ ಮೇಲೆ ಅನೇಕರಿಗೆ ಕೋಪವುಂಟಾಯಿತು. ಕೆಲವುದಿನ ಹಿಂದೆ ಮುಂದೆ ಬೈದಾಡಿಕೊಂಡರು. ಅವರೆದುರಿಗೆ, ದಾಸರ ಈ ಬಗೆಯ ಕಾರ್ಯಗಳಿಂದ ಸಮಾಜಕ್ಕೆ ತಪ್ಪದೆ ಪ್ರಳಯವುಂಟಾಗುವುದೆಂದು ದೂರಿಕೊಂಡರು. ಅವು

ಗಳಿಂದಲೆಲ್ಲ ಅವರ ಕಾರ್ಯವು ನಿಲ್ಲಲಿಲ್ಲ. ಅವರಿಗೆ ಪ್ರತ್ಯಕ್ಷವಾಗಿಯೇ ಅನೇಕ ಬಗೆಯ ತೊಂದರೆಗಳನ್ನುಂಟುಮಾಡಿ, ನೆಗ್ಗಿಸಬೇಕೆಂದು ಪ್ರಯತ್ನಿಸಿದರು. ಅವುಗಳಿಂದಲಾದರೂ ಅವರಿಗೆ ತೊಂದರೆಯಾಗುವುದಂತಿರಲಿ ಅವರ ಕೀರ್ತಿಯು ಮತ್ತೂ ಹೆಚ್ಚಾಗಿ ಪ್ರಕಾಶಿಸಲು ಅವಕಾಶವಾಯಿತು. ಹಾಗೆ ಸ್ವಾರ್ಥಿಗಳು ಅವರಿಗೆ ತಂದೊಡ್ಡಿದ ಕಷ್ಟಗಳೂ, ಅವುಗಳಿಂದ ಮಹಾ ಭಗವದ್ಭಕ್ತರಾದ ಅವರನ್ನು ದೇವರು ರಕ್ಷಿಸಿದ ಮಾರ್ಗಗಳೂ ಕಥೆಯಾಗಿ ಹೇಳಲ್ಪಟ್ಟಿವೆ. ಅವು ಕೆಲಕೆಲವು ವೇಳೆ ಅಮಾನುಷವೆಂಬಂತೆಯೂ, ಅಸಾಧ್ಯವೆಂಬಂತೆಯೂ ತೋರಬಹುದು. ಆದರೂ ಭಗವಂತನಿಗೂ, ಆತನ ಪರಮಾನುಗ್ರಕ್ಕೆ ಪಾತ್ರರಾದ ಭಕ್ತಶ್ರೇಷ್ಠರಿಗೂ, ಅಸಾಧ್ಯವಾದ ಕಾರ್ಯವಾವುದು? ಸಾಮಾನ್ಯರಿಗೆ ಅಸಾಧ್ಯವೆಂದು ತೋರುವ ಕಾರ್ಯಗಳನು ಲೀಲಾಜಾಲವಾಗಿ ಮಾಡಿಬಿಡುವ ಸಾಮರ್ಥ್ಯವು ಅವರಿಗುಂಟು ಎಂಬುದಕ್ಕೆ ಸಂದೇಹವೇನು! ಅಂತಹ ಕಥೆಗಳಲ್ಲಿ ಕೆಲವನ್ನು ಭಾವುಕರಾದ ವಾಚಕ ಮಹಾಶಯರ ಅವಗಾಹನೆಗಾಗಿ ಇಲ್ಲಿ ಕೊಡಲಿಚ್ಛಿಸುತ್ತೇವೆ!

೧. ಕಬೀರದಾಸರು ಭಗವದ್ಭಕ್ತರಾಗಿದ್ದರೂ, ಸನ್ಯಾಸಿಗಳಲ್ಲವಷ್ಟೆ! ಆದುದರಿಂದ ಅವರು ಪತ್ನಿಯೊಂದಿಗೂ ಪುತ್ರನೊಂದಿಗೂ ಕೂಡಿ ಯುಕ್ತ ಗೃಹಸ್ಥ ಧರ್ಮವನ್ನು ಪಾಲಿಸುತ್ತಾ ತಮ್ಮ ಕುಲವೃತ್ತಿಯನ್ನು ಬಿಡದೆ ಇದ್ದರು. ಇದು ಅವರ ದ್ವೇಷಿಗಳಲ್ಲಿ ಕೆಲವರಿಗೆ ಸಹನೆಯಾಗಲಿಲ್ಲ. 'ಯಾವಾಗಲೂ ದೇವರು ದೇವರು, ಧರ್ಮ ಸತ್ಯ ನ್ಯಾಯ ಎಂದು ಹೊಡಕೊಳ್ಳುವ ಇವನಿಗೆ ಹೆಂಡಿರು ಮಕ್ಕಳ ಈ ಲಂಪಟವೇಕೆ! ಈ ವೈರಾಗ್ಯದ ವೇಷವೇಕೆ?' ಎಂದು ಆಕ್ಷೇಪಿಸುತ್ತ, ಅತಿಶಯ ಅನ್ಯೋನ್ಯತೆಯಿಂದಲೂ, ಪವಿತ್ರ ಪ್ರೇಮಭಾವದಿಂದಲೂ ಇದ್ದ ಆ ದಂಪತಿಗಳಲ್ಲಿ ಕ್ಷದ್ರಾನ್ವೇಷಣ ಮಾಡಬೇಕೆಂದು, ಆ ದುಷ್ಟರಲ್ಲಿ ನಾಲ್ವರು ಒಂದಾನೊಂದುದಿನ ಮಾರು ವೇಷದಿಂದ ಬಂದು ಅವರ ಮನೆಯಲ್ಲಿ ಕುಳಿತರು. ದಾಸರು, ಅವರನ್ನು-'ನೀವು ಯಾರು? ಏಕೆ ಬಂದಿರಿ?' ಎಂದು ಪ್ರಶ್ನಿಸದೆ, ಅವರು ಬಂದಿರಬಹುದಾದ ಕಾರಣವನ್ನು ಊಹಿಸಿ, ಅವರಿಗೆ ತಮ್ಮ ಕ್ರಿಯೆಯಿಂದಲೇ ತಕ್ಕ ಪ್ರತ್ಯುತ್ತರವನ್ನು ಕೊಟ್ಟು ಕಳುಹಿಸಬೇಕೆಂದು ಯೋಚಿಸಿ, ಬಾಯಲ್ಲಿ ಏನೂ ಹೇಳದೆ, ತಮ್ಮ ನೇಯ್ಗೆಯ ಕೆಲಸದಲ್ಲಿ ತಾವು ನಿರತರಾಗಿದ್ದರು. ಮತ್ತು, ತಾವು ನೇಯುತ್ತಿದ್ದ ಆ ಮಗ್ಗ

ದಲ್ಲಿನ ಒಂದು ದಾರವು ಕಿತ್ತುಹೋಯಿತೆಂದೂ, ಅದು ತನಗೆ ಕಾಣಿಸದೆ ಇದ್ದುದರಿಂದ ದೀಪವನ್ನು ತಾರೆಂದೂ ತಮ್ಮ ಪತ್ನಿಯನ್ನು ಕೂಗಿದರು. ಪತಿಯು ಕೂಗಿದ ವಾರ್ತೆಯನ್ನು ಕೇಳಿದೊಡನೆಯೇ ಒಳಮನೆಯಲ್ಲಿ ಕೆಲಸ ಮಾಡುತ್ತಿದ್ದ ಆ ಸಾಧ್ವಿಯು ಪ್ರತಿಮಾತನ್ನಾಡದೆ, ಆ ಮಟ ಮಟ ಮಧ್ಯಾಹ್ನದ ವೇಳೆಯಲ್ಲಿ ದೀಪವನ್ನು ತಂದು ಮಗ್ಗದ ಬಳಿ ಹಿಡಿದುಕೊಂಡು ನಿಂತಳು. ಆ ವೇಳೆಗೇ ದಾರವನ್ನು ಸರಿಪಡಿಸಿದ್ದ ದಾಸರು, ಎಂದಿನಂತೆ ನೇಯತೊಡಗಿದ್ದರು ಆದರೂ ಬಾರೆಂದು ಕರೆದ ಪತಿಯು–'ಕರೆದ ಕೆಲಸ ಪಾಯಿತು ಇನ್ನು ಹೋಗು' ಎಂದು ಹೇಳದುದರಿಂದ, ಅಲ್ಲಿಂದ ಹೊರಡದೆ ಹಾಗೇ ನಿಂತಿದ್ದಳು. ಹಗಲು ಹೊತ್ತಿನಲ್ಲಿ ದೀಪವೇಕೆಂದು ಪ್ರಶ್ನಿಸಲಿಲ್ಲ. ಹೋಗು ಎಂಬುವವರೆಗೆ ಅಲ್ಲಿಂದ ಹೊರಡಲಿಲ್ಲ. ಬಹು ಹೊತ್ತಿನಮೇಲೆ ದಾಸರು ಕತ್ತೆತ್ತಿ ನೋಡಿ 'ಇನ್ನು ಹೋಗು' ಎಂದರು. ಆ ಸಾಧ್ವಿಯ ವಿನಯ ವಿಧೇಯತೆಗಳನ್ನೂ, ಪತಿಯ ಆಜ್ಞೆಯಲ್ಲಿದ್ದ ಗೌರವ ಆದರ ಭಾವಗಳನ್ನೂ, ಕಂಡು ಆ ಕೆಡುಕರ ಮನಸ್ಸಿಗೆ ಬರೆಕೊಟ್ಟಂತಾಗಲು, ತಾವು ಕುಳಿತಿದ್ದ ಸ್ಥಳದಿಂದ ಎದ್ದುಬಂದು ದಾಸರಿಗೆ ನಮಸ್ಕಾರಮಾಡಿ, ತಮ್ಮ ದುಷ್ಟ ಸಂಕಲ್ಪವನ್ನು ತಿಳಿಸಿ ಕ್ಷಮಿಸಬೇಕೆಂದು ಬೇಡಿಕೊಂಡರು. ಅದನ್ನು ಕೇಳಿದ ದಾಸರು 'ಅಯ್ಯಾ ಅನುಕೂಲೆಯಾಗಿರುವ ಸತಿಯನ್ನು ತ್ಯಜಿಸಿ ಸನ್ಯಾಸಿಯಾಗುವುದು ಪಾತಕ. ಪ್ರತಿಕೂಲೆಯಾದ ಸ್ತ್ರೀಯನ್ನು ತ್ಯಜಿಸಿ ಸನ್ಯಾಸಿಯಾಗುವುದು ಕರ್ತವ್ಯವು–ಮೋಕ್ಷವು. ಗೃಹಸ್ಥನಾಗಿರುವುದು ಅಪರಾಧವಲ್ಲ. ಪಾತಕವಲ್ಲ! ಆದರೆ ವಿಷಯಲಂಪಟತನದಿಂದ ದೂರವಾಗಿರಬೇಕು. ಅಷ್ಟೆ!' ಎಂದು ಬೋಧಿಸಿ, ಕಳುಹಿಸಿದರು.

೨. ಮತ್ತೊಂದು ವೇಳೆ ಕೆಲವರು ದುರುಳರು ಒಬ್ಬ ಸೂಳೆಯನ್ನು ಪ್ರೇರಿಸಿ ಅವಳನ್ನು ಕಬೀರದಾಸರ ಬಳಿಗೆ ಕಳುಹಿಸಿ, ಅವರ ಮಾನಭಂಗ ಮಾಡಬೇಕೆಂದು ಪ್ರಯತ್ನಿಸಿದರು. ಅವಳು ಅಮೌಲ್ಯ ವಸ್ತ್ರಾಭರಣಗಳನ್ನೂ ಗಂಧ ಮಾಲ್ಯಾದಿಗಳನ್ನೂ ಧರಿಸಿ ಅವರ ಬಳಿಗೆ ಬಂದು, ಅನೇಕ ಬಗೆಯ ಬೆಡಗು ವೈಯಾರಗಳನ್ನೂ ಹಾವಭಾವ ವಿಲಾಸಗಳನ್ನೂ ತೋರಿಸುತ್ತ, ಅವರನ್ನು ಮರುಳು ಮಾಡಲೆಳಿಸಿ, ತನ್ನ ಗಾಯನ ನರ್ತನಾದಿಗಳ ಸೇವೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದಳು. ಆಗ ದಾಸರು ಆಕೆಯನ್ನು ಕುರಿತು

'ಅಮ್ಮಾ ನನಗೆ ಗಾಯನ ನರ್ತನಾದಿ ಕುಶಲಕಲೆಗಳ ಪರಿಚಯವಿಲ್ಲ. ನಾನು ಕೇವಲ ದೇವರ ಸೇವಕನು. ವಿರಾಗಿಯು. ನನ್ನಂತಹ ಅರಸಿಕನೆದುರಿಗೆ ಅವು ಗಳನ್ನು ಪ್ರದರ್ಶಿಸುವುದರಿಂದ ನಿನ್ನ ಪಾಂಡಿತ್ಯಕ್ಕೇ ಕೊರತೆಯಲ್ಲದೆ ಮತ್ತೆ ಬೇರೆಯಲ್ಲ! ಇಗೋ ನೋಡು, ಇಲ್ಲಿ ಶ್ರೀರಾಮನಿದ್ದಾನೆ. ಆತನು ನನ್ನಂತೆ ವಿರಾಗಿಯಲ್ಲ. ರಾಗಿಯೂ ಅಹುದು ಭೋಗಿಯೂ ಅಹುದು. ಆತನೆದುರಿಗೆ ನಿನ್ನ ಚಾತುರ್ಯವನ್ನು ತೋರಿಸು. ಆ ಕಲೆಗಳ ಯೋಗ್ಯತೆಯು ಆತನಿಗೆ ಗೊತ್ತು!' ಎಂದು ಹೇಳಿದರು. ಅವರ ಆ ಮಹತ್ವಪೂರ್ಣ ಬೋಧನೆಯೂ, ಪವಿತ್ರ ಜೀವಿತವೂ ಅವಳ ಚರ್ಯೆಯನ್ನೇ ಬದಲಾಯಿಸಿತು. ಅವಳು ನಮ ಸ್ಕಾರಮಾಡಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ವಿಜ್ಞಾಪಿಸಿಕೊಂಡು, ಭಕ್ತಿ ಮಾರ್ಗಕ್ಕೆ ತಿರುಗಿ ಅವರ ಶಿಷ್ಯಳಾದಳು.

೩. ಬೇರೊಂದು ವೇಳೆ ಆ ದುಷ್ಟರಲ್ಲ ಕೆಲವರು, ಹಲವು ಮಂದಿ ಸಾಧುಗಳಿಗೆ ಕಬೀರದಾಸರ ಮನೆಗೆ ಹೋಗಿ ಭೋಜನಕ್ಕಾಗಿ ಕುಳ್ಳಿರಿ ರೆಂದು ಪ್ರೇರಿಸಿ ಕಳುಹಿಸಿದರು. ಭಗವದ್ಭಕ್ತರು ಅಪ್ರಾರ್ಥಿತರಾಗಿ ಬಂದ ರೆಂದು ದಾಸರೂ ಅವರ ಪತ್ನಿಯೂ ಬಹು ಸಂತೋಷದಿಂದ ಅವರನ್ನು ಒಳಕ್ಕೆ ಕರೆದೊಯ್ದು ಕೂರಿಸಿ ಉಪಚರಿಸಿದರು. ದಾಸರು, ಅವರೆಲ್ಲರಿಗೂ ಅಡಿಗೆ ಮಾಡಿ ಬಡಿಸೆಂದು ಪತ್ನಿಗೆ ಹೇಳಲು, ಆಕೆಯು ಮನೆಯಲ್ಲಿ ಒಂದು ಅಕ್ಕಿಯಕಾಳು ಸಹ ಇಲ್ಲವೆಂದು ಹೇಳಿದಳು. ನೆರೆಯವರಲ್ಲಿ 'ಸಾಲವನ್ನಾ ದರೂ ತರಬೇಕೆಂದು ಹೋಗಿ ವಿಚಾರಿಸಲಾಗಿ ಎಲ್ಲೂ ಹುಟ್ಟಲಿಲ್ಲ. ಉಪಾಯ ತೋರದಾಯಿತು. ಆಗ ದಾಸರು ತಮ್ಮ ಮಗನಾದ ಕಮಾಲದಾಸನನ್ನು ಕರೆದು 'ಮಗು ಮನೆಯಲ್ಲೇನೂ ಪದಾರ್ಥಗಳಿಲ್ಲ. ಸಾಧುಗಳು ಉಪ ವಾಸ ಕುಳಿತಿದ್ದಾರೆ. ಅವರನ್ನು ಹಾಗೇ ಕಳುಹಿಸುವುದು ಧರ್ಮವಲ್ಲ. ನಾವು ಯಾವನಾದರೊಬ್ಬ ವರ್ತಕನ ಅಂಗಡಿಯಲ್ಲಿ ಸಾಧುಗಳಿಗೆ ಬೇಕಾದ ಅಷ್ಟು ಪದಾರ್ಥಗಳನ್ನು ಕದ್ದು ತಂದಾದರೂ, ಅವರಿಗೆ ಆತಿಥ್ಯಮಾಡಿ ಕಳು ಹಿಸಬೇಕು.' ಎಂದು ನುಡಿದು, ತಂದೆ ಮಕ್ಕಳಿಬ್ಬರೂ ಹೊರಟರು. ಒಂ ದಾನೊಂದು ಅಂಗಡಿಗೆ ಕನ್ನಹಾಕಿ ಕಮಾಲನು ಒಳಕ್ಕೆ ಹೊಕ್ಕು, ಅಲ್ಲಿದ್ದ ದುಡ್ಡು ಕಾಸುಗಳನ್ನಾಗಲೀ ಇತರ ಯಾವ ಪದಾರ್ಥವನ್ನಾಗಲಿ ಮುಟ್ಟದೆ ಕೇವಲ ತಮಗೆ ಬೇಕಾಗಿದ್ದ ಗೋದೀಹಿಟ್ಟು ಸಕ್ಕರೆ ಬೇಳೆ ತುಪ್ಪ ಅಕ್ಕಿ

ಮುಂತಾದ ಕೆಲವು ವಸ್ತುಗಳನ್ನು ಮಾತ್ರ ತೆಗೆದುಕೊಂಡು, ಬಂದು ತಂದೆ ಯ ಕೈಗೆ ಒಳಗಿನಿಂದಲೇ ಕೊಟ್ಟು ಅಷ್ಟರಲ್ಲಿ, ನಾವು ಕದಿಯುವುದಕ್ಕಾಗಿ ಬಂದ ಈ ವೃತ್ತಾಂತವನ್ನು ಯಜಮಾನನಾದ ಶೆಟ್ಟಿಗೆ ಹೇಳದೆ ಹೋಗು ವುದು ತಕ್ಕುದಲ್ಲವೆಂದುಕೊಂಡು, ಮಲಗಿದ್ದ ಆತನ ಬಳಿಗೆ ಹೋಗಿ ಮೆಲ್ಲನೆ ಮುಟ್ಟಿ ಎಬ್ಬಿಸಿ-'ಅಯ್ಯಾ ಶೆಟ್ಟಿ, ಈ ದಿನ ನಿಮ್ಮ ಮನೆಗೆ ಕದಿಯುವುದಕ್ಕೆ ಬಂದಿದ್ದ ಇಬ್ಬರಲ್ಲಿ ನಾನು ಒಬ್ಬನು. ಆದರೆ ನಿನಗೆ ತಿಳಿಸದೆ ಹೋಗಬಾರ ದೆಂದು ಹೇಳಿದ್ದೇನೆ.' ಎಂದು ನುಡಿದು, ಓಡತೊಡಗಿದನು. ಆವೇಳೆಗೆ ಎಚ್ಚತ್ತ ಶೆಟ್ಟಿಯು—'ಅಯ್ಯೋ ನನ್ನ ಮನೆಗೆ ಕಳ್ಳರು ಬಿದ್ದಿದ್ದಾರೆಂ'ದು ಕೂಗಿಕೊಂಡು ಅವನನ್ನು ಬೆನ್ನಟ್ಟಿದನು. ಅಷ್ಟರಲ್ಲಿ ಗೋಡೆಯಲ್ಲಿ ತಾವು ಮಾಡಿದ್ದ ಕನ್ನದ ಸಮೀಪಕ್ಕೆ ಬಂದಿದ್ದ. ಕಮಾಲನು ತಲೆಯನ್ನು ಹೊರ ಕ್ಕಿಟ್ಟನು. ಅತ್ತ ಶೆಟ್ಟಿಯು ಒಳಗಡೆ ಕಾಲುಹಿಡಿದು ಎಳೆಯಲಾರಂಭಿಸಿ ದನು. ಆಗ ಕಮಾಲನು ತನ್ನ ತಂದೆಯನ್ನು ಕುರಿತು,—'ತಂದೆಯೇ ಶೆಟ್ಟಿ ಯು ಒಳಗೆ ನನ್ನ ಕಾಲು ಹಿಡಿದು ಎಳೆಯುತ್ತಿದ್ದಾನೆ. ನಾವು ಇಂಥವರೆಂದು ಗುರ್ತು ಸಿಕ್ಕರೆ, ಮಾನಹೋಗುವುದು ಮಾತ್ರವಲ್ಲದೆ, ಆ ಸಾಧುಗಳೂ-ಇವು ಕಳ್ಳತನದಿಂದ ದೊರಕಿಸಿದ ಪದಾರ್ಥಗಳೆಂದು ನಮ್ಮ ಮನೆಯಲ್ಲಿ ಭುಜಿಸದೆ ಹೋಗಿಬಿಡಬಹುದು. ಆದುದರಿಂದ ಜಾಗ್ರತೆಯಾಗಿ ನನ್ನೀ ತಲೆಯನ್ನು ಶೀಘ್ರವಾಗಿ ಕತ್ತರಿಸಿ ತೆಗೆದುಕೊಂಡು ಹೊರಟುಹೋಗು ಎಂದು ತಂದೆಗೆ ಹೇಳಿದನು. ಕಬೀರದಾಸರೂ, ಒಡನೆ ತಮ್ಮ ಮಗನ ತಲೆಯನ್ನು ಕತ್ತರಿಸಿ ಕೊಂಡು ಮನೆಗೆ ಹೊರಟುನಡೆದು, ಆ ಸಮಾಚಾರವನ್ನು ಪತ್ನಿಗೆ ತಿಳಿಸಿ ಪದಾರ್ಥಗಳನ್ನೆಲ್ಲಾ ಆಕೆಯ ಕೈಗಿತ್ತು ಅಡಿಗೆ ಮಾಡಿ, ಸಾಧುಗಳಿಗೆ ಭೋಜನ ಮಾಡಿಸೆಂದು ನುಡಿದರು. ಆ ಸಾಧ್ವಿಯು ಮಗನು ಸತ್ತ ದುಃಖವನ್ನು ತನ್ನೊಳಗೇ ಅಡಗಿಸಿಕೊಂಡು ಮೇಲೆ ಸ್ವಲ್ಪವೂ ಅಸಮಾಧಾನವನ್ನು ತೋರಿ ಸದೆ, ರುಚಿ ರುಚಿಯಾದ ಪದಾರ್ಥಗಳನ್ನು ಸಿದ್ಧಪಡಿಸಿ ಸಾಧುಗಳಿಗೆ ಬಡಿಸಿ ದಳು. ಅವರೆಲ್ಲರೂ ಸಂತುಷ್ಟರಾಗಿ ಹೊರಟರು. ಅವರನ್ನು ಕೆಲವು ದೂರ ಸಾಗಕಳುಹಿಸುವುದಕ್ಕಾಗಿ, ಆ ದಂಪತಿಗಳೂ ಜೊತೆಗೇ ಸಾಗಿದರು.

ಅಷ್ಟರಲ್ಲಿ ಆ ವರ್ತಕನು ತನ್ನ ಮನೆಯಲ್ಲಿ ಆದ ಕನ್ನಾಕಳುವಿನ ವರ್ತ ಮಾನವನ್ನು ಸರ್ಕಾರಕ್ಕೆ ತಿಳಿಸಿದ್ದನು. ಅಧಿಕಾರಿಗಳು ಬಂದು ವಿಚಾರ

ಮಾಡಿ, ಆ ತಲೆಯಿಲ್ಲದ ಮುಂಡವನ್ನು ಕಂಡು, ಅದು ಯಾರ ದೇಹವೋ ಕಂಡುಹಿಡಿಯಬೇಕೆಂಬ ಉದ್ದೇಶದಿಂದ ಊರ ಹೊರಗೆ ಒಂದೆಡೆಯಲ್ಲಿ ಅದನ್ನು ಒಂದು ಶೂಲಕ್ಕೆ ನೇತು ಕಟ್ಟಿದ್ದರು. ಇತ್ತ ಕಬೀರದಾಸರ ಮನೆಯಲ್ಲಿ ಭೋಜನವನ್ನು ತೀರಿಸಿಕೊಂಡ ಸಾಧುಗಳು, ಆ ಮಾರ್ಗವಾಗಿಯೇ ಪ್ರಯಾಣ ಮಾಡುತ್ತಾ ಆ ಸ್ಥಳಕ್ಕೆ ಬರಲು, ಆ ತಲೆಯಿಲ್ಲದ ಮುಂಡವು ಎರಡು ಕೈಗಳನ್ನೂ ಎತ್ತಿ ಅವರಿಗೆ ನಮಸ್ಕಾರ ಮಾಡಿತು. ಅದೇನು ಆಶ್ಚರ್ಯವೆಂದು ಆ ಸಾಧುಗಳು ಕಬೀರದಾಸರನ್ನು ಪ್ರಶ್ನಿಸಲು, ಅವರು ಆತಿಥ್ಯಕ್ಕಾಗಿ ತಾವು ಮಾಡಿದ ಕೆಲಸವೆಂದು ತಿಳಿಸಿದರು. ಒಡನೆ ಅವರು, ದಾಸರ ಸಾಹಸಕಾರ್ಯಕ್ಕಾಗಿ ಅದ್ಭುತಪಟ್ಟು, ಮನೆಯಲ್ಲಿದ್ದ ಕಮಾಲನ ಶಿರಸ್ಸನ್ನು ತರಿಸಿ, ಆ ಮುಂಡದೊಂದಿಗೆ ಹೊಂದಿಸಿ, ಎಲ್ಲರೂ ಸೇರಿ ದೀನ ಜನ ಶರಣ್ಯನೂ ಅನಾಥ ರಕ್ಷಕನೂ ಆಪದ್ಬಾಂಧವನೂ ಆದ ಶ್ರೀರಾಮಚಂದ್ರನನ್ನು ಕುರಿತು ಭಜನೆ ಮಾಡಿದರು. ಒಡನೆ ಕೇಳುವುದೇನು? ಕಮಾಲನ ತಲೆಯು ದೇಹದೊಂದಿಗೆ ಸೇರಿ ಆ ಬಾಲಕನು ಜೀವಿಸಿದನು. ಸಾಧುಗಳು ಆ ದಂಪತಿಗಳ ಧರ್ಮಬುದ್ಧಿಯನ್ನು ಅನೇಕವಾಗಿ ಹೊಗಳಿ ಹೊರಟು ಹೋದರು. ಗಂಡ ಹೆಂಡಿರು ಮಗನೊಂದಿಗೆ ಹೊರಟು ಬಹು ಸಂತೋಷದಿಂದ ಮನೆಯನ್ನು ಹೊಕ್ಕು, ಭಕ್ತವತ್ಸಲನಾದ ಶ್ರೀರಾಮಮೂರ್ತಿಯ ಮಹಿಮೆಯನ್ನು ಕೊಂಡಾಡಿಕೊಂಡಿದ್ದರು. ಆ ವೃತ್ತಾಂತವನ್ನು ಕೇಳಿದ ಅವರ ದ್ವೇಷಿಗಳಿಗೆ ತಕ್ಕಂತೆ ಮುಖಭಂಗಿತವಾಗಲು ಕೆಲವುಕಾಲ ಚೇಷ್ಟೆ ಮಾಡದೆ ಸುಮ್ಮನಿದ್ದರು.

೪. ತರುವಾಯ ಇನ್ನೊಂದುವೇಳೆ, ಆ ದುರುಳರಿಗೆ ಮತ್ತೊಂದು ದುರ್ಬುದ್ಧಿ ಹುಟ್ಟಿತು. ಅತಿಶಯ ಸ್ಫುರದ್ರೂಪಿಯೂ, ಯೌವನವಂತೆಯೂ ಆದ ಸೀಮಾಬೀಯನ್ನು ಹೇಗಾದರೂ ಅಪಹರಿಸಬೇಕೆಂದು ಅವರಲ್ಲೊಬ್ಬ ಧನವಂತನು ಯೋಚಿಸಿದನು. ಅದಕ್ಕಾಗಿ, ಕಬೀರದಾಸರಿಗೆ, ಬಹುಸಂಖ್ಯೆಯ ದ್ರವ್ಯದ ಆವಶ್ಯಕತೆಯು ಉಂಟಾಗುವಂತೆ ಮಾಡಿ, ಆ ದ್ರವ್ಯವನ್ನು ತಾನು ಕೊಡಲು ಒಪ್ಪಿ ಆ ಹಣದ ಒತ್ತೆಗಾಗಿ ಸೀಮಾಬೀಯನ್ನು ಬಿಡಬೇಕೆಂದು ಕೇಳಬೇಕಾಗಿ ಗೊತ್ತುಮಾಡಿಕೊಂಡರು. ಆ ದುಷ್ಟ ಪರಿವಾರವೆಲ್ಲವೂ, ಆ ಮಾತಿಗೆ ಒಪ್ಪಿದರು. ಆ ಬಗೆಯ ಪ್ರಯತ್ನವು ನಡೆಯತೊಡ

ಗಿತು ಆ ದುರುಳರು ಕಬೀರದಾಸರು ತಮ್ಮ ಮನೆಯಲ್ಲಿ ಶ್ರೀ ರಾಮೋತ್ಸವ ಮಾಡುದರಿಂದ ತಾವೆಲ್ಲರೂ ಹೊರಟುಬರಬೇಕೆಂದು, ಹರಿದ್ವಾರ ಬೃಂದಾವನ, ಗೋಕುಲ, ಮಧುರ, ದ್ವಾರಕಾ ಮುಂತಾದ ಸ್ಥಳಗಳಲ್ಲಿದ್ದ ಸಾಧುಗಳಿಗೆಲ್ಲಾ ಪತ್ರಗಳನ್ನು ಬರೆದಂತೆ ತಾವೇ ಬರೆದು ಕಳುಹಿಸಿಬಿಟ್ಟರು. ಆ ಪತ್ರಗಳು ತಲ್ಪಿದ ಒಡನೆಯೇ ಆ ಸಾಧು ಸಂತರೆಲ್ಲರೂ ಅಲ್ಲಿಂದ ಹೊರಟು, ನೂರಾರು ಸಂಖ್ಯೆಯಿಂದ ಬಂದು ದಾಸರ ಮನೆಯಲ್ಲಿ ಇಳಿದರು. ಸಂಗತಿಯೇನೆಂದು ದಾಸರು ವಿಚಾರಿಸಲು—'ನಿಮ್ಮ ಮನೆಯಲ್ಲಿ ಶ್ರೀ ರಾಮೋತ್ಸವವೆಂದೂ ಅದಕ್ಕೆ ಹೊರಟು ಬರಬೇಕೆಂದೂ ಪತ್ರ ತಲುಪಿದುದರಿಂದ ಹೊರಟು ಬಂದೆವೆಂದು ತಿಳಿಸಿದರು. ಅದನ್ನು ಕೇಳಿದ ಕಬೀರದಾಸರು ಪರಮಾಶ್ಚರ್ಯಪಟ್ಟರಾದರೂ, ಯಾವುದೊಂದು ಸಂಗತಿಯು ನಡೆಯಬೇಕಾದಾಗಲೂ, ಅದು ಭಗವಂತನ ಆಜ್ಞೆಯಿಲ್ಲದೆ ನಡೆಯಲಾರದೆಂದೂ, ಆತನ ಇಷ್ಟೆಯಿಲ್ಲದೆ ಪ್ರಪಂಚದ ಒಂದು ಕಡ್ಡಿಯು ಕೂಡ ಕದಲದೆಂದೂ ತಿಳಿದು-ಕಳವಳಪಡದೆ ಮುಂದೆ ಅವರು ಹೇಳಿದಂತೆ ಶ್ರೀ ರಾಮೋತ್ಸವಕ್ಕೆ ಹೇಗೆ ಮಾಡಬೇಕೆಂದು ಯೋಚಿಸತೊಡಗಿದರು.

ಆ ವೇಳೆಗೆ ಮೊದಲೇ ಸಂಧಾನಮಾಡಿಕೊಂಡಿದ್ದ ಆ ದುರುಳ ಪಂಗಡದವರಲ್ಲಿ ಒಬ್ಬನು, ಕಬೀರರ ಸಮೀಪಕ್ಕೆ ಬಂದು, ಆ ಸಾಹುಕಾರನನ್ನು ನೀವು ಬಂದು ಕಂಡುಕೇಳಿದರೆ, ಆತನು ಆವಶ್ಯಕವಾದಷ್ಟು ಹಣವನ್ನು ಕೊಡುವನೆಂದು ತಿಳಿಸಿದನು. ಕಬೀರದಾಸರು ಬಹು ಸಂತೋಷಪಟ್ಟು ಆತನಲ್ಲಿಗೆ ನಡೆದು, ತಮಗೆ ಆ ಮಹೋತ್ಸವದ ವೆಚ್ಚಕ್ಕಾಗಿ ಒಂದು ಸಾವಿರ ರೂಪಾಯಿ ಬೇಕಾಗಿದೆಯೆಂದರು. ಅದನ್ನು ಕೊಡುವುದಕ್ಕೆ ಸಾಹುಕಾರನು ಒಪ್ಪಿದನಾದರೂ, ಅಷ್ಟು ಹಣದ ನಂಬಿಕೆಗಾಗಿ ಅಷ್ಟು ಬೆಲೆಬಾಳುವ ಏನಾದರೊಂದು ಪದಾರ್ಥವನ್ನು ಒತ್ತೆ ಇಡಬೇಕೆಂದು ಅಪೇಕ್ಷಿಸಿದನು. ದಾಸರು, 'ಅಯ್ಯಾ ಒತ್ತೆಇಡಲು ನನ್ನಲ್ಲೇನಿದೆ. ನಾನು, ನನ್ನ ಹೆಂಡತಿ ಮತ್ತು ಮಗ ಮೂವರಿದ್ದೇವೆ' ಎಂದರು. ಆ ಸಾಹುಕಾರನು-'ಅಯ್ಯಾ ಕಬೀರ್, ಯಾವ ಕೆಲಸವನ್ನೂ ಮಾಡದೆ ಯಾವಾಗಲೂ ರಾಮರಾಮನೆಂದು ಕುಳಿತಿರುವ ನಿನ್ನನ್ನಾಗಲೀ ಬಾಲಕನಾದ ನಿನ್ನ ಮಗನನ್ನಾಗಲೀ ತೆಗೆದುಕೊಂಡು ನಾನು ಏನು ಮಾಡಲಿ! ನಿನ್ನ ಹೆಂಡತಿಯನ್ನು ಒತ್ತೆ ಇಡುವುದಾದರೆ ಬೇಕಾದಷ್ಟು

ಹಣವನ್ನು ಕೊಡುತ್ತೇನೆ. ನನಗೆ ಈಗೊಬ್ಬ ಕೆಲಸಗಾರಳ ಆವಶ್ಯಕವಿದೆ' ಎಂದನು. ಆ ಮಾತನ್ನು ಕೇಳಿ ದಾಸರು ಮನಸ್ಸಿನಲ್ಲಿ ಸ್ವಲ್ಪ ಕಳವಳ ವುಂಟಾದರೂ, ಶ್ರೀ ಹರಿಶ್ಚಂದ್ರ ಮಹಾರಾಜನು ಸತ್ಯ ವಾಕ್ಪಾಲನೆಗಾಗಿ ತನ್ನ ಪತ್ನೀ ಪುತ್ರರನ್ನು ಮಾರಿರುವಾಗ, ನಾನೂ ಭಗವತ್ಕಾರ್ಯಕ್ಕಾಗಿ ನನ್ನ ಪತ್ನಿಯನ್ನು ಏತಕ್ಕಾಗಿ ಮಾರಲಾಗದು' ಎಂದು ಯೋಚಿಸಿಕೊಂಡು, ಮನೆಗೆ ಬಂದು ಪತ್ನಿಯನ್ನು ಕುರಿತು ಆ ಸಂಗತಿಯನ್ನು ತಿಳಿಸಿದನು. ಆ ಸಾಧ್ವಿಯಾದರೂ, ಪತಿಯ ಮಾತಿಗೆ ಪ್ರತಿಯಾಡದೆ—'ನಿಮಗೆ ಏನು ಮಾಡುವುದು ಸೂಕ್ತವೆಂದು ತೋರಿದರೆ ಅದಕ್ಕೆ ನನ್ನ ಸಮ್ಮತಿಯುಂಟು. ಇದು ನಿಮಗೆ ಸೇರಿದ ದೇಹವು. ಇದನ್ನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು' ಎಂದಳು. ತರುವಾಯ ದಾಸರು ಆಕೆಯನ್ನು ಕರೆದೊಯ್ದು ಸಾಹುಕಾರನ ಮನೆಯಲ್ಲಿ ಬಿಟ್ಟು ಹಣವನ್ನು ಕೊಡೆಂದರು ತನ್ನ ಪಾಪ ಯೋಚನೆಯು ಈಡೇರಿದುದನ್ನು ಕಂಡು, ಆ ಸಾಹುಕಾರನು ಪರಮ ಸಂತುಷ್ಟನಾಗಿ ಅವರು ಕೇಳಿದಷ್ಟು ದ್ರವ್ಯವನ್ನು ಕೊಟ್ಟು ಕಳುಹಿಸಿದನು. ದಾಸರು ತಮ್ಮ ಪತ್ನಿಯನ್ನು ಅಲ್ಲಿ ಬಿಟ್ಟು, ಹಣದೊಂದಿಗೆ ಮನೆಗೆ ಬಂದು, ಅಗಾಧ ವೈಭವದಿಂದ ರಾಮೋತ್ಸವವನ್ನು ನಡೆಯಿಸತೊಡಗಿದರು.

ಆದರೆ, ಇತ್ತ ಸಾಹುಕಾರನು ಸ್ವಾಮಿನಿಯನ್ನು ತಾನು ಹೇಳಿದಂತೆ ಮನೆಯ ಕೆಲಸಕಾರ್ಯಗಳಿಗಾಗಿ ಕಳುಹಿಸದೆ ಉತ್ತಮ ವಸ್ತ್ರಾಭರಣಗಳನ್ನು ತಂದಿಟ್ಟು, ಅವುಗಳನ್ನು ಧರಿಸಿಕೊಂಡು ತನ್ನ ಕಾಮಜ್ವರವನ್ನು ಪರಿಹರಿಸೆಂದು, ಪಾಪದೃಷ್ಟಿಯಿಂದ ಆ ಪತಿವ್ರತೆಯನ್ನು ಯಾಚಿಸಿದನು. ಆ ಪರಿಸ್ಥಿತಿಯನ್ನು ಕಂಡ ಆ ಸಾಧ್ವಿಯು, ಆವನನ್ನು ಕುರಿತು, ಅನೇಕ ಬಗೆಯಿಂದ ಧರ್ಮಬೋಧೆ ಮಾಡಿ, ತನ್ನನ್ನು ಅಕ್ಕ ತಂಗಿಯರಂತೆ ತಿಳಿದು ಪೋಷಿಸಬೇಕೆಂದು ಬಿನ್ನವಿಸಿಕೊಂಡಳು. ಆದರೆ, ಆ ಮಾತು ಮದೋನ್ಮತ್ತನಾದ ಆ ಪಾಪಿಗೆ ರುಚಿಸದಿರಲು, ಬಲಾತ್ಕಾರದಿಂದ ತನ್ನ ಕಾಮವಾಸನೆಯನ್ನು ತೀರಿಸಿಕೊಳ್ಳಲು ಯತ್ನಿಸಿ ಆಕೆಯ ಮೇಲೆ ಬೀಳಲುದ್ಯೋಗಿಸಿದನು. ಒಡನೆ, ಆಕೆಯು ಕಾತರಳಾಗಿ ಆಪದ್ಬಾಂಧವನಾದ ಶ್ರೀರಾಮಚಂದ್ರನ ಸ್ಮರಣೆ ಮಾಡುತ್ತ ಅಲ್ಲಿಂದ ಹೊರಡಲೆತ್ನಿಸುತ್ತಿರುವಷ್ಟರಲ್ಲೇ, ಆ ಪಾಪಿಯು ತನ್ನ ಮನೆಯಲ್ಲಿ ಭಯಂಕರ ದೃಶ್ಯಗಳನ್ನು ಕಂಡು, ಪ್ರಾಣದೊಂದಿಗೆ ಬದುಕಿದರೆ

ಸಾಕೆಂದು, ಆ ಸಾಧ್ವೀ ಮಣಿಯ ಪಾದಗಳಿಗೆ ಬಿದ್ದು-'ತಾಯೇ ನಾನು ನಿನ್ನ ಉದರದಲ್ಲಿ ಒಂದವನೆಂದು ತಿಳಿದು, ಈ ಪಾಪಿಯ ಮಹಾಪರಾಧವನ್ನು ಕ್ಷಮಿಸಿ ರಕ್ಷಿಸು' ಎಂದು ಪ್ರಾರ್ಥಿಸಿದನು. ಅಲ್ಲದೆ ಅಲ್ಲಿಂದ ಹೊರಟು, ಕಬೀರದಾಸರು, ಅಗಾಧ ವೈಭವದಿಂದ ಏರ್ಪಡಿಸಿದ್ದ ಶ್ರೀ ರಾಮೋತ್ಸವ ವಾಗುತ್ತಿದ್ದ ಸ್ಥಳಕ್ಕೆ ಬಂದು, ಅವರ ಪಾದಗಳಿಗೆ ನಮಸ್ಕರಿಸಿ ಅವರ ಪತ್ನಿ ಯನ್ನು ಒಪ್ಪಿಸಿ, ತನ್ನ ಅಪರಾಧವನ್ನು ಮರೆತು ಕಾಪಾಡಬೇಕೆಂದು ಪ್ರಾ ರ್ಥಿಸಿ ಅವರ ಶಿಷ್ಯಮಂಡಲಿಗೆ ಸೇರಿದನು. ದೇಶದೇಶಗಳಿಂದ ಬಂದ ಭಕ್ತಾದಿ ಗಳೆಲ್ಲರೂ, ಬಹು ವಿಧ ಭಕ್ಷ್ಯಭೋಜ್ಯಗಳಿಂದ ಕೂಡಿದ ದಿವ್ಯ ಭೋಜನ ಗಂಧಮಾಲ್ಯಾದಿಗಳು, ದಕ್ಷಿಣೆ ವಸ್ತ್ರದಾನಾದಿಗಳು ಮುಂತಾದುವುಗಳಿಂದ ಪರಮ ಸಂತುಷ್ಟರಾಗಿ ಕಬೀರದಾಸರ ಈ ಬಗೆಯ ಕೀರ್ತಿಯನ್ನು ಬಹು ವಿಧದಿಂದ ವರ್ಣಿಸುತ್ತ ಹೊರಟುಹೋದರು. ಅವರನ್ನು ಈ ಬಗೆಯ ತೊಂದರೆಗೆ ಸಿಕ್ಕಿಸಬೇಕೆಂದು ಯೋಚಿಸಿ ಕುಹಕ ಮಾರ್ಗದಿಂದ ಪ್ರಯತ್ನಿ ಸಿದ್ದ ದುರುಳರೆಲ್ಲರೂ, ಅವರ ಮಹಿಮೆಯನ್ನು ಕಂಡು ಅದ್ಭುತಪಟ್ಟು, ನೊಕ್ಕಡಗಿ ಪಾದಾಕ್ರಾಂತರಾಗಿ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡು, ಮುಂದೆ ಅವರ ಶಿಷ್ಯರಾಗಿ ರಾಮಭಜನೆಮಾಡುತ್ತ ಜನ್ಮ ಸಾರ್ಥಕ ಮಾಡಿಕೊಂಡರು.

ಹೀಗೆ ಆ ಮಹಾನುಭಾವರು ಅನೇಕ ಮಹಿಮೆಗಳನ್ನು ಪ್ರದರ್ಶಿಸಿ, ತನ್ಮೂಲಕ ಅಜ್ಞಲೋಕವನ್ನು ಶಿಕ್ಷೆ-ರಕ್ಷೆಗಳಿಂದ ಉದ್ಧರಿಸಿದರು.



## ಅಧ್ಯಾಯ ೫. "ಪುಷ್ಪರಾಶಿ"

ಮತ-ಧರ್ಮ ವಿಚಾರವನ್ನೂ, ಭಗವನ್ನಾಮವನ್ನೂ-ಸರ್ಪನ ಹೆಡೆಯ ಲ್ಲಿನ ರತ್ನವೋ-ಎಂಬಂತೆ ಲೋಭದಿಂದ ರಕ್ಷಿಸಿಕೊಂಡು-ಆದರೆ ಅದನ್ನು ತಮ್ಮ ಸ್ವಾರ್ಥತೆಗಾಗಿಯೇ ಉಪಯೋಗಿಸಿಕೊಳ್ಳುತ್ತಿದ್ದ ಕೆಲವರಿಗೆ, ಕಬೀ ರದಾಸರು, ಆ ವಿಚಾರಗಳನ್ನು ಬಡವ ಬಲ್ಲಿದ, ಬ್ರಾಹ್ಮಣ ಶೂದ್ರ, ಅಕ್ಷರಸ್ಥ ಅನಕ್ಷರಸ್ಥ ಎಂಬ ಭೇದವಿಲ್ಲದೆ ಸಕಲರಿಗೂ ಬಹು ಲಘುವಾಗಿ ತಮ್ಮ ಬೋ ಧನೆಗಳ ಮೂಲಕ ತಿಳಿಸಿಬಿಡುತ್ತಿದ್ದುದು, ಹೊಟ್ಟೆಯುರಿಯನ್ನು ಉಂಟುಮಾ

ದಿತು. ಹಿಂದಿನ ಅಧ್ಯಾಯದಲ್ಲಿ ಕಂಡಂತೆ ದ್ವೇಷಿಗಳು ಅನೇಕ ಒಗೆಗಳಿಂದ ಅವರನ್ನು ಪೀಡಿಸಲು ಪ್ರಯತ್ನಪಟ್ಟರಾದರೂ ಮಹಸೀಯರಾದ ಕಬೀರ ದಾಸರು, ತಮ್ಮ ಭಗವದ್ಭಕ್ತಿಗೂ ಬೋಧನೆಗಳಿಗೂ ಲೇಶಮಾತ್ರವೂ ಕುಂದನ್ನು ತಾರದೆ, ಬಂದ ಕಷ್ಟಗಳನ್ನೆಲ್ಲ ಅತಿಶಯ ಸಮಾಧಾನದಿಂದ ಸಹಿಸಿಕೊಂಡು ಅನುಭವಿಸುತ್ತ, ತಮಗೆ ಅಪಕಾರ ಮಾಡಿದವರಿಗೇ ಪಶ್ಚಾತ್ತಾಪವುಂಟಾಗುವಂತೆ ಮಾಡುತ್ತಿದ್ದರು. ಆ ದುಷ್ಟರು ಕೊಡುತ್ತಿದ್ದ ಬಾಧೆಗಳನ್ನು ಸಹಿಸುವಲ್ಲಿ ಕಬೀರದಾಸರಿಗೆ ಉಂಟಾಗುತ್ತಿದ್ದ ಮನೋವ್ಯಥೆಗಿಂತಲೂ, ಆ ದುರುಳರಿಗೆ ದಾಸರ ಸಹನೆಯೇ ಸಹಸ್ರಪಾಲು ಮನೋವ್ಯಥೆಯನ್ನುಂಟುಮಾಡುತ್ತಿತ್ತು. ಕೊನೆ ಕೊನೆಗೆ ಅಸಾಧ್ಯವೆಂಬಂತಾಗಿ ಅವರು ಆಗ ಧೊರೆಯಾಗಿದ್ದ ಸಿಕಂದರ್ ಲೋದಿ ಎಂಬಾತನಲ್ಲಿಗೆ ಹೋಗಿ.-'ಈ ಕಬೀರನು ಸುಳ್ಳುಪೊಳ್ಳು ತತ್ವಗಳನ್ನೆಲ್ಲಾ ಬೋಧಿಸಿ ಜನಗಳನ್ನು ದುರ್ಮಾರ್ಗಕ್ಕೆ ಎಳೆಯುತ್ತಿದ್ದಾನಾದುದರಿಂದ ಈತನನ್ನು ಶಿಕ್ಷಿಸಬೇಕು.' ಎಂದು ವಿಜ್ಞಾಪಿಸಿದರು. ರಾಜಾಜ್ಞೆಯಾಯಿತು. ಭಟರು ಅವರನ್ನು ರಾಜಸಭೆಗೆ ಕರೆತಂದು,-'ಪ್ರಭು ಪಾದಕ್ಕೆ ನಮಸ್ಕಾರ ಮಾಡು' ಎಂದರು. ಆದರೆ ಕಬೀರದಾಸರು- 'ಅಖಿಲ ಬ್ರಹ್ಮಾಂಡಕ್ಕೂ ಒಡೆಯನಾದ ಸರ್ವೇಶ್ವರನೊಬ್ಬನಿಗೆ ನಾನು ವಂದಿಸುವೆನಲ್ಲದೆ, ಮತ್ತಾರಿಗೂ ನಮಸ್ಕಾರಮಾಡಿ ಅರಿಯೆನು. ನಿಮ್ಮ ಪ್ರಭುವಿನಿಂದ ನನಗೆ ಆಗಬೇಕಾದ ಕೆಲಸವೇನೂ ಇಲ್ಲ.' ಎಂದು ಸುಮ್ಮನೆ ನಿಂತುಕೊಂಡರು. ಸುಲ್ತಾನನಾದರೂ, ಕೇವಲ ವಿರಕ್ತರಾದ ಅವರನ್ನು ಯಾವ ಬಗೆಯಿಂದಾದರೂ ಶಿಕ್ಷಿಸಲಿಷ್ಟಪಡದೆ, ಸುರಕ್ಷಿತವಾಗಿ ಹೋಗಲಿತ್ತನು.

ಜನಾಂಗದಲ್ಲಿ ಶಾಂತಿರಕ್ಷಣೆಗಾಗಿ ಹೀಗೆ ಆ ಭಕ್ತವರ್ಯರ ಪ್ರಾಣವು ರಕ್ಷಿಸಲ್ಪಟ್ಟಿತಾದರೂ ಮುಂದೆ ಅವರು ಕಾಶೀಪಟ್ಟಣದಲ್ಲಿ ವಾಸವಾಗಿರಕೂಡದೆಂದು ಹೊರಡಿಸಲ್ಪಟ್ಟರು. ತರುವಾಯ ಕಬೀರದಾಸರು ಉತ್ತರ ಹಿಂದೂಸ್ಥಾನದ ಅನೇಕ ಊರುಗಳಲ್ಲಿ ಸಂಚರಿಸಿ, ಎಲ್ಲಾ ಸ್ಥಳಗಳಲ್ಲೂ ರಾಮಭಕ್ತಿಯ ಬೀಜಗಳನ್ನು ಬಿತ್ತಿ, ಜನಮನದಲ್ಲಿ ಶಾಂತಿಸುಖ ಸಮಾಧಾನಗಳನ್ನು ಸ್ಥಾಪಿಸಲು ಪ್ರಯತ್ನಿಸಿದರು. ಹೀಗೆ ಅನೇಕ ಸಂವತ್ಸರಗಳು ಅಲ್ಲಲ್ಲಿ ಸುತ್ತಿ ಲೋಕ ಸಂಗ್ರಹಕಾರ್ಯ ಮಾಡಿದರು. ಮುಂದೆ ಗಿಳಿಗಲ

(ಸಂವತ್ ಶಕೆ. ೧೫೭೫) ನೆಯ ಸಂವತ್ಸರದ ವೇಳೆಗೆ, ಶ್ರೀ ಕಬೀರದಾಸರು ವಾರ್ಧಿಕ್ಯದಿಂದ ಕೇವಲ ಬಲಹೀನರಾದುದಲ್ಲದೆ ದೇಹದಲ್ಲಿ ಆಲಸ್ಯವೂ ಉಂಟಾಯಿತು. ಆಗ ಅವರು ಗೋರಖಪುರದ ಸಮೀಪದಲ್ಲಿರುವ ಮಾಘರ್ ಎಂಬ ಊರಿನಲ್ಲಿದ್ದರು. ಅದೇ ಸಂವತ್ಸರದ ಮಾರ್ಗಶಿರ ಶುದ್ಧ ಏಕಾದಶಿಯ ದಿನ ಅವರು, ತಮ್ಮ ಬಳಿ ಇದ್ದವರನ್ನು ಕುರಿತು, 'ಇನ್ನು ನನ್ನ ಕಾಲ ತುಂಬಿತು. ನಾನಿನ್ನು ಬ್ರಹ್ಮಲೋಕವನ್ನು ಕುರಿತು ಹೊರಡುತ್ತೇನೆ' ಎಂದು ಹೇಳಿದರು. ಆ ಸಂಗತಿಯು ಅತ್ಯಲ್ಪಕಾಲದಲ್ಲೇ ಊರಿನಲ್ಲೆಲ್ಲ ಹಬ್ಬಿತು. ಆ ಆಶ್ಚರ್ಯಕರವಾರ್ತೆಯನ್ನು ಕೇಳಿ ಸಹಸ್ರಾರು ಜನರು ನೆರೆದರು. ದಾಸರು ತಮ್ಮ ಶಿಷ್ಯವೃಂದದೊಡಗೂಡಿ ಆದಿನ ಪ್ರಾತಃಕಾಲದಿಂದ ಅಖಂಡ ಭಜನೆಮಾಡಿ, ಮಧ್ಯಾಹ್ನದ ವೇಳೆಗೆ ಎಲ್ಲರೆದುರಿಗೆ ಮುಸುಗಿಟ್ಟು ಸಮಾಧಿಮಗ್ನರಾದರು. ಶ್ರೀದಾಸರ ಶರೀರದಿಂದ ಪವಿತ್ರ ಪ್ರಾಣವಾಯುವು ಹೊರಟು ಪುಣ್ಯಲೋಕವನ್ನು ಕುರಿತು ಪ್ರಯಾಣಮಾಡಿತು.

ಶ್ರೀ ಕಬೀರದಾಸರ ಪಾಂಚಭೌತಿಕ ಕಳೇಬರದ ಸಂಸ್ಕಾರ ವಿಚಾರದಲ್ಲಿ, ಈ ವರೆಗೆ ನಾವು ಕಂಡು ಕೇಳಿ ಅರಿಯದ ಒಂದು ವಿಚಿತ್ರ ಸಂಗತಿಯು ನಡೆಯಿತೆಂದು ಒಂದು ಕಥೆಯು ವಿಸ್ತಾರವಾಗಿ ಪ್ರಚಾರದಲ್ಲಿದೆ. ಮೇಲ್ಕಂಡಂತೆ ಅವರ ಪವಿತ್ರ ಪ್ರಾಣವಾಯುವು ದೇಹವನ್ನು ಬಿಟ್ಟು ಹೊರಟ ತರುವಾಯ, ಅವರ ದೇಹವು ಯಾರಿಗೆ ಸೇರತಕ್ಕದ್ದು ಎಂಬ ವಿಷಯದಲ್ಲಿ ಹಿಂದೂಗಳಿಗೂ ಮಹಮ್ಮದೀಯರಿಗೂ ವಿವಾದಕ್ಕೆ ಪ್ರಾರಂಭವಾಯಿತು. ದಾಸರು ಜನ್ಮತಃ ಮಹಮ್ಮದೀಯರಾದುದರಿಂದ ಅವರ ದೇಹವು ತಮಗೆ ಸೇರತಕ್ಕುದೆಂದೂ ತಾವು ಅದನ್ನು ಗೋರಿಮಾಡಬೇಕೆಂದು ಮಹಮ್ಮದೀಯರೂ, ಅವರು ಆಜನ್ಮ ಶ್ರೀರಾಮ ಭಕ್ತರಾಗಿದ್ದು ಸನಾತನ ಧರ್ಮ ಪ್ರಚಾರ ಮಾಡಿದುದರಿಂದ ಅವರ ಕಳೇಬರವು ತಮಗೆ ಸೇರತಕ್ಕುದೆಂದೂ ತಾವು ಅದನ್ನು ದಹಿಸಬೇಕೆಂದು ಹಿಂದೂಗಳೂ ವಾದಿಸತೊಡಗಿದರು. ಸ್ವಲ್ಪ ಹೊತ್ತಿನಲ್ಲೇ ವಾದವು ವಿವಾದಕಿಟ್ಟಿತು. ಉಭಯ ಪಕ್ಷದಲ್ಲೂ ಸಹಸ್ರಾರು ಮಂದಿ ಸೇರಿ ಎಷ್ಟು ಕಷ್ಟನಷ್ಟಗಳು ಪ್ರಾಪ್ತವಾದರೂ ಸರಿ. ತಮ್ಮ ಪಂಥವನ್ನು ಗೆಲ್ಲಬೇಕು ಎಂದು ಮುಷ್ಕರ ಹಿಡಿದರು. ಆ ವಿಷಮ ಸಂದರ್ಭದಲ್ಲಿ –'ಎಲೈ ಬಾಂಧವರೇ ವಿವಾದ ಮಾಡಬೇಡಿ, ವಸ್ತ್ರವನ್ನು ತೆಗೆದು ನೋಡಿ'

ಎಂಬೊಂದು ಅಶರೀರವಾಕ್ಕು ಕೇಳಿಸಿತು. ಒಡನೆ ಆ ಜನಗಳು ಪರಮಾಶ್ಚ ರ್ಯಪಟ್ಟು ಕಬೀರದಾಸರ ಕಳೇಬರಕ್ಕೆ ಹೊದ್ದಿಸಿದ್ದ ವಸ್ತ್ರವನ್ನು ತೆಗೆದರು. ನೋಡುವಲ್ಲ, ಅಲ್ಲಿ ಅವರ ದೇಹವು ಕಾಣಿಸದೆ, ದೇಹವಿದ್ದ ಸ್ಥಳದಲ್ಲಿ ಒಂದು ಪುಷ್ಪರಾಶಿಯು ಗೋಚರವಾಯಿತು. ಅದನ್ನು ಕಂಡು ನೆರೆದ ಜನಗಳು ಪರಮಾದ್ಭುತಪಟ್ಟು ಹೋದರು. ಆ ಪುಷ್ಪರಾಶಿಯ ಅರ್ಧ ಭಾಗವನ್ನು ಮಹಮ್ಮದೀಯರೂ ಮಿಕ್ಕ ಅರ್ಧ ಭಾಗವನ್ನು ಹಿಂದೂಗಳೂ ತೆಗೆದು ಕೊಂಡು ಹೋದರು. ಮಹಮ್ಮದೀಯರು, ತಮ್ಮ ಅರ್ಧ ಭಾಗದ ಪುಷ್ಪ ರಾಶಿಯನ್ನೊಯ್ದು ಗೋರಖಪುರದಲ್ಲಿ ಗೋರಿಯನ್ನು ಕಟ್ಟಿದರು. ಹಿಂದೂ ಗಳು ಅರ್ಧ ಭಾಗದ ಪುಷ್ಪ ರಾಶಿಯನ್ನೊಯ್ದು ಕಾಶೀ ಪಟ್ಟಣದ ಹರಿ ಶ್ಚಂದ್ರ ಘಾಟಿನಲ್ಲಿ ದಹನಮಾಡಿದರು.

ಗೋರಖಪುರದಲ್ಲಿ ಶ್ರೀ ದಾಸರು ಗತಿಸಿದ ಸ್ಥಳದಲ್ಲಿ ಒಂದು ಬೃಂದಾ ವನವೂ ಒಂದು ಗೋರಿಯೂ ಈಗಲೂ ಇವೆ. ಅದರ ಸಂರಕ್ಷಣೆ ಖರ್ಚು ವೆಚ್ಚಗಳಿಗಾಗಿ ಆ ಕಾಲದ ತುರುಷ್ಕ ಪ್ರಭುಗಳು ಸಂ|| ಕ್ಕೆ ಏಳುಸಾವಿರ ದ್ರವ್ಯವನ್ನು ಕೊಡುತ್ತಿದ್ದರು. ಈಗಲೂ ಬ್ರಿಟಿಷ್ ಸರ್ಕಾರದವರು, ಆ ಹಣವನ್ನು ಹಿಂದೂ ಮಹಮ್ಮದೀಯ ಧರ್ಮದರ್ಶಿಗಳನ್ನು ನಿಯಮಿಸಿ ಆ ಹಣವನ್ನು ಸಮಭಾಗವಾಗಿ ಇಬ್ಬರಿಗೂ ಹಂಚಿಕೊಟ್ಟು ಅದನ್ನು ರಕ್ಷಿಸು ತ್ತಿದ್ದಾರೆ. ಈಗಲೂ ಮಾಗಶೀರ್ಷ ಶುದ್ಧ ಏಕಾದಶಿಯ ದಿನ ಆ ಸ್ಥಳದಲ್ಲಿ ಮಹೋತ್ಸವವೂ, ಶ್ರೀ ದಾಸರ ಆರಾಧನೆಯೂ ನಡೆಯುತ್ತಿವೆ. ಅನೇಕ ಸಹಸ್ರ ಜನರು ನೆರೆದು ಅವರ ಬೃಂದಾವನವನ್ನೂ ಗೋರಿಯನ್ನೂ ಆರಾಧಿ ಸುವುದು ಪದ್ಧತಿಯಾಗಿದೆ.



# ಉ ಪ ಸ ಂ ಹಾ ರ

ಕಬೀರದಾಸರು, ತಮ್ಮಿಂದೆಂದು ಒಂದು ಪ್ರತ್ಯೇಕ ಮತವನ್ನು ಸ್ಥಾಪಿಸಲಿಲ್ಲವಾದರೂ, ಅವರ ಶಿಷ್ಯಮಂಡಲಿಯವರು, ಅವರ ಗ್ರಂಥಗಳನ್ನು ಏಕತ್ರ ಸಂಗ್ರಹಿಸಿ 'ಕಬೀರಪಂಥಿ' ಎಂಬ ಹೆಸರಿನಿಂದ ತಮ್ಮದೊಂದು ಪ್ರತ್ಯೇಕ ಸಮಾಜವನ್ನು ಏರ್ಪಡಿಸಿಕೊಂಡರು. ದಾಸರು, ತಮ್ಮ ಸಿದ್ಧಾಂತಗಳನ್ನು ಬೋಧಿಸುವಲ್ಲಿ ಆಗ ಪ್ರಚಾರದಲ್ಲಿದ್ದ ಇತರ ಯಾವ ಧರ್ಮದವರನ್ನೂ ಎಂದೂ ದೂಷಿಸಿದವರಲ್ಲ. ಆಚಾರ ಕರ್ಮಗಳನ್ನು ನಿಷೇಧಿಸಿದವರಲ್ಲ. ಅವರ ಸಂಪ್ರದಾಯದ ಮುಖ್ಯ ಧರ್ಮಗಳು ನಾಲ್ಕು. ಮದ್ಯಪಾನ ಮಾಡಕೂಡದು. ಮಾಂಸಾಹಾರ ಮಾಡಕೂಡದು. ಅಸತ್ಯವನ್ನು ವರ್ಜಿಸಬೇಕು. ಪಾಪಕಾರ್ಯಗಳನ್ನು ಮಾಡಕೂಡದು. ಈ ಧರ್ಮಗಳನ್ನು ಪಾಲಿಸುವ ಯಾರಾದರೂ ಆ ಮತಕ್ಕೆ ಸೇರಬಹುದು. ಈ ಮತಸ್ಥರು ವಿಗ್ರಹಾರಾಧಕರಲ್ಲ. ಗೋಪೀಚಂದನದ ಒಂದು ನಾಮವನ್ನು ತಮ್ಮ ಪಂಥದ ಚಿಹ್ನೆಯಾಗಿ ಧರಿಸುವರು. ಇವರು ಹಿಂದೂದೇಶದ ಅನೇಕ ಭಾಗಗಳಲ್ಲಿ ವಾಸಿಸುವರು. ಮುಖ್ಯವಾಗಿ ಛತ್ತೀಸ್‌ಘರ್ ಪ್ರಾಂತದಲ್ಲಿ ವಿಶೇಷವಾಗಿದ್ದಾರೆ. ಹಿಂದೂಸ್ಥಾನದಿಂದ ಹೊರಗೂ ಪ್ರಯಾಣಮಾಡಿ, ಟ್ರಿನಿಡಾಡ್, ಜಮೈಕಾ, ಮಾರಿಷಸ್, ಬ್ರಿಟಿಷ್‌ಗಯಾನ, ಡಚ್‌ಗಯಾನ ಮುಂತಾದ ದ್ವೀಪಾಂತರಗಳಲ್ಲಿ ವಾಸಿಸುತ್ತಿದ್ದಾರೆಂದೂ ತಿಳಿಯ ಬರುತ್ತೆ. ಈ ಜನಗಳ ಸಂಖ್ಯೆ ನಾಲ್ವತ್ತು ಲಕ್ಷವಿದೆಯೆಂದು ಗೊತ್ತಾಗಿದೆ.

ಶ್ರೀ ಕಬೀರದಾಸರ ಶಿಷ್ಯರಾದ ಶ್ರೀ ಧರ್ಮದಾಸ್ ಎಂಬುವರ ವಂಶಸ್ಥರು ಈಗಲೂ ರೇವಾ ಸಂಸ್ಥಾನದಲ್ಲಿದ್ದಾರೆ. ಕಬೀರದಾಸರ ಉಪದೇಶವನ್ನನುಸರಿಸಿ ಆ ಮತಸ್ಥರು ಸಕಲ ಜನರೂ ಶಾಂತಚಿತ್ತರಾಗಿ, ಭಗವಂತನಲ್ಲಿ ಭಕ್ತಿಯುಳ್ಳವರಾಗಿ ಇರಬೇಕೆಂದು ಉಪದೇಶಿಸುತ್ತಿರುವರು. ಅವರಲ್ಲಿ ಸಮದೃಷ್ಟಿಯೂ ಧರ್ಮೌದಾರ್ಯವೂ ವಿಶೇಷವಾಗಿರುವುದು. ಶುಷ್ಕ ಧರ್ಮಾಭಿಮಾನವು ಇವರಿಗೆ ಸಂಬಂಧಿಸದು. ಇವರ ಉಪದೇಶ ಪದ್ಧತಿಯು ಇತರ ಯಾವಮತಸ್ಥರಿಗೂ ವಿರೋಧವಾದುದಲ್ಲ. ಈ ಮತಸ್ಥರು ಅನ್ಯಮತಸ್ಥರೊಂದಿಗೆ ಧರ್ಮ ವಿಚಾರವಾಗಿ ಕಲಹ ಮಾಡಿದರೆಂಬ ಸಂಗತಿ

ಯನ್ನು ಯಾರೂ ಎಂದೂ ಕೇಳಿದವರಿಲ್ಲ. ಸ್ವಮತ-ಭೂಷಣಕ್ಕಾಗಿ ಪರ ಮತ ದೂಷಣೆಯು ಈಯೊಂದು ಸಂಗಡದಲ್ಲಿ ಮಾತ್ರ ಕಂಡು ಬಾರದಿರುವುದು ಅತ್ಯಂತ ಸಂತೋಷಪ್ರದ ವಿಚಾರವು. ಸಕಲ ಮತಸ್ಥರೂ, ಈ ಮತಸ್ಥರಲ್ಲಿ ಕಂಡು ಬರುವ ಈ ಸುಗುಣಗಳನ್ನು ಅನುಸರಿಸುವರಾದರೆ, ಲೋಕದಲ್ಲಿ ಧರ್ಮದ ಹೆಸರಿನಿಂದ ಹರಿಯುವ ರಕ್ತ ಪ್ರವಾಹದ ಬರತೆಯು ಬತ್ತಿ ಹೋದೀತಲ್ಲವೆ!

ಇಂತಹ ಉತ್ತಮ ಧರ್ಮಪದ್ಧತಿಯನ್ನೊಂದನ್ನು ಪ್ರಪಂಚಕ್ಕೆ ಬೋಧಿಸಿದ ಯಾವ ಶ್ರೀ ಕಬೀರದಾಸರು ಲೋಕ ಸಂಗ್ರಹಣ ಕಾರ್ಯವನ್ನು ನೆರವೇರಿಸಿದರೋ, ಶ್ರೀ ರಾಮಭಕ್ತಾಗ್ರೇಸರರಾದ ಅವರ ಈ ಪವಿತ್ರ ನಾಮವು ಮಹೋನ್ನತವಾದುದಾಗಿ, ಹಿಂದೂ ಮುಹಮ್ಮದೀಯ ಜನಸಮಾಜದಲ್ಲಿ ಆಗಾಗ ಕೇವಲ ಅಲ್ಪಕಾರಣಗಳಿಗಾಗಿ ಉಂಟಾಗುತ್ತಿರುವ ವಿವಾದ ವ್ಯವಹಾರಗಳೆಂಬ ರೋಗವನ್ನು ಅಂತಗೊಳಿಸಿ, ಈ ಎರಡು ಸಮಾಜದವರಲ್ಲೂ ಪರಸ್ಪರ ಸ್ನೇಹ ಪ್ರೇಮ ಸೌಜನ್ಯಾದಿಗಳು - ಲೋಕದಲ್ಲಿ ಶಾಂತಿ ಶಾಲ್ಮ ಧರ್ಮಸಹಿಷ್ಣುತೆಗಳು ಎಂಬ ಸದಾರೋಗ್ಯಭಾಗ್ಯವನ್ನು ತಂದು ಕೊಡುವಲ್ಲಿ ಅವ್ಯಕ್ತೌಷಧದಂತೆ ಸಹಕಾರಿಯಾಗಲಿ. ಅನೀತಿ ಅಶಾಂತಿ ಅಧರ್ಮಗಳು ನಾಶವಾಗಿ ಶಾಂತಿ ಧರ್ಮಗಳು ಸ್ಥಾಪನೆಯಾಗಲಿ. ಅಂತಾಗುವಂತೆ ಶ್ರೀರಾಮಚಂದ್ರನ ಪರಮಾನುಗ್ರಹವಾಗಲಿ.

ತಥಾಸ್ತು.



ಸುಬೋಧ ಪ್ರೆಸ್ ಬೆಂಗಳೂರು ಸಿಟಿ.

ಶ್ರೀರಾಮ ಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

(ಸಚಿತ್ರ ಮಾಸ ಪುಸ್ತಕಾವಳಿ)

ಮುನ್ನುಡಿ :—

ಕರ್ನಾಟಕ ಸಾಮ್ರಾಜ್ಯ ಲಕ್ಷ್ಮೀ ಶಿರೋಭೂಷಣವೋ ಎಂಬಂತೆ, ಅದ್ವಿತೀಯ ವೈಭವದಿಂದ ಮೆರೆದು, ದೇಶವಿದೇಶದ ಇತಿಹಾಸಕಾರರ ಮನ್ನಣೆ ಪ್ರಶಂಸೆಗಳಿಗೆ ಪಾತ್ರವಾಗಿದ್ದು, ವಿಧಿವಶದಿಂದ ಪುನಃ ಚೇತರಿಸಿಕೊಳ್ಳಲೂ ಸಾಧ್ಯವಿಲ್ಲದಂತೆ ನೆಲಸಮವಾದ ವಿಜಯನಗರ ಸಾಮ್ರಾಜ್ಯದ ಕೊನೆಗಾಲದ ಸಂತಾಪಕರ ಚರಿತ್ರೆಯನ್ನು ಹೇಳಬೇಕಾದುದು ಪ್ರಕೃತ ಕಥಾವಿಧಿಯಾಗಿದೆ. ಪೂರ್ವದಿಗ್ಭಾಗದಲ್ಲಿ ಉದಯಿಸಿದ ದಿನಮಣಿಯು ಪ್ರಾತಃಕಾಲದಿಂದಲೂ ಕ್ಷಣಕ್ಷಣಕ್ಕೂ ಏರುತ್ತೇರುತ್ತಾ ನಡುಮಧ್ಯಾಹ್ನದವೇಳೆಗೆ ಅಂತರಿಕ್ಷದಲ್ಲಿ ಮಧ್ಯಭಾಗದ ಮಹೋನ್ನತ ಪ್ರದೇಶವನ್ನು ಸೇರುವನಲ್ಲವೆ! ಆ ಪ್ರದೇಶದಲ್ಲಾದರೂ ಆತನು ನಿಶ್ಚಲನಾಗಿ ನಿಲ್ಲುವನೇನು? ಹಾಗೆ ನಿಲ್ಲುವ ಕಾಲಪ್ರಮಾಣವಾದರೂ ಇಷ್ಟೆಂದು ನಿರ್ಧರಿಸಲು ಸಾಧ್ಯವೆ? ಅಭಿವೃದ್ಧಿ ಮಾರ್ಗದಲ್ಲಿ ಕ್ಷಣಕ್ಷಣಕ್ಕೂ ಏರಿ, ಅಂತಹ ಒಂದು ಮಹೋನ್ನತ ಬಿಂದು ಪ್ರದೇಶವನ್ನು ಸೇರಿ—ಕ್ಷಣಕಾಲಮಾತ್ರ ಅಲ್ಲಿ ನಿಂತನೆಂಬ ವೇಳೆಗೆ, ಉತ್ತರಕ್ಷಣದಿಂದಲೇ ಇಳಿವಿಕೆಯೂ ಪ್ರಾರಂಭಿಸುವುದು. ಈ ಅಭಿವೃದ್ಧಿ ಅವನತಿ ವಿಚಾರವು ಕೇವಲ ಪರಿಭ್ರಮಣಶೀಲವಾದ ಸೂರ್ಯಮಂಡಲವನ್ನು ಮಾತ್ರ ಕುರಿತುದಲ್ಲ: ಲೋಕದಲ್ಲಿನ ಸಮಸ್ತ ಮೃಗಪಕ್ಷಿಗಳ, ಮನುಷ್ಯರ, ಜನಾಂಗಗಳ, ದೇಶಗಳ ಜೀವಿತ ಯಾತ್ರೆಯಲ್ಲೂ ಇದೇ ತತ್ವವೇ ಕಂಡುಬರುವುದು. ಜನನ, ನಿಧಾನವಾಗಿ ಬೆಳೆವಣಿಗೆ, ಪ್ರಾಯದಲ್ಲಾಗಲೀ

ಅಥವ ಐಶ್ವರ್ಯ ಪ್ರತಿಭೆಗಳಲ್ಲಾಗಲೀ ಉನ್ನತ ಮಹೋನ್ನತ ಸ್ಥಿತಿಗಳಿಗೆ ಏರ್ವಿಕೆ, ಅಲ್ಲಿಂದ ಇಳಿವಿಕೆ—ತರುವಾಯ ನಾಶ: ಶಿಶುತನ ಬಾಲ್ಯ ಯೌವನ ಕೌಮಾರ ವಾರ್ಧಿಕ್ಯ ಮೃತ್ಯು,—ಪುನಃ ಶಿಶುತನಾದಿ-ಮೃತ್ಯು ಪರಿಯಂತ! ಹೀಗೆ ಚಕ್ರವತ್ಪರಿವರ್ತನ ಕ್ರಮವು ಎಂದಿಗೂ ತಪ್ಪದು, ಇದು ಅಪ್ರತಿಹತವಾದ ವಿಧಿಯ ನಿಯಮವನ್ನನುಸರಿಸಿ ನಡೆವ ಪ್ರಕೃತಿ ಧರ್ಮವು!—ಜಗನ್ಮಾನ್ಯ ವಿದ್ಯಾರಣ್ಯ ಮುನೀಶ್ವರರ ಅಮೃತ ಹಸ್ತದಿಂದ ಕ್ರಿ.ಶ.೧೩೩೬ ನೆಯ ಧಾತೃ ಸಂವತ್ಸರ ವೈಶಾಖ ಶುದ್ಧ ಪಂಚಮೀ ಶುಭ ಮುಹೂರ್ತದಲ್ಲಿ ಸ್ಥಾಪಿತವಾಗಿ, ಹರಿಹರ - ಬುಕ್ಕರಾಯಾದಿ ನರವರೇಣ್ಯರಿಂದ ಪೋಷಿತವಾಗಿ, ಸುತ್ತುಮುತ್ತಿನ ತುರುಷ್ಕ ಪ್ರಭುಗಳ ಅಸೂಯೆಗೂ, ವಿದೇಶೀಯ ಐತಿಹಾಸಿಕರ ಪ್ರಶಂಸೆಗೂ ಪಾತ್ರವಾಗುತ್ತ ಅಭಿವೃದ್ಧಿಯಾದ ವಿಜಯನಗರವು, ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ಸಿಂಹಾಸನವನ್ನೇರಿದ ಶ್ರೀ ಕೃಷ್ಣದೇವರಾಯ ರಾಜಮಾರ್ತಾಂಡನ ಕಾಲದಲ್ಲಿ ವೈಭವಶಿಖರದ ಕೋಡುಗಲ್ಲನ್ನೇರಿತು. ಕೃಷ್ಣದೇವರಾಯನ ತರುವಾಯ ಅಚ್ಯುತರಾಯನು ಆಳಿದ ಹನ್ನೆರಡು ವರ್ಷಕಾಲವೇ ಅದರ ವೈಭವಪೂರ್ಣತೆಯ ಕಾಲವೆನ್ನಬಹುದು. ಅಚ್ಯುತರಾಯನ ಪ್ರಭುತ್ವಕ್ಕೊಳಪಟ್ಟಿದ್ದ ಈ ಹನ್ನೆರಡುವರ್ಷವೇ, ವಿಜಯನಗರ ಸಾಮ್ರಾಜ್ಯವು—ನಡು ಮಧ್ಯಾಹ್ನದ ಸೂರ್ಯಬಿಂಬದಂತೆ ವೈಭವಪೂರ್ಣಸ್ಥಿತಿಯಲ್ಲಿದ್ದ-ಅನಂತ ಕಾಲ ಪ್ರಮಾಣದಲ್ಲಿನ ಲವಮಾತ್ರದ ಕಾಲವು. ಒಡನೆಯೆ ಆತನ ತರುವಾಯ ಸಿಂಹಾಸನವನ್ನೇರಿ ದುರ್ಮರಣಕ್ಕೆ ಗುರಿಯಾದ ವೆಂಕಟರಾಯನ ಕಾಲದಲ್ಲಿ ಸಾಮ್ರಾಜ್ಯವು ಅಧೋಮುಖವಾಗಿ ಹೆಜ್ಜೆಯನ್ನಿಟ್ಟಿತು. ಅತ್ಯುನ್ನತ ಸ್ಥಿತಿಯನ್ನು ಹೊಂದಿದ್ದ ಅದರ ಪತನಕ್ಕೆ ಹೇತುವು ಪ್ರಾರಂಭವಾದುದು ಇಲ್ಲಿಂದಲೇ ಎನ್ನಬಹುದು ಮುಂದೆ ಸದಾಶಿವರಾಯನ ಕಾಲದಲ್ಲಿ ಆತನನ್ನು ಸೆರೆಯಲ್ಲಿಟ್ಟು, ಅಲೌಕಿಕ ಪ್ರಾಥಿಮೆಯಿಂದ ರಾಜ್ಯಾಧಿಕಾರವನ್ನು ನಡೆಯಿಸಿದ ನಮ್ಮ ಕಥಾನಾಯಕನ ಪ್ರಭುತ್ವವು ಅದರ ಅಳಿವನ್ನು ಸೂಚಿಸುವ ಕುರುಹು. ಶ್ರೀ ರಾಮರಾಜನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ತನ್ನ ಪರಮಾವಧಿ ಪ್ರತಾಪವನ್ನು ಪ್ರಕಟಿಸಿತಾದರೂ ಅದು, ನಂದಾವ ದೀಪವು ಭುಗ್ಗೆಂದು

ಉರಿದು ಒಡನೆ ಆರಿಹೋಗುವಂತೆ, ಉತ್ಕ್ರಮಣಾವಸ್ಥೆಯಲ್ಲಿ ತೋರಿ ಬಂದ ಅಸಾಮಾನ್ಯ, ಚಟುವಟಿಕೆಯಂತಹುದಲ್ಲದೆ ಸಹಜೋನ್ನತಿಯಲ್ಲ !

ವ್ಯಕ್ತಿಯಾಗಲಿ, ಜನಾಂಗವಾಗಲಿ, ರಾಷ್ಟ್ರವಾಗಲಿ ವಿಧಿಯ ಆಜ್ಞೆಗೊಳಪಟ್ಟು ಜನಿಸುವುದು, ಬೆಳೆಯುವುದು, ಕಾಲಗತಿಯನ್ನನುಸರಿಸಿ ನಾಶವಾಗವುದು. ಇದು ತಪ್ಪದು. ಆದರೆ—"ಹೇಗೂ ನಾಶವಾಗತಕ್ಕದಾದುದರಿಂದ ಬೆಳೆವಣಿಗೆಯನ್ನು ಕುರಿತು ಪ್ರಯತ್ನವೇಕೆ? ಕಷ್ಟನಷ್ಟಗಳನ್ನನುಭವಿಸುವ ಕೋಟಲೆಯೇಕೆ ? ಹುಟ್ಟಿದ ತಪ್ಪಿಗೆ ಹೇಗೋ ಇದ್ದು ಒಂದು ದಿನ ಬಿದ್ದುಹೋಗಿ ಬಿಟ್ಟರಾಯಿತು" ಎಂದು, ಜೀವಿತದ ವಿಷಯದಲ್ಲಿ ಕೇವಲ ಉದಾಶೀನ ಭಾವದಿಂದ ಇರತಕ್ಕವರಿಗೆ ಇಂದಿಗೂ ನಮ್ಮಲ್ಲಿ ಕೊರತೆಯಿಲ್ಲ. 'ಹೇಗೂ ಇಂದಿಲ್ಲದಿದ್ದರೆ ನಾಳೆಯಾದರೂ ಸಾಯಬೇಕಲ್ಲಾ ! ಅಶಾಶ್ವತವಾದ ಈ ಬಾಳ್ವಿಕೆಯನ್ನು ಕುರಿತು ಇಷ್ಟು ಕಾರ್ಪಣ್ಯವೇಕೆ' ಎಂಬೀ ಉದಾಶೀನಭಾವವೇ—ಈ ಅಭಾವ ವೈರಾಗ್ಯ ಮನೋವೃತ್ತಿಯೇ ನಮ್ಮ ಹೀನಸ್ಥಿತಿಗೆ ಮುಖ್ಯ ಕಾರಣವೆಂದು ಇಲ್ಲಿ ಮತ್ತೊಮ್ಮೆ ಹೇಳಬಯಸುತ್ತೇವೆ. 'ಇಂದಲ್ಲದಿದ್ದರೆ ನಾಳೆಯಾದೂರ ಸಾಯಬೇಕಲ್ಲಾ' ಎಂದು ರಾಗ ಎಳೆಯುತಕ್ಕವರನ್ನು ಪ್ರತಿಭಟಿಸಿ–'ಇಲ್ಲ-ಬ್ರಹ್ಮಕಲ್ಪಪರ್ಯಂತ ಬದುಕಿರುವಿರಿ' ಎಂದು ನಾವು ಹೇಳಬಯಸುವುದಿಲ್ಲ—ಹೇಳಲಾರೆವು. ಆದರೆ ನಾವು ಹೇಳುವುದಿಷ್ಟೆ ! 'ನೀವು ಹೇಳುವಂತೆ ನಾಳೆ ಸಾಯುವವರೆಗಾದರೂ ಬದುಕಿರಬೇಕಲ್ಲವೋ? ' ಎಂದು.—"ಅವರೆಗಾದರೂ ಕಂಡವರಿಗೆ ಅಡಿಯಾಳಾಗಿ, ಅವರ ಕಾಲ್ತುಳಿತಕ್ಕೆ ಸಿಕ್ಕಾಗಿ, ಅಪಹಾಸ್ಯಕ್ಕೆ ಗುರಿಯಾಗಿ ನಿಲ್ಲದಂತೆ, ಸ್ವಾಭಿಮಾನ, ಕರ್ತವ್ಯತಾಜ್ಞಾನ, ಪುರುಷಪ್ರಯತ್ನದಲ್ಲಿ ನಂಬಿಕೆ, ದೈವದಲ್ಲಿ ವಿಶ್ವಾಸ, ಸ್ವಜನರಲ್ಲಿ ಪ್ರೇಮ ಮುಂತಾದುವುಗಳನ್ನು ಗಳಿಸಿ 'ಮನುಷ್ಯ' ಎಂಬ ಪದಕ್ಕೆ ಗೌರವವನ್ನೀವಂತೆ ಬದುಕಬೇಕಲ್ಲವೋ ?" ಎಂದು. ಹಿಂದಿನವರೆಲ್ಲರೂ,—'ಜಾತಸ್ಯಹಿಧ್ರುವೋಮೃತ್ಯುಃ' ಎಂಬುದನ್ನು ತಿಳಿದಿದ್ದರೂ, ಧೀರರಾಗಿ ಪ್ರಪಂಚವೆಂಬ ನಾಟಕರಂಗದಲ್ಲಿ ತಮ್ಮತಮ್ಮ ಪಾಲಿಗೆ ಬಂದ ಪಾತ್ರಗಳನ್ನು ನಟಿಸುವುದರಲ್ಲಿ ಹಿಂಜರಿಯದೆ, ಕರ್ತವ್ಯದಕ್ಷರಾಗಿದ್ದು

ಹೇಗೆ, ತಮಗೆ ಜನ್ಮವಿತ್ತ ಮಾತಾಪಿತೃಗಳ, ನಾಡಿನ, ಜನ್ಮಭೂಮಿಯ ಋಣದಿಂದ ಮುಕ್ತರಾದರೋ, ಹಾಗೆಯೇ ನಾವಾದರೂ, ಸದಾ ಮೃತ್ಯುವನ್ನು ಮುಖಕ್ಕೇ ಕಟ್ಟಿಕೊಂಡು ಮೂದೇವಿಗಳಾಗಿ ಕುಳ್ಳಿರದೆ, ಕಷ್ಟ-ನಷ್ಟ, ಜಯ-ಅಪಜಯ, ಜೀವನ-ಲಯ, ಮುಂತಾದುವುಗಳನ್ನು ಲಕ್ಷಿಸದೆ, ಕರ್ತವ್ಯ ತತ್ಪರರಾಗಿ ಜೀವಿತಗಳನ್ನು ಸಾರ್ಥಕಗೊಳಿಸಿಕೊಳ್ಳಬೇಕಾದುದು ಆವಶ್ಯಕವು. ನಿಶ್ಶಂಕೆಯಿಂದ ಕಾರ್ಯರಂಗಕ್ಕಿಳಿದು ಫಲಾಫಲಗಳ ವಿಷಯದಲ್ಲಿ ನಿರ್ಲಿಪ್ತರಾಗಿ ಜೀವನ ಸಂಗ್ರಾಮದಲ್ಲಿ ನಿಷ್ಕಾಮಭಾವದಿಂದ ಹೀಗೆ ಹೋರಾಡುವಂತಹ ಮನೋಭಾವವನ್ನು ನಮ್ಮ ಕಥಾನಾಯಕರಂತಹ ಮಹನೀಯರ ಜೀವಿತಗಳು, ನಮ್ಮವರಲ್ಲಿ ಒಡಮೂಡಿಸಿದರೆ,ಅಂದಿಗೆ ಗ್ರಂಥಮಾಲೆಯ ಮೂಲೋದ್ದೇಶವು ಸಾರ್ಥಕಗೊಳ್ಳುವುದು. ನಮ್ಮ ಕಥಾನಾಯಕನು ವಿಧಿಯ ವಿಚಿತ್ರಗತಿಗಳಿಗೊಳಪಟ್ಟು ನಾಶವಾದ ಆ ಮಹಾ ಸಾಮ್ರಾಜ್ಯದ ಕೊನೆಗಾಲದಲ್ಲಿ-ನಾಶಕಾರಣನೋ ಎಂಬಂತೆ ಮುಖ್ಯ ವ್ಯಕ್ತಿಯಾಗಿ ನಿಂತಿದ್ದನಾದರೂ, ತನ್ನ ಪಾಲಿಗೆ ಬಂದಿದ್ದ ಕಾರ್ಯಗಳನ್ನು ಆದ್ಯಂತವಾಗಿ ನಡೆಯಿಸುವುದರಲ್ಲಿ ಶಕ್ತಿ, ಯುಕ್ತಿ, ಧೈರ್ಯ ಶೌರ್ಯಗಳನ್ನು ಪ್ರಕಟಿಸಿ, ಅರಿವರ್ಗಗಳನ್ನು ತಲೆಯೆತ್ತಗೊಡದಂತೆ ಅಡಗಿಸಿ ತೇಜಃಪುಂಜನಾಗಿ ಮೆರೆದವನಾದುದರಿಂದ ಈ ಕರ್ನಾಟಕ ವೀರಶಿರೋಮಣಿಯ ಚರಿತ್ರವನ್ನೂ ವಾಚಕ ಮಹಾಶಯರು ಯಥಾಪೂರ್ವ ಪ್ರೇಮಾದರಗಳಿಂದ ಸ್ವೀಕರಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಇತಿ,

ಬೆಂಗಳೂರು,
ಆಕ್ಟೋಬರು, ೧೯೨೮.

ಸುಜನವಿಧೇಯ,
ಯಂ. ರಾಮರಾವ್.

ಶ್ರೀರಾಮ ಸಹಾಯಂ

ವಿಜಯನಗರದ ರಾಜಶ್ರೇಷ್ಠ

# ಶ್ರೀ ರಾಮ ರಾಜ

ಅಧ್ಯಾಯ ೧. "ಕಿಂಚಿತ್ಪೂರ್ವಕಥಾ"

ಅಂಗವಂಗ ಕಳಿಂಗ ಕಾಶ್ಮೀರ ಘೂರ್ಜರ-ಆಂಧ್ರ ದ್ರವಿಡ ಕರ್ಣಾಟಕಾದಿ ಛಪ್ಪನ್ (ಐವತ್ತಾರು) ದೇಶಗಳನ್ನು ಒಳಗೊಂಡುದೂ ನಮ್ಮ ಮಾತೃಭೂಮಿಯೂ ಆದ ಈ ಭರತಖಂಡವು ಅತಿ ಪುರಾತನವಾದುದೂ, ಅತಿ ಮಹತ್ವದ ಪೂರ್ವಚರಿತ್ರೆಯನ್ನುಳ್ಳುದೂ ಆಗಿದೆ. ಆ ಐವತ್ತಾರು ದೇಶಗಳಲ್ಲಿ ಒಂದೊಂದೂ ತೇಜಸ್ವಿಗಳಾದ ಕ್ಷತ್ರಿಯ ರಾಜವಂಶಜರಿಂದ ಆಳಲ್ಪಟ್ಟುದಾದುದರಿಂದ ಪ್ರತಿಯೊಂದರಲ್ಲೂ ಅದನ್ನು ಆಳಿದ ರಾಜವಂಶಾವಳಿ, ಅವರ ಆಳ್ವಿಕೆಯ ಕಾಲದಲ್ಲಿ ನಡೆಯಿಸಿದ ಮುಖ್ಯ ಕಾರ್ಯಗಳು, ಆ ರಾಜರು ಮಾಡಿದ ದಾನಧರ್ಮಾದಿ ಮಹತ್ಕಾರ್ಯಗಳು, ನಡೆಸಿದ ಯುದ್ಧಗಳು, ಅವುಗಳಲ್ಲಿ ಅವರು ಪ್ರಕಟಿಸಿದ ಧೈರ್ಯವೀರ್ಯಾದಿಗಳ ವರ್ಣನೆ ಮುಂತಾದ ಹಲವು ವಿಚಾರಗಳನ್ನು, ಆಯಾ ರಾಜರ ಆಸ್ಥಾನಗಳಲ್ಲಿರುತ್ತಿದ್ದ ವಿದ್ವಾಂಸರೂ ಕವಿಗಳೂ-ತಮ್ಮ ಮುಂದಿನ ಸಂತತಿಯವರಿಗೆ ತಿಳಿಯಬೇಕೆಂದು ಯಾವುದಾದರೊಂದು ಬಗೆಯಿಂದ ಸಂಗ್ರಹಿಸಿಡದೆ, ಕೇವಲ ರಾಜಾನ್ನದಿಂದ ಬೊಜ್ಜು ಬೆಳೆಸಿಕೊಂಡು ವ್ಯರ್ಥಕಾಲಕ್ಷೇಪ ಮಾಡುತ್ತಿದ್ದರೆಂದು ಭಾವಿಸುವುದು ತಪ್ಪು. ಪಾಶ್ಚಾತ್ಯರು ಯಾವುದನ್ನು ಚರಿತ್ರೆ (History) ಎನ್ನುತ್ತಾರೋ ಆ ದೃಷ್ಟಿಯಿಂದ ನಮ್ಮಲ್ಲಿ ದೇಶಚರಿತ್ರೆಯು ಬರೆದಿಡಲ್ಪಡದೆ ಇರಬಹುದು! ಆದರೆ, ಚಾರಿತ್ರಿಕ ಸಾಮಗ್ರಿಗಳಿಗೆ ಕೊರತೆ ಇಲ್ಲವೆಂಬುದು ಸ್ಪಷ್ಟವಿದೆ! ಕಾವ್ಯಗಳು, ನಾಟಕಗಳು, ಕಥೆಗಳು, ನಾಡುಗೀತಗಳು, ಲಾವಣಿಗಳು, ಮುಂತಾದುವುಗಳ

ಮೂಲಕ ದೇಶಚರಿತ್ರೆಯ ಆದ್ಯಂತ ವೃತ್ತಾಂತವೂ ತಿಳಿಯಲು ಅವಕಾಶ ವುಂಟು. ಅಲ್ಲದೆ, ಅನೇಕ ಪುರಾತನ ದೇವಾಲಯಗಳು, ಜೈನಬಸದಿಗಳು ಬೌದ್ಧರ ಸ್ತೂಪಗಳು ಮುಂತಾದುವುಗಳ ಬಳಿ ಇರುವ ಶಿಲಾಲೇಖ ಗಳಿಂದಲೂ ಪೂರ್ವಚರಿತ್ರೆಯು ವ್ಯಕ್ತವಾಗುವುದು. ಅಲ್ಲದೆ ಆಯಾ ಕಾಲದಲ್ಲಿ ರಾಜಮನ್ನಣೆಗೆ ಪಾತ್ರರಾಗಿದ್ದ ಮಹಾಜನಗಳಿಗೆ ಕೊಡ ಲ್ಪಟ್ಟಿದ್ದ ಮಾನ್ಯ-ಭೂಮಿಗಳನ್ನು ಕುರಿತ ತಾಮ್ರದ ಶಾಸನಗಳೂ ಅಲ್ಲಲ್ಲೆ ವಿಪುಲವಾಗಿ ದೊರೆಯುತ್ತಿವೆ. ಸಾಲದುದಕ್ಕೆ ಯುದ್ಧ ಮಾಡಿದ ರಾಜರು ತಮ್ಮ ಜಯಸೂಚನಾರ್ಥವಾಗಿ ಸ್ಥಾಪಿಸಿದ ಜಯಸ್ತಂಭಗಳೂ ಕೆಲವೆಡೆ ಇವೆ. ಇವೆಲ್ಲವುಗಳ ಸಹಾಯದಿಂದ ದೇಶಚರಿತ್ರೆಯನ್ನು ಸಂಗ್ರಹಿಸಿ ಸಿದ್ಧಗೊಳಿಸಲು ಸಾಧ್ಯವಿಲ್ಲವೆ? ಚರಿತ್ರೆಯೆಂದರೆ ಯಾವ ನೊಬ್ಬ ರಾಜನು ಹುಟ್ಟಿದ ಅಥವ ಸತ್ತ ತಿಥಿ ವಾರ ನಕ್ಷತ್ರಗಳು, ಅವನ ಊಟ ಉಡಿಗೆಗಳು, ಅವನು ಮದುವೆಯಾದ ಹೆಂಡಿರ ಸಂಖ್ಯೆ, ತಾರೀಕು ಗಂಟೆಗಳೊಂದಿಗೆ ಅವನು ನಡೆಸಿದ ಯುದ್ಧಗಳ ವಿವರ, ಕೊಂದ ಶತ್ರು ಸೈನ್ಯದ ಸಂಖ್ಯೆ ಎಂಬುದು ಮಾತ್ರ ನಮ್ಮ ಭಾವನೆಯಾಗಿದ್ದರೆ ಈಗ ಚರಿತ್ರೆಯನ್ನು ಬರೆಯತೊಡಗುವವನು, ತ್ರಿಕಾಲಜ್ಞಾನಿಯಾಗಿದ್ದ ರಲ್ಲದೆ, ಹಿಂದಿನ ಚರಿತ್ರೆಯನ್ನು ಸಿದ್ಧಗೊಳಿಸಲು ಸಾಧ್ಯವಿಲ್ಲ. ಹಾಗಲ್ಲದೆ ಒಂದು ದೇಶವನ್ನು ಪಾಲಿಸಿದ ರಾಜ, ಆತನ ವಂಶ, ಆ ವಂಶದಲ್ಲಿ ಹೆಸ ರಾದ ರಾಜರು, ಅವರ ಕಾಲದಲ್ಲಿ ದೇಶವಿದ್ದ ಸ್ಥಿತಿ, ಆಗಿನ ನಾಗರಿಕತೆ, ಪ್ರಜಾಪರಿವಾರಗಳ ವ್ಯವಹಾರಗಳಲ್ಲಿ ತೋರಿಬರಬಹುದಾದ ಉನ್ನತಿ ಅಥವಾ ಅಧೋಗತಿ, ಧಾರ್ಮಿಕಸ್ಥಿತಿಯ ಬೆಳವಣಿಗೆ ಅಥವಾ ನಾಶ, ಈ ಮುಂತಾದುವುಗಳು ದೇಶಚರಿತ್ರೆಯ ತಿರುಳೆಂಬ ಭಾವನೆ ಇರುವುದಾ ದರೆ, ಮೇಲ್ಕಂಡ ಸೂಚನೆಗಳು ದೇಶ ಚರಿತ್ರೆಯನ್ನು ಸಂಗ್ರಹಿಸುವಲ್ಲಿ ಅಮೌಲ್ಯ ನಿಧಿಗಳಾಗದಿರವು! ಆದರೆ ಹಾಗೆ ಸಂಗ್ರಹಿಸುವುದೂ ಅಧಿಕ ಪರಿಶ್ರಮಕ್ಕೆ ಸಾಧ್ಯವಲ್ಲದೆ, ಸುಮ್ಮನೆ ಕುಳಿತು ಆಗಬೇಕೆಂದರೆ ಆಗ ತಕ್ಕುದಲ್ಲ!—

ನಮ್ಮಲ್ಲಿ ದೇಶೀಯ ಸಂಸ್ಥಾನಗಳವರೂ, ಆಂಗ್ಲೇಯ ಸರ್ಕಾರದ ವರೂ, ಈ ಸಾಮಗ್ರಿಗಳಿಂದ ಚರಿತ್ರೆಯನ್ನು ರಚಿಸುವ ವಿಷಯದಲ್ಲಿ

ತಕ್ಕಷ್ಟು ಪ್ರೋತ್ಸಾಹಕೊಟ್ಟು ಪ್ರಯತ್ನಿಸುತ್ತಿದ್ದಾರಾದರೂ, ಪ್ರಜಾ ಸಾಮಾನ್ಯವು ಈ ಭಾಗದಲ್ಲಿ ಮಾಡಬಹುದಾದ ಕೆಲಸವೂ ಬೇಕಾದಷ್ಟಿದೆ! ನಮ್ಮಲ್ಲಿ ದೇಶ ವಿದೇಶಗಳ ಚರಿತ್ರೆಗಳನ್ನು ಪಠಿಸಿ ಐತಿಹಾಸಿಕ ಜ್ಞಾನ ವನ್ನು ಗಳಿಸಿಕೊಂಡ ಅನೇಕಮಂದಿ ವಿದ್ಯಾವಂತರು ಇದ್ದಾರಲ್ಲವೆ! ಅವರು ತಾವು ವಿದ್ಯಾರ್ಥಿ ದೆಸೆಯಲ್ಲಿ ಗಳಿಸಿಕೊಂಡ ಆ ನಿಧಿಯನ್ನು ಹೇಗೆ ಉಪಯೋಗಿಸಿಕೊಳ್ಳುವರು? ಅವನ್ನು ಯೋಗ್ಯರೀತಿಯಲ್ಲಿ ಉಪಯೋಗಿಸಿ ಕೊಳ್ಳದಿದ್ದರೆ ಅವಕ್ಕಾಗಿ ಪಟ್ಟ ಶ್ರಮವೂ ಕಾಲವೂ ವ್ಯರ್ಥವೆನಿಸಲಾರದೆ? ಇಂತಹ ಮಹನೀಯರು, ಆ ತಮ್ಮ ಪ್ರಜ್ಞೆಯನ್ನು ಉಪಯೋಗಿಸಿ, ತಾವಿರುವ ಸ್ಥಳವು ಯಾವ ಬಗೆಯಲ್ಲಾದರೂ ಐತಿಹಾಸಿಕ ಸಾಮಗ್ರಿ ಯನ್ನು ಒದಗಿಸಿಕೊಡಲು ಸಹಾಯಕವಾಗುವುದೇ ಎಂದು ವಿಮರ್ಶಕ ದೃಷ್ಟಿಯಿಂದ ವಿಚಾರ ನಡೆಸಿ, ದೊರಕುವ ಸಕಲ ಸಂಗತಿಗಳನ್ನೂ ಸಂಗ್ರ ಹಿಸಿ ಬರೆದು ಪ್ರಕಟಿಸುತ್ತಾ ಬರುವರಾದರೆ ಖರ್ಚು ವೆಚ್ಚಗಳಿಲ್ಲದೆಯೇ ಎಷ್ಟು ಮಟ್ಟಿನ ಐತಿಹಾಸಿಕ ಸಂಗ್ರಾಹಕ ಕಾರ್ಯವು ನಡೆಯುವುದಲ್ಲವೆ? ನಿಜ, ನಮ್ಮವರು ಮುಖ್ಯವಾಗಿ ಆಂಗ್ಲೇಯ ಭಾಷಾಭ್ಯಾಸಿಗಳು, ಈ ವಿಷ ಯಕ್ಕೆ ಗಮನಕೊಟ್ಟು ಕೆಲಸ ಮಾಡತೊಡಗುವರಾದರೆ ಈ ಭಾಗದಲ್ಲಿ ಅಧಿಕ ಸೇವೆ ನಡೆದೀತು!—

ದೇಶಚರಿತ್ರೆಯ ಜ್ಞಾನವು ಆಯಾ ಜನಾಂಗದವರ ಮೇಲೆ ಉಂಟು ಮಾಡುವ ಪರಿಣಾಮವು ಅಗಣಿತವಾಗಿದೆ. ದೇಶೀಯರ ನಿರುತ್ಸಾಹ ಹೃದ ಯದಲ್ಲಿ ಅಕ್ಷಯ ಧೈರ್ಯೋತ್ಸಾಹಗಳನ್ನು ತುಂಬುವುದು, ಪೂರ್ವಿಕರ ಮಹತ್ಕಾರ್ಯ ವರ್ಣನೆಗಳಿಂದ ನಿಬಿಡವಾದ ದೇಶಚರಿತ್ರೆಯು: ಶುಷ್ಕ ದೇಹಗಳಲ್ಲಿ ರಕ್ತಸಂಚಾರವನ್ನು ಉಂಟುಮಾಡಿ ನವಚೇತನವನ್ನು ತಂದೀ ವುದು ದೇಶಚರಿತ್ರೆಯು. ಆಯಾ ದೇಶದ ದಿವ್ಯಾದರ್ಶಗಳನ್ನು ತಮ್ಮ ನಿತ್ಯಾಚರಣೆಯಲ್ಲಿ ತಂದು ಜೀವಿತಗಳನ್ನು ಸಾರ್ಥಕಗೊಳಿಸಿಕೊಂಡ ಮಹಾ ಪುರುಷರ ದಿವ್ಯಚರಿತ್ರೆಗಳಿಂದ ಯಾವ ದೇಶದ ಇತಿಹಾಸವು ನಿಬಿಡವಾಗಿರು ವುದೋ ಅದನ್ನು ಪಠಿಸಿದರೆ, ಮನುಷ್ಯನಿಗೆ ತಾನು ಯಾರು, ತನ್ನ ದೇಶ ವಾವುದು, ಅದರ ಆಚಾರ ವಿಚಾರಗಳೇನು, ಧರ್ಮವಿಧಿಯೇನು, ರಾಜ್ಯ ಭಾರ ವಿಚಾರವೇನು, ಅದರಲ್ಲಿ ಪ್ರಜೆಯಾದ ತನ್ನ ಸ್ಥಾನವೆಂತಹುದು.

ಹಿಂದೆ ಹೇಗೆ ನಡೆದುದರಿಂದ ಏನೇನು ಸಾಧಕ ಬಾಧಕಗಳುಂಟಾದುವು, ಮುಂದೆ ಹೇಗೆ ನಡೆದು ಜೀವಿತವನ್ನು ಸುಖಮಯವಾಗಿ ಮಾಡಿಕೊಳ್ಳಲು ಸಾಧ್ಯವಿದೆ ಎಂಬ ಮುಂತಾದ ವಿಷಯಗಳೆಲ್ಲವೂ ದೇಶಚಾರಿತ್ರ ಪಠಣೆಯಿಂದ ಗೋಚರಕ್ಕೆ ಬರುವುವು. ಈ ಜ್ಞಾನದಿಂದ, ಮನುಷ್ಯನು ಯುಕ್ತಾಯುಕ್ತ ಪರಿಜ್ಞಾನವನ್ನು ಹೊಂದಿ, ಲೌಕಿಕದಲ್ಲಿ ತನ್ನ ಸ್ಥಾನವನ್ನು ತಿಳಿದು ನಡೆಯಲು ಸಹಾಯಕವಾಗುವುದು. ಹಿಂದಿನ ಲೋಪಗಳಿಂದ ತಿಳಿವಳಿಕೆಯನ್ನು ಹೊಂದಿ, ಮುಂದೆ ಮಾರ್ಗವನ್ನು ಸುಗಮ ಪಡಿಸಿಕೊಳ್ಳಲು ಅನುಕೂಲವಾಗುವುದು. ಆದುದರಿಂದ ಅಭಿವೃದ್ಧಿ ಮಾರ್ಗದಲ್ಲಿ ನಡೆಯಲಪೇಕ್ಷಿಸುವ ಪ್ರತಿಯೊಬ್ಬನೂ ತನ್ನ ಹಿರಿಯರ ಸಂಬಂಧವಾದ, ತನ್ನ ದೇಶಸಂಬಂಧವಾದ ಚರಿತ್ರೆಗಳನ್ನು ಓದಲೇಬೇಕು. ಸದ್ಯಃ ಕನ್ನಡಿಗರು, ತಮ್ಮ ಪೂರ್ವ ಚರಿತ್ರೆಯನ್ನೂ, ತಮ್ಮ ಪೂರ್ವಿಕರ ಅದ್ಭುತ ಕಾರ್ಯ ಕಲಾಪಗಳನ್ನೂ ಕಣ್ದೆರೆದು ನೋಡಿ ಸ್ಫೂರ್ತಿಗೊಳ್ಳಬೇಕು. ಒಂದುಕಾಲದಲ್ಲಿ ತಮ್ಮವರೂ ಮಹಾತೇಜಸ್ಸಂಪನ್ನರಾಗಿ ಖಂಡಾಂತರಗಳವರ ಪ್ರಶಂಸೆಗೂ ಪಾತ್ರವಾಗಿದ್ದಂತಹ ಅಜೇಯಸಾಮ್ರಾಜ್ಯವೊಂದನ್ನು ಸ್ಥಾಪಿಸಿ, ಒಂದೂವರೆ ಶತಮಾನಕಾಲ ಸುತ್ತುಮುತ್ತಲೂ ಮುತ್ತಿದ್ದ ಶತ್ರುಗಳಿಗೆ ದುರ್ಭೇದ್ಯವೆನ್ನಿಸುವಂತೆ ರಕ್ಷಿಸಿಕೊಂಡಿದ್ದರೆಂದು ಸರಿಸಿ ಹೆಮ್ಮೆಗೊಳ್ಳಬೇಕಾಗಿದೆ. ಪುನಃ ಅಂತಹ ಶೌರ್ಯ ಸಾಹಸಗಳನ್ನು ಪ್ರಕಟಿಸಬಲ್ಲ ಮಹತ್ಕಾರ್ಯ ಸಾಧಕರು ಉದಯಿಸಿ ಕರ್ಣಾಟಕವನ್ನು ಜಗತ್ತಿನ ಮನ್ನಣೆಗೆ ಪಾತ್ರವನ್ನಾಗಿಸುವಂತೆ ಪರಿಶ್ರಮ ಪಡಬೇಕಾಗಿದೆ. ಮತ್ತು ಅದರೊಂದಿಗೇ ಯಾವ ಕಾರಣದಿಂದ ಆ ಮಹಾ ಸಾಮ್ರಾಜ್ಯವು ನಾಮಾವಶೇಷವಾಯಿತೋ, ಆ ಕಾರಣವು ತಮ್ಮ ದೇಹ ಮನೋಬುದ್ಧಿಗಳನ್ನು ಪ್ರವೇಶಿಸಿ ನಮ್ಮನ್ನು ಹತವೀರ್ಯರನ್ನಾಗಿ ಮಾಡದಂತೆ ಜಾಗ್ರತೆಗೊಳ್ಳಬೇಕಾದುದೂ ಕರ್ತವ್ಯವಿದೆ.

ವಿದ್ಯಾರಣ್ಯ ಮುನೀಶ್ವರರ ತಪೋಮಹಿಮೆಯೂ, ಹರಿಹರ ಬುಕ್ಕರಾಯರ ಶೌರ್ಯ ಪ್ರತಾಪಗಳೂ ಅಗ್ನಿ ವಾಯುಗಳೆರಡೂ ಸಂಧಿಸಿದಂತೆ ಏಕತ್ರ ಸೇರಿ ಪ್ರಜ್ವಲಿಸತೊಡಗಲು ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯವು ಮಹದ್ವೈಭವಸ್ಥಿತಿಗೇರಿತು. ಮುಂದೆ ಕಾಲಾಂತರದಲ್ಲಿ ವಿಧಿಗತಿ

ಯನ್ನನುಸರಿಸಿ ಅದರ ರೂಪವಳಿಯಿತಾದರೂ, ಭಾರತ ದೇಶದ ಐತಿಹಾಸಿಕ ಕ್ಷೇತ್ರದಲ್ಲಿ ಅದು ನೆಟ್ಟುಹೋದ ಕೀರ್ತಿ ಧ್ವಜವು ಇಂದಿಗೂ ಅದರ ಹೆಸರನ್ನು ಅಳಿಯಗೊಟ್ಟಿಲ್ಲ. ಅದು ಜೀವಂತವಾಗಿದ್ದ ಕ್ರಿ. ಶ. ೧೩೩೬ ರಿಂದ ೧೫೬೫ ನೆಯ ವರ್ಷದವರೆಗಿನ ಕಾಲದಲ್ಲಿ ಮೂರು ವಂಶಗಳ ಅರಸರು ಈ ದೇಶವನ್ನು ಪಾಲಿಸಿದರು. ಹರಿಹರರಾಯ, ಬುಕ್ಕರಾಯ, ಎರಡನೆಯ ಹರಿಹರರಾಯ, ಮೊದಲನೆಯ ದೇವರಾಯ, ಎರಡನೆಯ ದೇವರಾಯ, ಆತನ ಮಗ ಮಲ್ಲಿಕಾರ್ಜುನರಾಯ ಆತನ ತರುವಾಯ ತಮ್ಮ ವಿರೂಪಾಕ್ಷರಾಯ, ಈ ಮುಂತಾದವರು ಆದಿ ಪುರುಷ ಹರಿಹರರಾಯನ ವಂಶಕ್ಕೆ ಸೇರಿದವರು. ಕೊನೆಯವನಾದ ವಿರೂಪಾಕ್ಷರಾಯನು ವಿಷಯಾಸಕ್ತನಾಗಿ ತಿಂದು ಕುಡಿದು ಸ್ತ್ರೀಲೋಲನಾಗಿ ರಾಜ್ಯ ವಿಚಾರದಲ್ಲಿ ಲಕ್ಷ್ಯವಿಡದೆ ಮದೋನ್ಮತ್ತತೆಯಿಂದ ನಡೆಯುತ್ತಿದ್ದುದರಿಂದ ಈತನ ಹಿರಿಯ ಮಗನಾದ ರಾಜಶೇಖರರಾಯನೆಂಬುವನು ಅವನನ್ನು ವಧಿಸಿ ರಾಜನಾದನು. ಆದರೇನು! ರಾಜ್ಯವು ಅವನಿಗೆ ದಕ್ಕಲಿಲ್ಲ. ಅವನ ತಮ್ಮನಾದ ಎರಡನೆಯ ವಿರೂಪಾಕ್ಷನು ಪಿತೃಹಂತಕನಾದ ತನ್ನ ಅಣ್ಣನನ್ನು ವಧಿಸಿ ರಾಜ್ಯವನ್ನು ಆಕ್ರಮಿಸಿದನು. ಭ್ರಾತೃಹಂತಕನಾದ ಆತನ ರಾಜ್ಯಪಾಲನೆಯಾದರೂ ಪ್ರಜೆಗಳಿಗೆ ಎಷ್ಟುಮಾತ್ರವೂ ಸಮ್ಮತವಿಲ್ಲದಿರಲು ಸಮಸ್ತ ಪ್ರಜಾ ಪರಿವಾರದ ಅನುಮತಿ ಸಹಾಯ ಬೆಂಬಲಗಳನ್ನು ಹೊಂದಿ ರಾಜನ ದಂಡನಾಯಕನಾಗಿದ್ದ ಸಾಳುವ ನರಸಿಂಹರಾಜನು ಎರಡನೆಯ ವಿರೂಪಾಕ್ಷನನ್ನು ಕ್ರಿ. ಶ. ೧೪೮೬ ರಲ್ಲಿ ವಧಿಸಿ ಸಿಂಹಾಸನವನ್ನು ಆಕ್ರಮಿಸಿದನು. ಇಲ್ಲಿಗೆ ಪ್ರಥಮ ವಂಶವು ಅಂತ್ಯವಾಯಿತು

ಈ ಸಾಳುವ ನರಸರಾಜನು ಮೂರು ವರ್ಷಕಾಲ ರಾಜ್ಯವಾಳುವ ವೇಳೆಗೇ ಈತನಿಗೆ ಮೃತ್ಯು ಸನ್ನಿಹಿತವಾಯಿತು. ಆ ಕಾಲದಲ್ಲಿ ರಾಜನು ತನ್ನ ಅಣ್ಣನ ಮೊಮ್ಮಗನೂ ಸೇನಾಪತಿಯೂ ಆಗಿದ್ದ ತುಳುವ ನರಸರಾಜನನ್ನು ಕರೆಸಿ ತನ್ನ ಚಿಕ್ಕವಯಸ್ಸಿನ ಇಬ್ಬರು ಮಕ್ಕಳನ್ನೂ ಸೈನ್ಯವನ್ನೂ ಬೊಕ್ಕಸವನ್ನೂ ಆತನಿಗೆ ವಹಿಸಿ, ಆ ಇಬ್ಬರು ಮಕ್ಕಳನ್ನೂ ಪ್ರಬುದ್ಧರನ್ನಾಗಿ ಮಾಡಿ ಅವರಿಗೂ ಅವರ ಹೆಸರಿನಲ್ಲಿ ತಾನೇ ರಾಜ್ಯ

ವನ್ನಾಳುತ್ತಾ ಪ್ರಬುದ್ಧರಾದ ತರುವಾಯ ಅವರಲ್ಲಿ ಯೋಗ್ಯನಾದವನಿಗೆ ರಾಜ್ಯವನ್ನು ಒಪ್ಪಿಸೆಂದು ಆಜ್ಞಾಪಿಸಿ ಮೃತನಾದನು. ತರುವಾಯ ತುಳುವ ನರಸರಾಜನು ರಾಜಾಜ್ಞೆಯಂತೆಯೇ ರಾಜನ ಹಿರಿಯಮಗ ನಾದ ನರಸರಾಜನೆಂಬ ರಾಜಪುತ್ರನನ್ನು ರಾಜ್ಯಾರೂಢನನ್ನಾಗಿಸಿ ಆತನ ಹೆಸರಿನಲ್ಲಿ ತಾನೇ ರಾಜ್ಯವನ್ನಾಳುತ್ತಿದ್ದನು. ಮುಂದೆ ಕೆಲವು ದಿನಗಳೊಳಗಾಗಿಯೇ ಆ ಬಾಲರಾಜನನ್ನು ಯಾರೋ ಸಂಹರಿಸಿ ಬಿಟ್ಟರು. ತರುವಾಯ ಆತನ ತಮ್ಮನನ್ನು ರಾಜಸಿಂಹಾಸನಕ್ಕೆ ತಂದ ರಾಮರೂ, ಸರ್ವಾಧಿಕಾರಿ ತುಳುವ ನರಸರಾಜನು ಸ್ವಲ್ಪಕಾಲದಲ್ಲೇ ಆದೊಂದು ಕಂಟಕವನ್ನೂ ಪರಿಹರಿಸಿಕೊಂಡು, ತಾನೇ ಸಿಂಹಾಸನವನ್ನು ಆಕ್ರಮಿಸಿ ಪಟ್ಟಾಭಿಷಿಕ್ತನಾದನು.

ಈ ತುಳುವ ನರಸರಾಜನಿಗೆ ತಿಪ್ಪಾಂಬಿಕೆ, ನಾಗಲಾಂಬಿಕೆ, ಮತ್ತು ಓಬಾಂಬಿಕೆ ಎಂಬ ಮೂವರು ಭಾರ್ಯೆಯರು. ಇವರಲ್ಲಿ ತಿಪ್ಪಾಂಬಿಕೆಯ ಉದರದಲ್ಲಿ ವೀರನರಸಿಂಹರಾಯನೂ, ನಾಗಲಾಂಬಿಕೆಯ ಉದರದಲ್ಲಿ ಕೃಷ್ಣರಾಯನೂ ಓಬಾಂಬಿಕೆಯಲ್ಲಿ ಅಚ್ಯುತರಾಯನೂ ಜನಿಸಿದರು. ತುಳುವ ನರಸರಾಜನ ತರುವಾಯ ರಾಜ್ಯಕ್ಕೆ ಬಂದ ಹಿರಿಯ ಮಗ ವೀರ ನರಸಿಂಹರಾಯನು ಸ್ವಲ್ಪಕಾಲದಲ್ಲೇ ಕಾಲಗತಿಯನ್ನು ಹೊಂದಲಾಗಿ, ಆತನ ಸವತಿತಮ್ಮನಾದ ಕೃಷ್ಣರಾಯನು, ಕೃಷ್ಣದೇವ ರಾಯನೆಂಬ ಹೆಸರಿನಿಂದ ರಾಜ್ಯಾಧಿಕಾರವನ್ನು ಸ್ವೀಕರಿಸಿ, ಬಹು ಪ್ರತಾಪಶಾಲಿಯೆನಿಸಿ ಇಪ್ಪತ್ತೊಂದು ವರ್ಷಕಾಲ ರಾಜ್ಯಭಾರಮಾಡಿದನು. ಈ ರಾಜಮಾರ್ತಾಂಡನು ಕ್ರಿ. ಶ. ೧೫೩೦ನೆಯ ಸಂ॥ ದಲ್ಲಿ ಕೀರ್ತಿಶೇಷನಾಗಲು, ಈತನ ಸವತಿ ತಮ್ಮನಾದ ಅಚ್ಯುತದೇವರಾಯನು ಸೆರೆಯಿಂದ ಬಿಡುಗಡೆಯಾಗಿ ಸಿಂಹಾಸನಕ್ಕೆ ಬಂದನು.

ಅಚ್ಯುತದೇವರಾಯನು ಸ್ವತಃ ಪ್ರತಾಪಶಾಲಿಯಲ್ಲದಿದ್ದರೂ, ಪೂರ್ವಿಕರು ಸಂಪಾದಿಸಿದ ರಾಜ್ಯವೈಭವವನ್ನು ಸುಖವಾಗಿ ಕುಳಿತು ಅನುಭವಿಸಿದ ಅದೃಷ್ಟಶಾಲಿ ! ಈತನಿಗೆ ಹಿಂದೆ ರಾಜ್ಯವಾಳಿದ ಕೃಷ್ಣದೇವ ರಾಯನ ಪ್ರತಾಪಯುಕ್ತ ರಾಜ್ಯಭಾರದಿಂದ ಗಡಿನಾಡುಗಳೆಲ್ಲ ಭದ್ರ

ಗೊಂಡು, ಶತ್ರುಗಳು ಎಲ್ಲೂ ಇಟ್ಟಣಿಕಿನೋಡದಂತೆ ರಾಜ್ಯವು ಸುರಕ್ಷಿತ ವಾಗಿದ್ದುದರಿಂದಲೂ, ವೈಭವಪೂರ್ಣವಾಗಿದ್ದುದರಿಂದಲೂ, ಅಚ್ಯುತ ರಾಯನು ಸುಖವಾಸಿಯಾಗಿ ಹನ್ನೆರಡು ವರ್ಷಕಾಲ ರಾಜ್ಯಭೋಗ ವನ್ನು ಅನುಭವಿಸಿದನು. ಆಗಿದ್ದ ವಿಜಯನಗರದ ರಾಜ್ಯವೈಭವವನ್ನು ವರ್ಣಿಸುತ್ತ ಒಬ್ಬಾನೊಬ್ಬ ಚರಿತ್ರಕಾರನು—"ಈ ರಾಜನ ಸೈನ್ಯದಲ್ಲಿ ಮೂರು ಸಾವಿರ ಆನೆಗಳೂ, ಅರಬ್ಬೀ ಪಾರ್ಶೀದೇಶಗಳಲ್ಲಿ ಹುಟ್ಟಿದ ನಾಲ್ವತ್ತು ಸಾವಿರ ಅತ್ಯುತ್ತಮ ಕುದುರೆಗಳೂ, ಸುಮಾರು ೧೫ ಲಕ್ಷ ಮಂದಿ ಸೈನಿಕರೂ ಇದ್ದಾರೆ. ಈ ರಾಜ್ಯದ ನದೀನದಗಳಲ್ಲಿ ಬಂಗಾರವೂ ಗಣಿಗಳಲ್ಲಿ ರತ್ನಗಳೂ ಹೇರಳವಾಗಿ ದೊರೆಯುತ್ತಿವೆ. ಬಂಗಾಳಾದಿಂದ ಮಲಬಾರ್ ದೇಶದವರೆಗೂ, ಸ್ವರ್ಣದ್ವೀಪದಿಂದ ಗುಲ್ಬರ್ಗಾದವರೆಗೂ ವಿಸ್ತರಿಸಿ ಸಕಲವಿಧಸೌಭಾಗ್ಯಗಳಿಗೂ ನೆಲೆಯೆನ್ನಿಸಿರುವ ಈ ವೈಭವ ಪೂರ್ಣದೇಶವು ಅವರ್ಣನೀಯವಿದೆ. ಇದರ ರಾಜಧಾನಿಯಾದ ವಿಜಯ ನಗರಿಯಾದರೋ ನಾನು ಈವರೆಗೆ ನೋಡಿದ ಎಲ್ಲಾ ಮಹಾ ಪಟ್ಟಣಗಳಿ ಗಿಂತಲೂ ವಿಸ್ತಾರವೂ ಜನಭರಿತವೂ ಶೃಂಗಾರಪೂರ್ಣವೂ ಆಗಿದೆ." ಎಂದು ವರ್ಣಿಸುತ್ತಾನೆ.



## ಅಧ್ಯಾಯ ೨. "ತುಳುವ ರಾಜವಂಶ ಜೀರ್ಣೋದ್ಧಾರ."

ಅಚ್ಯುತದೇವರಾಯನು ೧೫೪೧ನೆಯ ಸಂ॥ ದ ಕೊನೆಯಭಾಗದಲ್ಲಿ ಮೃತನಾದನು. ಆತನ ಮಗನಾದ ವೆಂಕಟರಾಯನು, ತಂದೆಯ ತರು ವಾಯ ಸಿಂಹಾಸನಕೆ ತರಲ್ಪಟ್ಟನು. ಬಾಲರಾಜನಿಗೆ ಸ್ವತಃ ರಾಜ್ಯ ಭಾರವನ್ನು ನೋಡಿಕೊಳ್ಳಲು ಸಾಮರ್ಥ್ಯವಿಲ್ಲದಿರತಕ್ಕುದು ಸ್ವಾಭಾವಿಕ ವಷ್ಟೆ! ಮಂತ್ರಿವರ್ಗದವರು ರಾಜಪುತ್ರನಿಗೆ ಸಹಾಯಕರಾಗಿದ್ದು ರಾಜ್ಯ ಕ್ಷೇಮವನ್ನು ಸಾಧಿಸುವುದಕ್ಕೆ ಬದಲಾಗಿ, ಎರಡು ಕಕ್ಷಿಗಳಾಗಿ ವಿರೋಧ ಪಕ್ಷಗಳನ್ನು ಬೆಳೆಯಿಸಿಕೊಂಡು ಪರಸ್ಪರ ಕಾದಾಟಕ್ಕೆ ಪ್ರಾರಂಭಿಸಿದರು.

ರಾಜವಂಶಕ್ಕೆ ಸಮೀಪ ಬಂಧುವರ್ಗದವರಾದ ರಾಮರಾಜನೂ (ಕೃಷ್ಣ ದೇವರಾಯನ ಅಳಿಯ—ಪ್ರಕೃತಕಥಾನಾಯಕ) ಮತ್ತು ಆತನ ತಮ್ಮ ತಿರುಮಲರಾಯನೂ ಮಂತ್ರಿಗಳಾಗಿದ್ದು ರಾಜ್ಯಾಡಳಿತವನ್ನು ನಡೆಯಿಸ ಬೇಕೆಂದು ಶ್ರೀ ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿ ಇವರ ಇಷ್ಟವಾಗಿತ್ತು. ರಾಜಬಂಧುಗಳೆಲ್ಲರೂ ಹಾಗೆ ಯೇ ಇಚ್ಛಿಸುತ್ತಿದ್ದರು. ಆದರೆ ರಾಜಭಾಂಡಾರಾಧಿಪತಿಯಾದ ಸಲಕಮು ತಿಮ್ಮಯ್ಯ ಎಂಬುವನು ಪ್ರಬಲನಾಗಿ, ಮಹತ್ವಾಕಾಂಕ್ಷಿಯಾಗಿ, ಸರ್ವಾ ಧಿಕಾರವನ್ನೂ ಸಾಧ್ಯವಾದರೆ ರಾಜ್ಯ-ಸಿಂಹಾಸನಗಳನ್ನೂ ಆಕ್ರಮಿಸಿ ತಾನೇ ಕರ್ಣಾಟಕ ಭೂರಮಣಿಗೆ ರಮಣನಾಗಬೇಕೆಂದು ಅಗಾಧ ಸನ್ನಾಹಗಳಲ್ಲಿ ಮಗ್ನನಾಗಿ ರಾಣಿಯರ ಮತ್ತು ರಾಜಕುಟುಂಬದ ಅಪೇಕ್ಷೆಯನ್ನು ನಿರಾಕರಿಸಿ ತನ್ನದೊಂದು ಕಕ್ಷಿಯನ್ನು ಏರ್ಪಡಿಸಿ ಕೊಂಡು ಬಲಗೊಳ್ಳತೊಡಗಿದನು. ಅಳಿಯ ರಾಮರಾಜನದೂ ಒಂದು ಪಕ್ಷವೇರ್ಪಟ್ಟಿತು. ಖಜಾನೆಯೂ ಸೈನ್ಯವೂ ಸ್ವಾಧೀನದಲ್ಲಿರಲು ಬಹು ಪ್ರಬಲನಾಗಿದ್ದ ಸಲಕಮು ತಿಮ್ಮಯ್ಯನಿಗೆ ವಿರೋಧವನ್ನು ಸಾಧಿಸುತ್ತ ರಾಜಧಾನಿಯಲ್ಲಿರುವುದು ಯುಕ್ತವಲ್ಲವೆಂದು ಬಗೆದು ರಾಮರಾಜನು ತನ್ನ ಪರಿವಾರದೊಂದಿಗೆ ಗುತ್ತಿ-ಪೆನುಕೊಂಡಗಳ ಪ್ರಾಂತಕ್ಕೆ ಹೊರಟು ನಡೆದನು.

ಇತ್ತ ಪ್ರತಿದ್ವಂದ್ವಿಗಳಿಲ್ಲದಿರಲು ಸಲಕಮು ತಿಮ್ಮಯ್ಯನ ಸರ್ವಾಧಿ ಕಾರವು ಮನಬಂದಂತೆ ನಡೆಯಲಾರಂಭಿಸಿತು. ರಾಜಭಾಂಡಾರದ ದ್ರವ್ಯವು, ಆವನ ಇಷ್ಟಾನುಸಾರ ಮನಬಂದ ಕೆಲಸಗಳಿಗೆ ನೀರಿಗಿಂತಲೂ ಧಾರಾಳವಾಗಿ ಖರ್ಚಾಗತೊಡಗಿತು. ಸಾಲದುದಕ್ಕೆ ಬಾಲರಾಜನಿಗೂ ಮತ್ತು ಪ್ರಜೆಗಳಿಗೂ ಆ ದುರುಳನಿಂದ ಉಂಟಾಗುತ್ತಿದ್ದ ಕಿರುಕುಳಗಳಿಗೆ ಕೊನೆಮೊದಲಿಲ್ಲವಂತಾಯಿತು. ತಮ್ಮ ಸ್ವಂತರಾಜ್ಯದಲ್ಲೇ, ಸ್ವಂತ ಅರಮನೆಯಲ್ಲೇ ಉಳಿಗಾಲವಿಲ್ಲದಂತಾಗಲು, ರಾಜಮಾತೆ ವರದಾ ದೇವಿಯು ಬಿಜಾಪುರದ ಸುಲ್ತಾನನಾದ ಇಬ್ರಾಹಿಂ ಆದಿಲ್ ಷಾಹ ಎಂಬುವನ ಬಳಿಗೆ ಗುಪ್ತ ವಕೀಲರನ್ನು ಕಳುಹಿಸಿ, ತಮ್ಮನ್ನು ಆತನ ಚಿತ್ರಹಿಂಸೆಯಿಂದ ಬಿಡಿಸಿ ಕಾಪಾಡಿ, ತನ್ನ ಮಗನಿಗೆ ಸಿಂಹಾಸನವನ್ನು

ಸುರಕ್ಷಿತಗೊಳಿಸಿಕೊಡಬೇಕೆಂದೂ ಆದಕ್ಕಾಗಿ ಅತಿಶಯ ದ್ರವ್ಯವನ್ನು ಪಾರಿತೋಷಕವಾಗಿ ಕೊಡುತ್ತೇನೆಂದೂ ಪ್ರಾರ್ಥಿಸಿಕೊಂಡಳು. ಆದಿಲ್ ಷಹನು ಅದಕ್ಕೊಪ್ಪಿ ಸೈನ್ಯಸಮೇತನಾಗಿ ವಿಜಯನಗರದಮೇಲೆ ಬರುತ್ತಿರಲು, ಸಲಕಮು ತಿಮ್ಮಯ್ಯನು ಈ ಸುಳಿವನ್ನು ತಿಳಿದು ಅವನನ್ನು ಮಾರ್ಗದಲ್ಲೇ ಸಂಧಿಸಿ, ರಾಣಿಯು ಹೇಳಿದ್ದುದರ ಎರಡರಷ್ಟು ಧನವನ್ನು ಕೊಟ್ಟು ಹಿಂದಕ್ಕೆ ಕಳುಹಿಸಿಬಿಟ್ಟನು. ಮುಂದೆ ಕೇಳುವುದೇನು! ಬಾಲರಾಜನೂ ರಾಜಮಾತೆಯೇ ಮುಂತಾದ ರಾಣೀವಾಸದವರೂ ಅವನ ಹಿಡಿಯಲ್ಲೇ ಸಿಕ್ಕಿದಂತಾಯಿತು. ಯಾವ ಹೊತ್ತಿಗೆಂದರೆ ಆ ಹೊತ್ತಿಗೆ ಅವರನ್ನು ಮನಬಂದಂತೆ ಹಿಸುಕಿಬಿಡಲು, ಹೇಳಿಕೇಳುವವರಿಲ್ಲದಂತಾಗಲು, ಅವನು ಸಿದ್ಧನಾಗತೊಡಗಿದನು.

ಸರ್ವಾಧಿಕಾರಿ ಸಲಕಮು ತಿಮ್ಮಯ್ಯನು, ತಾನು ರಾಜಸಿಂಹಾಸನವನ್ನು ಆಕ್ರಮಿಸಲು ಮಾರ್ಗಪ್ರತಿಬಂಧಕನಾಗಿದ್ದ ಬಾಲರಾಜ ವೆಂಕಟರಾಯನನ್ನು ತೀರಿಸಲು ಮುಂದೆ ಹೆಚ್ಚು ದಿವಸಗಳ ಹಿಡಿಯಲಿಲ್ಲ. ಬಾಲರಾಜನಿಗೆ ಪಟ್ಟವಾದ ಆರು ತಿಂಗಳೊಳಗಾಗಿಯೇ ಆತನ ಆಳಿಕೆಯೂ ಕೊನೆಗಂಡಿತು. ಅಷ್ಟು ಮಾತ್ರವಲ್ಲ, ಆ ರಾಜದ್ರೋಹಿಯು, ಸಿಂಹಾಸನಕ್ಕಾಗಿ ತನ್ನೊಂದಿಗೆ ಹೊಡೆದಾಡಲು ರಾಜಬಂಧುಗಳಲ್ಲಿ ಯಾರೂ ಇರಬಾರದೆಂದು, ಬಾಲರಾಜನ ಇಬ್ಬರು ಚಿಕ್ಕಪ್ಪಂದಿರನ್ನೂ, ಮತ್ತೊಬ್ಬ ಬಲತಮ್ಮನನ್ನೂ ಕೊಲ್ಲಿಸಿಬಿಟ್ಟನು. ಸದಾಶಿವರಾಯನೂ ಅವನ ಉರುಲಿಗೆ ಗುರಿಯಾಗತಕ್ಕವನೇ! ಆದರೆ ಹೇಗೋ ಸುದೈವದಿಂದ ಬದುಕಿದನು.

ಮೇಲ್ಕಂಡಂತೆ ವೆಂಕಟರಾಜನನ್ನು ಗುಪ್ತವಾಗಿ ಉರುಳುಹಾಕಿಸಿಕೊಂಡ ಆ ದ್ರೋಹಿಯು ಮುಂದೆ ತನ್ನೊಂದಿಗೆ ಪ್ರತಿಭಟಿಸಿ ಕಾದುವವರು ಯಾರೂ ಇಲ್ಲವೆಂದು ಬಗೆದು ಸಿಂಹಾಸನವನ್ನು ಆಕ್ರಮಿಸಿದನು. ಅವನೂ ರಾಜಕುಟುಂಬದ ದೂರದ ಸಂಬಂಧಿಯೇ ಆದುದರಿಂದ ಪಟ್ಟಣಿಗರು ಅವನು ಸಿಂಹಾಸನವನ್ನೇರಲು ಪ್ರತಿಬಂಧಿಸಲಿಲ್ಲ. ಆದರೆ ಅವನು ರಾಜನಾದೊಡನೆಯೇ ಪ್ರಜೆಗಳಿಗೆ ಅವನ ಹಿಂಸೆಯನ್ನು ಸಹಿಸುವದು ಅಸಾಧ್ಯವಾಗತೊಡಗಿತು. ಹಿಂದಿನ ರಾಜ್ಯಭಾರದಲ್ಲಿ ಪ್ರಬಲರಾಗಿದ್ದ

ಸರ್ದಾರರು ಹೊರಗಿದ್ದು ತನ್ನ ಮೇಲೆ ಕಾರ್ಯಭಾಗ ನಡೆಯಿಸದಂತೆ ಅವರನ್ನೂ ತೀರಿಸಬೇಕೆಂದು ಬಗೆದ ಆ ನೀಚನು ಅವರನ್ನು ರಾಜಧಾನಿಗೆ ಬರುವಂತೆ ಆಹ್ವಾನಿಸಿ, ಹಾಗೆ ಅವರು ಬಂದೊಡನೆಯೇ ಅವರ ಕಣ್ಣುಗಳನ್ನು ಕೀಳಿಸಿ ಕೊಲ್ಲಿಸಿದನು. ಪ್ರಾರಂಭದಲ್ಲಿ ಬಂದ ಕೆಲವರಿಗೆ ಆದ ಈಗತಿಯನ್ನು ಕೇಳಿದ ಮಿಕ್ಕವರು, ಹಿಂದಿರುಗಿ ತಮ್ಮ ಸ್ಥಳಗಳಿಗೆನಡೆದು, ಅವನನ್ನು ಮೂಲೋತ್ಪಾಟನ ಮಾಡಲು ಸನ್ನಾಹ ಮಾಡತೊಡಗಿದರು.

ಆ ದುರುಳನ ಕಿರುಕುಳವನ್ನು ಸಹಿಸಲಾರದೆ ನರಳುತ್ತಿದ್ದ ಪ್ರಜಾಜನರೂ ಮತ್ತು ಕೆಲಮಂದಿ ಸರದಾರರೂ, ಹಿಂದೆ ರಾಣಿಯು ಮಾಡಿದಂತೆಯೇ ಬಿಜಾಪುರದ ಸುಲ್ತಾನನಲ್ಲಿಗೆ ಗುಪ್ತಚಾರರನ್ನು ಕಳುಹಿಸಿ, ತಮ್ಮನ್ನು ಆ ನೀಚನ ಆಡಳಿತದಿಂದ ತಪ್ಪಿಸಿ ಕಾಪಾಡುವುದಾದರೆ ವಿಜಯನಗರದ ರಾಜ್ಯವನ್ನೇ ಸುಲ್ತಾನರು ಅನುಭವಿಸಲು ತಮ್ಮ ಒಪ್ಪಿಗೆಯುಂಟೆಂದು ಬಿನ್ನವಿಸಿಕೊಂಡರು. ಆದರೆ ಈ ಸಂಗತಿಯಾದರೂ ತಿಮ್ಮಯ್ಯನಿಗೆ ತಿಳಿಯದಿರಲಿಲ್ಲ. ಒಡನೆ ಅವನು, ತನ್ನ ವಕೀಲರಕಡೆಯಿಂದ ಆರು ಲಕ್ಷ ದ್ರವ್ಯವನ್ನೂ ಅನೇಕರತ್ನಾಭರಣಗಳನ್ನೂ ಸುಲ್ತಾನನಿಗೆ ಕಾಣಿಕೆಯಾಗಿ ಕಳುಹಿಸಿದ್ದಲ್ಲದೆ ತನ್ನ ಸಹಾಯಕ್ಕೆ ಸುಲ್ತಾನನು ಬರುವುದಾದರೆ, ಸೈನ್ಯದ ವೆಚ್ಚವನ್ನು ವಹಿಸುವುದರೊಂದಿಗೆ ಸುಲ್ತಾನನು ತನ್ನ ರಾಜ್ಯದಲ್ಲಿರುವ ಒಂದೊಂದು ದಿನಕ್ಕೆ ಮೂರು ಮೂರು ಲಕ್ಷ ದ್ರವ್ಯದಂತೆ ಕೊಡುತ್ತೇನೆಂದೂ ವಾಗ್ದಾನಮಾಡಿದನು. ಈ ದ್ರವ್ಯಲಾಭದ ಆಸೆಯಿಂದ ಮನಸೋತ ಸುಲ್ತಾನನು ಸೈನ್ಯದೊಂದಿಗೆ ವಿಜಯನಗರದ ಕಡೆ ಹೊರಟು ರಾಜಧಾನಿಯ ಬಳಿ ಬಂದಿಳಿಯಲು, ಸಲಕಮ ತಿಮ್ಮಯ್ಯನೇ ಎದುರುಗೊಂಡು ಕರೆತಂದು ಸುಲ್ತಾನನನ್ನು ಸಿಂಹಾಸನದಮೇಲೆ ಕೂರಿಸಿ ಅನರ್ಘ್ಯಾಭರಣಗಳನ್ನು ಒಪ್ಪಿಸಿ, ಮುಂದೆ ಏಳುದಿನಗಳವರೆಗೆ—ಹಿಂದೆ ನೋಡಿ ಕೇಳಿ ಅರಿಯದಂತಹ ಮಹೋತ್ಸವಗಳನ್ನು ನಡೆಯಿಸಿ, ಸುಲ್ತಾನನನ್ನೇ ವಿಜಯನಗರ ಸಾಮ್ರಾಜ್ಯದ ಪ್ರಭುವೆಂದು ಪ್ರಕಟಿಸಿದನು. ಅವನ ಅನುಯಾಯಿಗಳೂ ಅದನ್ನು ಒಪ್ಪಿಕೊಂಡು, ದೇಶದ್ರೋಹಕರವಾದ ತಮ್ಮ ದುರ್ಬುದ್ಧಿಯನ್ನು ಪ್ರಕಟಿಸಿಕೊಂಡರು.

ಆದರೆ ಈ ರಾಜದ್ರೋಹ ದೇಶದ್ರೋಹ ಕಾರ್ಯವನ್ನು ರಾಜಧಾನಿಯಲ್ಲೂ ದೇಶದಲ್ಲೂ ಇದ್ದ ಅನೇಕರು ಒಪ್ಪದೆ, ಅಳಿಯ ರಾಮರಾಜನನ್ನೂ ಆತನ ತಮ್ಮಂದಿರಾದ ತಿರುಮಲ ಮತ್ತು ವೆಂಕಟಾದ್ರಿಯವರನ್ನೂ ಸಂಧಿಸಿ, ದೇಶಕ್ಕೂ, ಪೂರ್ವದ ರಾಜವಂಶಕ್ಕೂ ಪ್ರಾಪ್ತವಾಗಿದ್ದ ಮಹಾವಿಪತ್ತನ್ನು ತಪ್ಪಿಸಿ ಕಾಪಾಡಿರೆಂದು ಪ್ರಾರ್ಥಿಸಿಕೊಂಡರು ದೇಶೀಯರ ಆ ಪ್ರಾರ್ಥನೆಯು ಯುಕ್ತವಾದುದೆಂದು ಭಾವಿಸಿ ರಾಮರಾಜಾದಿಗಳು ಸಲಕಮು ತಿಮ್ಮಯ್ಯನಿಗೆ ಒಂದು ನಿರೂಪವನ್ನು ಕಳುಹಿಸಿದರು. ಅದರಲ್ಲಿ—"ಮಿತ್ರವರಾ, ನೀನು ರಾಜ್ಯಾಧಿಕಾರಿಯಾಗಿರುವುದು ನಮಗೆ ಇಷ್ಟವಿಲ್ಲವೆಂದು ಎಣಿಸಬೇಡ. ಆದರೆ ಮಹಮ್ಮದೀಯರು ಪೂರ್ವದಿಂದಲೂ ಹಿಂದೂರಾಜ್ಯವಾದ ನಮ್ಮ ವಿಜಯನಗರಸಂಸ್ಥಾನಕ್ಕೆ ಬದ್ಧಶತ್ರುಗಳೆಂಬುದನ್ನು ಅರಿಯೆಯಾ! ಅವರನ್ನು ಒಳಹೊಗಿಸಿಕೊಂಡು ರಾಜಧಾನಿಯಲ್ಲಿಟ್ಟುಕೊಂಡಿರುವುದು ಸರ್ಪವನ್ನು ಮಗ್ಗುಲಲ್ಲಿಟ್ಟುಕೊಂಡು ನಿದ್ರಿಸುವಂತೆ ಅಪಾಯಕರವೆಂದು ಎಣಿಸಲಾರೆಯಾ! ಮಿತ್ರಾ, ನಾವುಗಳು ನಿನ್ನ ಸಹಾಯಕ್ಕಿರುವೆವು. ನೀನೀಗ ಗಳಿಸಿರುವ ರಾಜ್ಯವನ್ನು ಉಳಿಸಿಕೊಳ್ಳುವುದಕ್ಕೆ ಮಾತ್ರವಲ್ಲದೆ, ಅದನ್ನು ವಿಸ್ತರಿಸುವುದಕ್ಕೂ ನಾವು ಬೆಂಬಲರಾಗಿರ ವೆವೆಂಬುದನ್ನು ಮರೆಯಬೇಡ. ಆದರೆ ಮೊದಲು, ನಿನ್ನ ರಾಜಧಾನಿಯನ್ನು ಪ್ರವೇಶಿಸಿರುವ ಆ ಮಹಮ್ಮದೀಯ ಸುಲ್ತಾನನನ್ನು ಮಾತ್ರ ಹೊರಕ್ಕೆ ಕಳುಹಿಸು" ಎಂದಿತ್ತು. ಅದನ್ನು ನೋಡಿಕೊಂಡ ತಿಮ್ಮಯ್ಯನು ಅದು ಸಮಂಜಸವಾದುದೆಂದು ಭಾವಿಸಿಕೊಂಡು, ತಾವು ಹಿಂದೆ ಗೊತ್ತುಮಾಡಿಕೊಂಡಿದ್ದಂತೆ ಆವರೆಗೆ ಲೆಕ್ಕವಾದ ಐವತ್ತು ಲಕ್ಷ ದ್ರವ್ಯವನ್ನೂ, ಪೂರ್ವಿಕರಾಜರಿಂದ ಗಳಿಸಿಡಲ್ಪಟ್ಟಿದ್ದ ಅಪೂರ್ವವಾದ ಅಮೌಲ್ಯರತ್ನಗಳನ್ನೂ, ಬಹು ಸುಂದರವಾದ ಹನ್ನೆರಡು ಆನೆಗಳನ್ನೂ ಹಲವು ಅಶ್ವರಾಜಿಗಳನ್ನೂ ಒಪ್ಪಿಸಿ ರಾಜ್ಯಕ್ಕೆ ಬಿಜಮಾಡಬಹುದೆಂದು ಪ್ರಾರ್ಥಿಸಿಕೊಂಡನು. ಆದಿಲ್‌ಷಹಾನು ಸಹ ಶ್ರಮಲೇಶವೂ ಇಲ್ಲದೆ ಲಭ್ಯವಾದ ಆ ಅಪಾರಸಂಪತ್ತನ್ನು ಹೊರಿಸಿಕೊಂಡು ತನ್ನ ರಾಜ್ಯಾಭಿಮುಖವಾಗಿ ಹೊರಟನು.

ಬಿಜಾಪುರದ ಸುಲ್ತಾನನು ಇನ್ನೂ ತನ್ನ ರಾಜಧಾನಿಯನ್ನು ಸೇರಿರಲಿಲ್ಲ. ಅಷ್ಟರಲ್ಲೇ ದ್ರೋಹಿಯಾದ ಸಲಕಮು ತಿಮ್ಮಯ್ಯನು ಬಾಲರಾಜನನ್ನು ಕೊಂದ ಘಾತುಕತನಕ್ಕೆ ಯೋಗ್ಯ ಪ್ರತೀಕಾರ ಮಾಡಲು ರಾಮರಾಯ ತಿರುಮಲರಾಯ ವೆಂಕಟಾದ್ರಿ ಇವರ ಸೈನ್ಯವು ವಿಜಯನಗರಿಯ ಕಡೆಗೆ ಹೊರಟಿತು. ರಾಮರಾಯನು ಆವೇಳೆಗೆ ಪೆನುಗೊಂಡ, ಗುತ್ತಿ, ಇದವಾನಿ. ಗಂಡಿಕೋಟೆ ಮತ್ತು ಕರ್ನೂಲ್ ದುರ್ಗಗಳನ್ನು ಸಾಧಿಸಿಕೊಂಡು ಅಪಾರ ಸೈನ್ಯವನ್ನು ಶೇಖರಿಸಿದ್ದನು. ಆ ಸೈನ್ಯವಾದರೂ ರಣವಿದ್ಯೆಯಲ್ಲಿ ನಿಪುಣರಾದ ಆತನ ತಮ್ಮಂದಿರಿಂಲೂ, ಸ್ವತಃ ಧೀರೋದಾತ್ತಯೋಧನಾದ ರಾಮರಾಜನಿಂದಲೂ ಉತ್ತಮ ರೀತಿಯಲ್ಲಿ ಶಿಕ್ಷಿತವಾಗಿತ್ತು. ಸಲಕಮು ತಿಮ್ಮಯ್ಯನು ಹಾಗೆ ಶಿಕ್ಷಿತವಾದ ರಾಮರಾಜನ ಸೈನ್ಯವು ತನ್ನ ಮೇಲೇರಿ ಬರುತ್ತದೆಂಬ ವಾರ್ತೆಯು ತಿಳಿದೊಡನೆಯೇ. ಪ್ರತಿಭಟಿಸಬೇಕೆಂದು ಯೋಚಿಸಿದನಾದರೂ, ಆ ವೇಳೆಗೇ ತನ್ನ ದುರ್ಮಾರ್ಗತನದಿಂದ ಬಹುಮಟ್ಟಿಗೆ ಬೇಸತ್ತಿದ್ದ ಸರದಾರರೂ ಸೈನಿಕರೂ ತನಗೆ ಒತ್ತಾಸೆ ಮಾಡಲಾರರೆಂದು ಮನಸ್ಸಿನಲ್ಲಿ ಆಶ್ಚರ್ಯ ಹುಟ್ಟಿತು. ಒಂದೇ ಗಂಟಿನಲ್ಲಿ ಐವತ್ತು ಲಕ್ಷ ದ್ರವ್ಯವು ಬಿಜಾಪುರ ಸುಲ್ತಾನನ ಬೊಕ್ಕಸಕ್ಕೆ ಸೇರಿಹೋದುದರಿಂದ ರಾಜ ಭಂಡಾರವು ತಳಕಾಣಿಸುವಂತಾಗಿದ್ದಿತು. ರಾಜಭವನದಲ್ಲಿ, ರಾಜಧಾನಿಯಲ್ಲಿ, ರಾಜ್ಯದಲ್ಲಿ, ಸೈನ್ಯದಲ್ಲಿ, ರಾಜಸಭೆಯಲ್ಲಿ, ಹೀಗೆ ಎಲ್ಲಾ ಕಡೆಯಲ್ಲೂ ಅವನಿಗೆ ಶತ್ರುಗಳೇ ಕಾಣಿಸತೊಡಗಿದರು. ಅವನು ಯಾರನ್ನೂ ನಂಬದಂತಾದನು. ಯಾರೊಂದಿಗೆ ಮುಖಕೊಟ್ಟು ಮಾತನಾಡಲೂ ಅವನಿಗೆ ಬಾಯಿ ಬಾರದಂತಾಯಿತು. ಮನಸ್ಸಿನ ಪ್ರವೃತ್ತಿಯೇ ವಿಚಿತ್ರ ಗತಿಯನ್ನು ಅವಲಂಬಿಸಿತು. ಅವನು ಹುಚ್ಚನಂತಾದನು. ಅರಮನೆಯಿಂದ ಹೊರಕ್ಕೆ ಹೊರಡುವುದೇ ಹೇಯವೆನಿಸುವಂತೆ ಅವನ ಮನಸ್ಸು ಬೋಧಿಸುತ್ತಿತ್ತು. ಎತ್ತ ನೋಡಿದರತ್ತ ಅತ್ಯಂತ ನಿರಾಸೆಯಲ್ಲದೆ ಅವನಭಾಗಕ್ಕೆ ಮತ್ತೇನೂ ಕಾಣಿಸದಂತಾಯಿತು. ರಾಜ್ಯವು ಕ್ಷಣಮಾತ್ರವಾದರೂ ತನಗೆ ದಕ್ಕದೆಂದು ಅವನ ಮನಸ್ಸು ಹೇಳುವಂತಿತ್ತು. ಹಾಗೆ ಕೇವಲ ನಿರಾಸೆಯಿಂದ, ಅಂಧನಾಗಿದ್ದ ಒಂದು ಕಾಲವಿಶೇಷದಲ್ಲಿ ಆ ಸರ್ವಾಧಿಕಾರಿಯು, ತನಗಿಲ್ಲದ ಐಶ್ವರ್ಯವು

ಮತ್ತಾವ ಉತ್ತರಾಧಿಕಾರಿಗೂ ದೊರಕಕೂಡದೆಂದು-ಹುಚ್ಚನೋ ಎಂಬಂತೆ-ಮನಬಂದಂತೆ ಆಜ್ಞೆ ಮಾಡತೊಡಗಿದನು. ಅವನ ಆಜ್ಞೆಯಿಂದ ರಾಜದೂತರು ಪಟ್ಟದ ಆನೆ ಕುದುರೆಗಳ ಕಣ್ಣುಗಳನ್ನು ಕಿತ್ತರು. ಕಿವಿ ಬಾಲಗಳನ್ನು ಕತ್ತರಿಸಿ ಅಂಗಭಿನ್ನ ಮಾಡಿದರು. ಭಾಂಡಾರದಲ್ಲಿನ ಅಪರೂಪ್ಯ ಮುತ್ತು ಮಾಣಿಕ್ಯ ರತ್ನಾದಿಗಳನ್ನು ಕಲ್ಲುಗಾಣಗಳಲ್ಲಿ ಹಾಕಿ ಅರೆಯಿಸಿ ಪುಡಿಪುಡಿ ಮಾಡಿದರು. ರತ್ನಾಭರಣಾದಿಗಳನ್ನೆಲ್ಲ ಹಾದಿಗೊಂದು ಬೀದಿಗೊಂದರಂತೆ ಚೆಲ್ಲಾಡಿದರು. ರಾಮರಾಜನ ಸೈನ್ಯವು ಹತ್ತಿರ ಹತ್ತಿರ ಬರುತ್ತಿದೆಯೆಂಬ ವಾರ್ತೆಯು ಅವನಿಗೆ ಮೇಲೆ ಮೇಲೆ ಕರ್ಣಕಠೋರವಾಗಿ ಕೇಳಿಸಲಾರಂಭಿಸಿದಾಗಲಂತೂ ಅವನಿಗೆ ಅತಿಶಯವೆಂಬಂತೆ ಹುಚ್ಚು ತಲೆಗೇರಿತು. ಎಲ್ಲರನ್ನೂ ಅರಮನೆಯಿಂದ ಹೊರಕ್ಕೆ ಕಳುಹಿಸಿಬಿಟ್ಟನು. ತಾನೊಬ್ಬನೇ ತನ್ನ ಮಹಲಿನಲ್ಲಿದ್ದ ಒಂದು ಕಂಭಕ್ಕೆ ಹರಿತವಾದ ಒಂದು ಕತ್ತಿಯನ್ನು ನೇರವಾಗಿರುವಂತೆ ಬಿಗಿದು ಕಟ್ಟಿ, ಅದಕ್ಕೆ ಎದುರಾಗಿ ತನ್ನ ಎದೆಯನ್ನು ಗುರಿಯಿಟ್ಟು ಹಿಂದಿನಿಂದ ಬಹು ರಭಸದಿಂದ ಓಡಿಬಂದು ಆ ಕತ್ತಿಯು ತನ್ನೆದೆಯಲ್ಲಿ ದೂರುವಂತೆ ಅದನ್ನು ಹಾಯ್ದನು. ಕ್ಷಣಮಾತ್ರದಲ್ಲಿ ಆ ನಿರ್ಘೃಣ ಕೃಪಾಣವು ಆ ದುರ್ದೈವಿಯ ಹೃದಯವನ್ನು ಪ್ರವೇಶಿಸಿ ಬೆನ್ನಿನಲ್ಲಿ ದೂರಿಬಂದಿತು. ಹೀಗೆ ಆ ದುರುಳನು ತನ್ನ ದೈವದ್ರೋಹ ರಾಜದ್ರೋಹಾದಿ ಕಾರ್ಯಗಳ ಪ್ರತಿಫಲವಾಗಿ ದುರಂತ ರೀತಿಯಿಂದ ದೇಹವನ್ನು ನೀಗಿ, ತನ್ನ ದುರ್ಯಶದಿಂದ ಚರಿತ್ರೆಯನ್ನು ಕಳಂಕಿತವನ್ನಾಗಿ ಮಾಡಿದನು

ಇತ್ತ ತಿಮ್ಮನು ಮೇಲ್ಕಂಡಂತೆ ಗತಾಯುವಾದ ಸ್ವಲ್ಪ ಹೊತ್ತಿನೊಳಗಾಗಿಯೇ ರಾಮರಾಜನ ಸೈನ್ಯವು ಪಯಣದಮೇಲೆ ಪಯಣವಾಗಿ ಬಂದು ರಾಜಧಾನಿಯನ್ನು ತಲುಪಿತು. ಮಹಾರಾಣಿಯವರ ಆಜ್ಞೆಯಿಂದ ನಗರದ ಕೋಟೆಯ ಮಹಾದ್ವಾರವು ತೆರೆಯಲ್ಪಟ್ಟಿತು. ನಗರವಾಸಿಗಳು ರಾಮರಾಜ ತಿರುಮಲರಾಯರಾದಿಗಳಿಗೆ ವಿಶೇಷವಾದ ಗೌರವ ರೀತಿಯಿಂದ ಸುಖಾಗಮನವನ್ನು ಬಯಸಿ ಕಾಣಿಕೆಗಳನ್ನು ಒಪ್ಪಿಸಿದರು. ದುರಾರಾಧ್ಯನಾದ ಸಲಕಮ ತಿಮ್ಮಯ್ಯನಿಂದ ರಾಜ್ಯಕ್ಕುಂಟಾಗಿದ್ದ ಮಹಾ ಆಪದವನ್ನು ನಿವಾರಿಸಿದ ಆತನನ್ನು "ಕರ್ಣಾಟಕ ರಾಜ್ಯ

ಲಕ್ಷ್ಮೀ ಸೌಭಾಗ್ಯರಕ್ಷಕ"ನೆಂದು ಹೊಗಳಿದರು. ಮಹೋಪಚಾರ ಗಳನ್ನು ಅರ್ಪಿಸಿ ಗೌರವಿಸಿದರು.

ರಾಮರಾಜನು ರಾಜಧಾನಿಯನ್ನು ಪ್ರವೇಶಿಸಿದೊಡನೆಯೇ ನೇರವಾಗಿ ಅರಮನೆಗೆ ನಡೆದು ರಾಜಸ್ತ್ರೀಯರ ಕುಶಲವನ್ನು ವಿಚಾರಿಸಿ, ಮುಂದೆ ಯಾವಭಾಗದಲ್ಲೂ ಬೆದರದೆ ಕಂಗೆಡದೆ ಧೈರ್ಯವಾಗಿರಿರೆಂದು ಅವರಿಗೆಲ್ಲಾ ಅಭಯಪ್ರದಾನಮಾಡಿದನು. ಮತ್ತು ಪೂರ್ವದ ರಾಜ ವಂಶವನ್ನು ಉದ್ಧಾರ ಮಾಡತಕ್ಕುದು ಕರ್ತವ್ಯವೆಂದು ಭಾವಿಸಿ, ಆ ವೇಳೆಗೆ ತಿರುಪತಿಯಲ್ಲಿ ಬ್ರಾಹ್ಮಣರಿಂದ ಕಾಣಿಕೆಯಾಗಿ ದೊರೆತ ಅಪಾರ ಸುವರ್ಣ ನಾಣ್ಯಗಳನ್ನು ನೂರು ಎತ್ತುಗಳ ಮೇಲೆ ಹೇರಿಸಿಕೊಂಡು ಗುತ್ತಿ ಗ್ರಾಮಕ್ಕೆ ಬಂದು ತಂಗಿದ್ದ ಸದಾಶಿವರಾಯನನ್ನು ಕರೆತರುವು ದಕ್ಕಾಗಿ ತಾನೇ ಕತ್ತಿಯನ್ನು ಕೈಯಲ್ಲಿ ಹಿಡಿದು ಮುಂದಾಳಾಗಿ ಹೊರ ಟನು. ಗುತ್ತಿಯಿಂದ ರಾಜಪುತ್ರನನ್ನು ಕರೆತಂದ ತರುವಾಯ, ವಿಜಯ ನಗರ ರಾಜಧಾನಿಯಲ್ಲಿ ಪಟ್ಟಾಭಿಷೇಕ ಸಮಾರಂಭವು ಅತಿಶಯ ವಿಜೃಂ ಭಣೆಯಿಂದ ನಡೆಯಿತು. ಕರ್ಣಾಟಕದ ಸಕಲ ಸಾಮಂತರಾಜರೂ ಆಂಧ್ರ, ದ್ರವಿಡ ದೇಶಗಳ ರಾಜ ಪ್ರತಿನಿಧಿಗಳೂ, ವೇದ ಶಾಸ್ತ್ರ ಪಾರಂಗ ತರಾದ ಬ್ರಾಹ್ಮಣೋತ್ತಮರೂ, ಕವಿಗಳೂ ನಟವಿಟಗಾಯಕರೂ, ಅಲ್ಲದೆ ಉಭಯ ಸೈನ್ಯಗಳ ಹಲವು ಮಂದಿ ಶೂರ ಸರದಾರರೂ ನೆರೆದು ಆ ಸಭೆಯನ್ನು ನೇತ್ರಾನಂದಗೊಳಿಸಿದ್ದರು. ಶ್ರೀ ರಾಮರಾಜನೇ ಮೂ ರ್ಧನ್ಯನಾಗಿ ನಿಂತು, ಪೂರ್ವದ ತುಳುವ ನರಸರಾಜನ ವಂಶದ ಆ ಒಂದು ತಂತುವು ವ್ಯರ್ಥವಾಗದಂತೆ ಪುನಃ ರಾಜ್ಯ ಪ್ರದಾನಮಾಡಿ, ರಾಜವಂಶ ವನ್ನು ಜೀರ್ಣೋದ್ಧಾರ ಮಾಡಿದ ಮಹದ್ಯಶಕ್ಕೆ ಪಾತ್ರನಾದನು. ಸಿಂಹಾ ಸನದ ಮೇಲೆ ಶ್ವೇತಚ್ಛತ್ರದ ನೆಳಲಿನಲ್ಲಿ ಕುಳಿತು ಪಟ್ಟಾಭಿಷಿಕ್ತ ನಾಗಿ ಬ್ರಾಹ್ಮಣಾಶೀರ್ವಾದ ಮಂತ್ರಾಕ್ಷತೆಗಳಿಗೂ, ಸಭಿಕರ ಉತ್ಸಾಹಪೂರಿತ ಕರತಾಡನಗಳಿಗೂ ಪಾತ್ರನಾಗಿದ್ದ ಆ ತಮ್ಮ ಬಾಲ ರಾಜನನ್ನು ಕಂಡು ಸಮಸ್ತ ಪಟ್ಟಣಿಗರೂ, ರಾಜ ಬಂಧುಗಳೂ ಹರ್ಷಾ ಶ್ರುಗಳನ್ನು ಸುರಿಸುತ್ತಾ, ಚಿರಕಾಲ ಸುಖವಾಗಿ ರಾಜ್ಯಭಾರ ಮಾಡೆಂದು ಮನಸಾರೆ ಹರಸಿದರು. ಸಕಲ ಸಾಮಂತರೂ, ಆತನನ್ನು-ಆ ವೀರ

ಪ್ರತಾಪ ಕಠಾರಿ ಸಾಳುವ ವೀರ ಸದಾಶಿವರಾಯದೇವ ಮಹಾರಾಯ-ನನ್ನು ವಿಜಯನಗರ ಸಾಮ್ರಾಜ್ಯದ ಪ್ರಭುವೆಂದು ಒಪ್ಪಿಕೊಂಡು, ಸಾಮ್ರಾಜ್ಯಕ್ಕೆ ಕಷ್ಟವೊದಗಿದಾಗ ತಮ್ಮ ತಮ್ಮ ಪಾಲಿನ ಸಹಾಯವನ್ನು ತಪ್ಪದೆ ಸಲ್ಲಿಸುವೆವೆಂದು ಆಯುಧಗಳನ್ನು ಮುಟ್ಟಿ ಪ್ರಮಾಣಮಾಡಿಯೂ, ನಜರು ಮುಜುರೆಗಳನ್ನರ್ಪಿಸಿಯೂ ಗೌರವಿಸಿದರು. ಇಂತು ರಾಮರಾಜನು ಪೂರ್ವದ ರಾಜವಂಶವನ್ನು ಜೀರ್ಣೋದ್ಧಾರ ಮಾಡಿ ಸಕಲರಿಂದಲೂ, 'ಜೀರ್ಣ ಕರ್ಣಾಟಕ ಸೌಭಾಗ್ಯ ಲಕ್ಷ್ಮೀ ಮಾಂಗಲ್ಯ ಪ್ರದಾತ' ಎಂದು ಹೊಗಳಿಸಿಕೊಂಡನು.



ಅಧ್ಯಾಯ ೩. "ಅರವೀಡುವಂಶ"

೧೫೪೨ ನೆಯ ಸಂವತ್ಸರದ ಪೂರ್ವಾರ್ಧದಲ್ಲಿ ಸದಾಶಿವರಾಯನಿಗೆ ಪಟ್ಟಾಭಿಷೇಕ ಮಹೋತ್ಸವವು ನಡೆಯಿತು. ಆದರೂ ಆತನು ಅಲ್ಪ ವಯಸ್ಕನಾಗಿದ್ದುದರಿಂದ ಮುಖ್ಯ ಮಂತ್ರಿ ಪದವಿಯನ್ನು ವಹಿಸಿದ್ದ ರಾಮರಾಜನೇ ರಾಜಸಂರಕ್ಷಕನಾಗಿಯೂ ರಾಜ್ಯದ ಸರ್ವಾಧಿಕಾರಿಯಾಗಿಯೂ ಏರ್ಪಟ್ಟನು. ಹೆಚ್ಚೇನು! ಸದಾಶಿವರಾಯನ ಆದ್ಯಂತ ಆಳ್ವಿಕೆಯಲ್ಲೂ, ನಾಮಮಾತ್ರ ರಾಜನೇನೋ ಅವನೇ! ಆದರೆ ನಿಜವಾಗಿ ರಾಜ್ಯವಾಳುತ್ತಿದ್ದವನು ರಾಮರಾಜನು! ಆದುದರಿಂದ ಆತನ ವಂಶ ಚರಿತ್ರೆಯನ್ನೂ ಕೆಲಮಟ್ಟಿಗೆ ಹೇಳಿ ಮುಂದರಿಸತಕ್ಕುದು ಕರ್ತವ್ಯವಾಗಿದೆ!

ಈ ವಂಶೀಕರು ತಮ್ಮದು ಚಂದ್ರವಂಶವೆಂದೂ ಪಾಂಡವರು ತಮ್ಮ ಮೂಲಪುರುಷರೆಂದೂ ಹೇಳಿಕೊಳ್ಳುವರು. ಆ ವಂಶಾನುಕ್ರಮದಲ್ಲೇ ಬರುತ್ತಾ, ನವನಂದರೂ, ಮೌರ್ಯ ಚಂದ್ರಗುಪ್ತನೂ, ಇನ್ನೂ ಸಮಿಾಪಕ್ಕೆ ಬರುತ್ತಾ, ಚಾಳುಕ್ಯ ಕುಲಶೇಖರನೂ ಕಲ್ಯಾಣಪುರಾಧೀಶನೂ ಆದ ಬಿಜ್ಜಳನೂ ತಮ್ಮ ಪೂರ್ವಿಕರೆಂದು ಹೇಳಿಕೊಳ್ಳುವುದುಂಟು. ಚಾರಿತ್ರಿಕವಾಗಿ ತಾತಪಿನ್ನಮ ಎಂಬುವನು ಇವರ ವಂಶಕರ್ತನೆಂದು ತಿಳಿಯುತ್ತದೆ. ಈತನ ಮಗ ಸೋಮದೇವನೆಂಬಾತನು ಮಹಾ ಪರಾಕ್ರಮಿಯಾಗಿ, ಒಂದೇ ದಿನದಲ್ಲಿ ಏಳು ದುರ್ಗಗಳನ್ನು ಜಯಿಸಿದ ವೀರಭಟನೆಂದು ಪ್ರಖ್ಯಾತನಾದನು. ಈತನ ಮಗ ಪಿನ್ನಮನೆಂಬಾತನ ಕಾಲದಲ್ಲಿ ಇವರಿಗೆ

ಅರವೀಡು ವಂಶೀಕರೆಂದು ಹೆಸರು ಬಂದಿತು. ಪಿನ್ನಮನು ಅರವೀಡು ಪ್ರಾಂತವನ್ನು ಜಹಗೀರಾಗಿ ಪಡೆದು, ಮೆಲ್ಲಮೆಲ್ಲಗೆ ದೇಶದ ರಾಜಕೀಯ ವಿಚಾರಗಳಲ್ಲೂ ಪ್ರಸಿದ್ಧಿಗೆ ಏರುತ್ತಿದ್ದನು. ಆತನ ಮಗ ಆರ್ವೀಟಿ ಬುಕ್ಕ ರಾಜನೆಂಬಾತನು ಮಹಾ ಪರಾಕ್ರಮಶಾಲಿಯಾಗಿ, ಸಾಳುವ ನರಸಿಂಹ ರಾಜನಿಗೆ ಬಲಭುಜದಂತಿದ್ದು ರಾಜ್ಯಸ್ಥಾಪನೆಯಲ್ಲಿ ಆತನಿಗೆ ವಿಶೇಷ ಸಹಾಯ ಮಾಡಿ, ವೀರ ಸೇನಾಪತಿಯೆಂದು ಪ್ರಖ್ಯಾತನಾದನು. ಈತನಿಗೆ ಬಾಲಾಂಬಿಕೆಯೆಂಬ ಭಾರ್ಯೆಯಲ್ಲಿ ರಾಮರಾಯನೆಂಬ ಪುತ್ರನು ಜನಿಸಿದನು. ರಾಮರಾಯನು ವೆಂಕಟಪತಿ ತಿರುಮಲ ಎಂಬಿಬ್ಬರು ತಮ್ಮಂದಿರ ಸಹಾಯದಿಂದ ಗುತ್ತಿ, ಪೆನುಕೊಂಡ, ಆವನಗಿರಿ ಕರ್ನೂಲ್, ಮುಂತಾದ ಸ್ಥಳಗಳನ್ನು ಜಯಿಸಿದುದಲ್ಲದೆ, ಗೋಲ್ಕೊಂಡದ ಮಹಮದೀಯ ಸುಲ್ತಾನನನ್ನು ಪರಾಭವಗೊಳಿಸಿ ಶೂರಾಗ್ರೇಸರನೆನಿಸಿಕೊಂಡನು. ಈತನಿಗೆ ಲಕ್ಷ್ಮಾಂಬಿಕೆಯೆಂಬ ಪತ್ನಿಯಲ್ಲಿ ಶ್ರೀರಂಗ, ಚಿನ್ನವೆಂಕಟಪತಿ, ತಿಮ್ಮ ಅಥವಾ ತಿರುಮಲ ಎಂಬ ಮೂರುಮಂದಿ ಪುತ್ರರು ಉದಯಿಸಿದರು. ಶ್ರೀ ರಂಗರಾಜನು ತಿಮ್ಮಾಂಬೆಯೆಂಬಾಕೆಯನ್ನು ಪಾಣಿಗ್ರಹಣ ಮಾಡಿ, ಆಕೆಯಲ್ಲಿ ಕೋನರಾಜ, ತಿಮ್ಮರಾಜ, ರಾಮರಾಜ, ತಿರುಮಲ ರಾಜ, ವೆಂಕಟಾದ್ರಿ ಎಂಬ ಐದು ಮಂದಿ ಮಕ್ಕಳನ್ನು ಪಡೆದನು. ಮೊದಲನೆಯವರಿಬ್ಬರ ವಿಷಯವಾಗಿ ಏನು ನಡೆಯಿತೆಂಬುದು ಎಲ್ಲೂ ಉಲ್ಲೇಖವಿಲ್ಲ. ಮಿಕ್ಕವರಲ್ಲಿ ಹಿರಿಯನೇ ನಮ್ಮ ಕಥಾನಾಯಕನಾದ ಶ್ರೀ ರಾಮರಾಜನು. ಈ ರಾಮರಾಜನೇ ಬಹಮನೀ ರಾಜ್ಯದ ಐದುಮಂದಿ ಮಹಮ್ಮದೀಯ ಮಂಡಲಾಧೀಶರನ್ನೂ ಸೂತ್ರದ ಬೊಂಬೆಗಳಂತೆ ಆಡಿಸಿದ ವೀರಾಗ್ರಣಿಯು. ಈತನೇ ವಿಜಯನಗರದ ವೀರನರಪತಿ ಶ್ರೀ ಕೃಷ್ಣದೇವರಾಯನ ಅಳಿಯನು ;—ನಮ್ಮ ಕಥಾನಾಯಕನು. ಈತನಿಗೆ ನಾಲ್ಕು ಮಂದಿ ಭಾರ್ಯೆಯರು. ಅವರಲ್ಲೊಬ್ಬಾಕೆಯು ಕೃಷ್ಣದೇವ ರಾಯನ ಮಗಳಾದ ತಿರುಮಲಾಂಬ. ಈಕೆಯ ಉದರದಲ್ಲಿ ಕೃಷ್ಣರಾಜ, ಪೆದ್ದತಿಮ್ಮರಾಜ ಎಂಬಿಬ್ಬರು ಮಕ್ಕಳೂ, ಕೊಂಡಮಾಂಬ, ಲಕ್ಷ್ಮಾಂಬ ಎಂಬ ರಾಣಿಯರಲ್ಲಿ, ಕ್ರಮವಾಗಿ ಕೊಂಡರಾಜ, ಚಿನತಿಮ್ಮರಾಜ ಮತ್ತು ಶ್ರೀರಂಗರಾಜ ಎಂಬ ಮಕ್ಕಳೂ ಜನಿಸಿದರು. ಈ ಮೂರು ಮಂದಿಯ

ಲ್ಲದೆ, ಈತನಿಗೆ ಅಪ್ಪಲಾಂಬ ಎಂಬೊಬ್ಬ ಪತ್ನಿಯೂ ಇದ್ದಳು. ಶ್ರೀ ರಾಮರಾಜನು, ಮಹಾಶೂರರಾದ ತನ್ನ ಈ ಐದು ಮಂದಿ ಪುತ್ರರ ಮತ್ತು ಇಬ್ಬರು ತಮ್ಮಂದಿರ ಸಹಾಯದಿಂದ, ಸದಾಶಿವರಾಯನ ವಿಜಯ ನಗರ ಸಾಮ್ರಾಜ್ಯವನ್ನು, ಇಪ್ಪತ್ತಾಲ್ಕು ವರ್ಷಕಾಲ ಅದ್ವಿತೀಯ ಪ್ರೌಢಿಮೆ ಪರಾಕ್ರಮಗಳಿಂದ ಆಳಿ ಮಹಾಮಂಡಲೇಶ್ವರನೆಂಬ ಪ್ರಖ್ಯಾತಿಗೆ ಪಾತ್ರನಾದನು. ಆತನು ಇಷ್ಟು ಪ್ರಖ್ಯಾತನಾಗಿ ಆಳಿದನಾದರೂ, ಆತನು ಜನಿಸಿದ ತಿಥಿವಾರಗಳನ್ನಲ್ಲ-ವರುಷವನ್ನು ಸಹ ಚಾರಿತ್ರಿಕ ಸಂಗತಿಗಳಲ್ಲಿ ಒಂದಕ್ಕೊಂದಕ್ಕೆ ಸಂಬಂಧಿಸಿ ತಿಳಿದುಕೊಳ್ಳಬೇಕಾಗಿದೆಯಲ್ಲದೆ ಗೊತ್ತಾದ ಕಾಲವು ತಿಳಿಯದು. ತಾಳೀಕೋಟೆಯ ಮಹಾಯುದ್ಧವು ನಡೆದಾಗ್ಗೆ ಎಂದರೆ ೧೫೬೫ನೆಯ ಸಂ॥ ದಲ್ಲಿ ರಾಮರಾಜನು ತೊಂಬತ್ತಾರು ವರ್ಷದ ವೃದ್ಧನೆಂದು ಐತಿಹಾಸಿಕರ ಹೇಳಿಕೆಯಿರುವುದರಿಂದ ಅದರ ಆಧಾರದ ಮೇಲೆ ಈತನು ೧೪೬೯ನೆಯ ಸಂವತ್ಸರದ ಸುಮಾರಿನಲ್ಲಿ ಜನಿಸಿರಬಹುದೆಂದು ನಿರ್ಧರಿಸಬೇಕಾಗಿದೆ.

ಶ್ರೀ ರಾಮರಾಜನು ಬಹು ಸೂಕ್ಷ್ಮಮತಿಯೂ, ರಾಜತಂತ್ರಜ್ಞನೂ ಆಗಿದ್ದನು. ರಾಜನೀತಿ ಶಾಸ್ತ್ರವನ್ನು ವಿಧಿವತ್ತಾಗಿ ಅಧ್ಯಯನ ಮಾಡಿದ್ದನು. ಜ್ಞಾನಪ್ರಬುದ್ಧರಾದ ಗುರುಗಳ ಬಳಿ ಕುಳಿತು, ಅರ್ಥಶಾಸ್ತ್ರದ ಮರ್ಮಗಳನ್ನು ಮನನ ಮಾಡಿದ್ದನು. ಶತ್ರುನಿಧನಕ್ಕಾಗಿ ಉಪಯೋಗಿಸಬೇಕಾದ ಸಾಮ ದಾನ ಭೇದ ಮತ್ತು ದಂಡ ಎಂಬ ಈ ನಾಲ್ಕು ಉಪಾಯಗಳಲ್ಲೂ ಆತನಿಗಿದ್ದ ಪ್ರಜ್ಞೆಯಲ್ಲಿ ನ್ಯೂನತೆಯಿರಲಿಲ್ಲ. ಶಕ್ತಿತ್ರಯಗಳನ್ನು ದೇಶಕಾಲ ಪಾತ್ರಗಳನ್ನರಿತು ಉಪಯೋಗಿಸುವಲ್ಲಿ ಆತನು ಅತ್ಯಂತ ವಿಚಕ್ಷಣನಾಗಿದ್ದನು. ಸದಾಶಿವರಾಯನಿಗೆ ಬಾಲ್ಯವಯಸ್ಸಾದುದರಿಂದ ರಾಮರಾಜನು 'ರೀಜಂಟ್' ಎಂಬ ರಾಜಪುತ್ರನ ಪೋಷಕಸ್ಥಾನದಲ್ಲಿದ್ದು, ಅಗಾಧವೂ ವಿಸ್ತಾರವೂ ಆದ ವಿಜಯನಗರ ಸಾಮ್ರಾಜ್ಯವನ್ನು ಹಿಡಿಯಲ್ಲಿಟ್ಟುಕೊಂಡಂತೆ, ಸ್ವಾಧೀನಪಡಿಸಿಕೊಂಡು ಆಳತೊಡಗಿದನು. ಆತನ ತಮ್ಮಂದಿರ ಸಹಾಯ ಸಹಾನುಭೂತಿಯೂ ಒದಗಿದುದು ಆತನ ಪುಣ್ಯೋದಯವೆನ್ನಬೇಕು. ಹೀಗೆ ತನಗೆ ಸಹಾಯಕರಾದತನ್ನ ತಮ್ಮಂದಿರಲ್ಲಿ ವೆಂಕಟಾದ್ರಿ ರಾಜನಿಗೆ ಸಂಸ್ಥಾನದ ಭಾಂಡಾ

ರದ ಮುಖ್ಯಾಧಿಕಾರವನ್ನು ವಹಿಸಿದನು. ತಿರುಮಲರಾಯನು, ರಾಜ್ಯದ ಅಖಿಲ ಚತುರಂಗದ ದಂಡನಾಯಕನಾಗಿ, ತನ್ನ ಅಣ್ಣನಿಗೆ ಬಲ ಭುಜದಂತಿದ್ದನು. ತುರುಷ್ಕರಾಜ್ಯಗಳ ಗಡಿಯನ್ನು ಹೊಂದಿಕೊಂಡಿದ್ದು, ಬಹು ಮುಖ್ಯ ದುರ್ಗವಾಗಿದ್ದ ಉದಯಗಿರಿಯು ವೆಂಕಟಾದ್ರಿಯ ಠಾಣ್ಯ ವಾಗಿದ್ದಿತು. ರಾಜ್ಯದ ಸಕಲ ಭಾಗಗಳೂ ಅಲ್ಲಲ್ಲಿ ಪೂರ್ವದಿಂದಲೂ ಆಳಿ ಕೊಂಡು ಬರುತ್ತಿದ್ದ ರಾಜರು, ಪಾಳಯಗಾರರು, ನಾಯಕರೂ ಮುಂ ತಾದ ಸಾಮಂತರಿಗೇ ವಹಿಸಲ್ಪಟ್ಟಿದ್ದಿತು. ಅವರೆಲ್ಲರೂ ವಿಜಯನಗರದ ಸಾರ್ವಭೌಮಪೀಠಕ್ಕೆ ಅಧೀನರಾಗಿ ಕಪ್ಪ ಕಾಣಿಕೆಗಳನ್ನು ಒಪ್ಪಿಸು ವಂತೆ ಸರ್ವಾಧಿಪತಿ ರಾಮರಾಜನೊಂದಿಗೆ ಕರಾರು ಮಾಡಿಕೊಂಡರು.

ಸದಾಶಿವರಾಯನ ಪಟ್ಟಾಭಿಷೇಕವಾದ ಕೆಲವು ದಿನಗಳಲ್ಲೇ ರಾಮರಾಜನ ತೀಕ್ಷ್ಣಪ್ರಕೃತಿ, ಧೈರ್ಯ, ದೃಢನಿಶ್ಚಯಾದಿಗಳನ್ನು ಪ್ರದರ್ಶಿಸುವಂತಹ ಒಂದು ಸಂಗತಿ ಜರುಗಿತು. ಸಲಕಮು ತಿಮ್ಮ ಯ್ಯನ ಅವಿವೇಕ ಕಾರ್ಯಭಾರಗಳಿಂದ ರಾಜ್ಯಭಾರದಲ್ಲಿ ಕೆಟ್ಟಿದ್ದ ಕೆಲ ವು ವಿಚಾರಗಳನ್ನು ಸರಿಪಡಿಸುವುದಕ್ಕಾಗಿ, ವಿಜಾಪುರದಮೇಲೆ ದಂಡೆತ್ತಿ ಹೋಗಬೇಕಾದ ಕಾರ್ಯಭಾಗವೊಂದು ಒದಗಿತು. ಆ ಸಂಗತಿಯು, ಆವನ ಬುದ್ಧಿಹೀನತೆಯ ಆಡಳಿತದಲ್ಲಿ ಮನಬಂದಂತೆ ಮೇಯ್ದು ಆಲಶ್ಯ ಭಾವವು ಮೈಯುಂಡುಹೋಗಿದ್ದ ಕೆಲಮಂದಿ ಸರದಾರರಿಗೂ ದಳ ವಾಯಿಗಳಿಗೂ ಸರಿತೋರಲಿಲ್ಲ. ಒಡನೆ ಅವರೆಲ್ಲರೂ ಒಂದಾಗಿ, ರಾಮ ರಾಜನ ಸರ್ವಾಧಿಪತ್ಯವು ತಮಗೆ ಸಮ್ಮತಿಯಿಲ್ಲವೆಂದೂ, ಆತನು, ಆ ಕೆಲಸವನ್ನು ಬಿಡಬೇಕೆಂದೂ, ತಾವು ತಮಗೆ ಮನಬಂದ ಮತ್ತೊಬ್ಬಾತ ನನ್ನು ಆರಿಸಿ ನಿಯಮಿಸುವೆವೆಂದೂ ನಿರ್ಬಂಧಿಸತೊಡಗಿದರು. ತಂತ್ರ ವಿಶಾರದನಾದ ರಾಮರಾಜನು ಅವರ ಉದ್ದೇಶಗಳನ್ನು ಹಸನ್ಮುಖ ದಿಂದಲೇ ಕೇಳಿ, ಹಾಗಾಗಬಹುದೆಂದೂ, ಅವರೆಲ್ಲರ ಅಭಿಪ್ರಾಯಗಳನ್ನೂ ಒಂದೆಡೆಯಲ್ಲಿ ಕೇಳಲು ಅನುಕೂಲಿಸುವಂತೆ ಅರಮನೆಯ ವಿಶಾಲ ಸಭಾ ಭವನದಲ್ಲಿ ಸೇರಿರೆಂದೂ ಅವರಿಗೆ ತಿಳಿಸಿದನು. ಆ ಮಾತಿಗೆ ಸಂತೋಷ ಪಟ್ಟು ಎಲ್ಲರೂ ನೆರೆದರು. ಆ ಸ್ಥಳವನ್ನು ರಾಮರಾಜನ ಆಪ್ತರೂ ಅಧೀ ನರೂ ಹಿತಚಿಂತಕರೂ ಸುತ್ತಿಕೊಂಡು ರಹಸ್ಯವಾಗಿ ಕಾದಿದ್ದರು.

ವಿರೋಧಿಗಳೆಲ್ಲರೂ ಅಲ್ಲಿ ನೆರೆದರೆಂದು ತಿಳಿದೊಡನೆಯೇ, ಸರ್ವಾಧಿಕಾರಿಯ ಕಡೆಯವರು ಅವರನ್ನು ಮುತ್ತಿಕೊಂಡು, ಬಂಧಿಸಿ, ಕೆಲವರನ್ನು ಕೊಂದರು. ಮತ್ತೆ ಹಲವರ ಕಣ್ಣುಗಳನ್ನು ಕಿತ್ತರು. ಕೆಲಮಂದಿಗೆ ಕೈಕಾಲ್ಗಳನ್ನು ಕತ್ತರಿಸಿದರು. ಹೀಗಾಗಿ ಆ ವಿರೋಧಿಗಳ ಪಂಗಡವು ನಿರ್ನಾಮವಾಯಿತು. ರಾಮರಾಜನು, ಎದುರಿಸುವವರಾರೂ ಇಲ್ಲದಿರಲು ತಾನೇತಾನಾಗಿ ಆಧಿಪತ್ಯ ಮಾಡತೊಡಗಿದನು.

ಸುಮಾರು ೧೫೫೦ ನೆಯ ಸಂವತ್ಸರವಿರಬಹುದು ! ರಾಜಾ ಸದಾಶಿವರಾಯನು ಪ್ರಾಪ್ತ ವಯಸ್ಕನಾಗಿ ರಾಜ್ಯಾಧಿಪತ್ಯವನ್ನು ವಹಿಸಲು ಅರ್ಹನಾದನು. ಆದರೆ, ಒಂದಿಗೇ ವಿಧಿಯೂ ಅವನ ವಿಷಯದಲ್ಲಿ ಅತಿಶಯ ವಕ್ರಗತಿಯನ್ನವಲಂಬಿಸಿ ನಡೆಯತೊಡಗಿತು ; ವಿಜಯನಗರದ ಭವ್ಯ ಸಾಮ್ರಾಜ್ಯ ಸುಖಾನುಭವವು ತನ್ನ ಅರವೀಡು ಮನೆತನಕ್ಕೇ ದಕ್ಕುವಂತೆ ಮಾಡಿಕೊಳ್ಳಬೇಕೆಂಬ ಮಹದಾಕಾಂಕ್ಷೆಯು ಆಗ ರಾಮರಾಜನ ತಲೆಯನ್ನು ಹೊಕ್ಕಿತು. ಒಡನೆ ಧೂರ್ತನಾದ ಆತನು ಸದಾಶಿವನನ್ನು ಸೆರೆಯಲ್ಲಿಡಿಸಿದನು. ಅವನನ್ನು ಕಬ್ಬಿಣದ ಸರಳುಗಳಿಂದ ಸುತ್ತುವರಿಯಲ್ಪಟ್ಟದ್ದ ಒಂದು ರಾಜಯೋಗ್ಯವಾದ ಮಹಲಿನಲ್ಲಿಟ್ಟು ಅದರ ಸುತ್ತಲೂ ಬಲವಾದ ಪಹರೆಯ ಆಳುಗಳನ್ನಿಟ್ಟನು. ಆ ಮಹಲಿನ ಸುತ್ತಲೂ ಬಹು ಬಲವಾದ ಕಲ್ಲಿನ ಕೋಟೆಯೊಂದು ಕಟ್ಟಿಸಲ್ಪಟ್ಟಿತು. ಅಂದಿನಿಂದ ಮುಂದೆ ತಾಳೀಕೋಟೆಯ ಯುದ್ಧದಲ್ಲಿ ವಿಜಯನಗರಿಯ ರಾಜಧಾನಿಯಲ್ಲಿ ರಕ್ತಪ್ರವಾಹವು ಹರಿದು ಅದು ಮ್ಲೇಂಛರ ವಶವಾಗುವವರೆಗೂ ಸದಾಶಿವನು, ಆ ಮನೆಯಲ್ಲೇ ತನ್ನ ಕಾಲವನ್ನು ಕಳೆಯಬೇಕಾಯಿತು. ರಾಮರಾಜನು ಮೂಲರಾಜನನ್ನು ಹಾಗೆ ನಿರ್ಬಂಧದಲ್ಲಿಟ್ಟನಾದರೂ, ವರ್ಷಕ್ಕೊಂದುವೇಳೆ ಒಂದು ಮಹೋತ್ಸವವನ್ನು ನಡೆಯಿಸಿ (ಬಹುಶಃ ನವರಾತ್ರಿ ಹಬ್ಬದಲ್ಲಿ) ಅಗ್ಗಿ ಪೂರ್ವದ ತುಳುವ ನರಸರಾಜನ ವಂಶೀಕನಾದ ಆತನನ್ನು ಅವರು ಏರಿದ ಆ ರತ್ನಸಿಂಹಾಸನದಮೇಲೆ ಕೂರಿಸಿ ಪ್ರಜೆಗಳಿಗೆ ತಮ್ಮ ರಾಜಸಂತಾನವು ಇನ್ನೂ ಜೀವಂತವಾಗಿದೆ ಎಂಬುದನ್ನು ಮಾತ್ರ ತಿಳಿಸುತ್ತಿದ್ದನು. ಪ್ರಬಲ ಸರ್ವಾಧಿಕಾರಿಯ ಅಧೀನಕ್ಕೆ ಸಿಕ್ಕಿ ಹತಭಾಗ್ಯನಾದ ತಮ್ಮಾ ರಾಜನನ್ನು ಹಾಗೆ ವರ್ಷಕ್ಕೊಂದಾವರ್ತಿ

ನೋಡಿ, ಪ್ರಜೆಗಳಾದರೂ ವಿಧಿಯಿಲ್ಲದೆ, ಅಷ್ಟರಿಂದಲೇ ತೃಪ್ತರಾಗುತ್ತಿದ್ದರು. ಸದಾಶಿವರಾಯನು ಹೀಗೆ ನಾಮಮಾತ್ರ ರಾಜನಾಗಿದ್ದ ಈ ಹದಿನೈದು ವರ್ಷಕಾಲವೂ ವಿಜಯನಗರ ರಾಜ್ಯಕ್ಕೆ ರಾಮರಾಜನೇ ಸಾರ್ವಭೌಮನಾಗಿದ್ದನು.

ಸದಾಶಿವನನ್ನು ನಿರ್ಬಂಧದಲ್ಲಿಡಲು ಅರವೀಡು ವಂಶಸ್ಥರಾದ ರಾಮರಾಜನೂ, ವೆಂಕಟಾದ್ರಿ ತಿರುಮಲರೆಂಬ ಅವನ ಇಬ್ಬರು ತಮ್ಮಂದಿರೂ ಕಾರಣರೆಂದು ಕೆಲವು ಐತಿಹಾಸಿಕರು ಅಭಿಪ್ರಾಯಪಡುತ್ತಾರೆ. ಆದರೆ ಅದನ್ನು ನಂಬಲು ಸಾಧ್ಯವಿಲ್ಲ. ಏಕೆಂದರೆ, ರಾಜಾ ವೆಂಕಟಾದ್ರಿ ಮತ್ತು ತಿರುಮಲರಾಯರಿಗೆ ತಮ್ಮ ಅಣ್ಣನು ಮಾಡಿದ ಆ ರಾಜದ್ರೋಹ ಕಾರ್ಯವು ಸಮಾಧಾನವಾಗಲಿಲ್ಲ. ಅಲ್ಲದೆ, ಆತನು, ರಾಜವಂಶೀಕನೂ ಮೂರ್ಧಾಭಿಷಿಕ್ತನೂ ಆದ ಆ ರಾಜಪುತ್ರನ ವಿಷಯದಲ್ಲಿ ನಡೆದುಕೊಳ್ಳುತಿದ್ದ ರೀತಿ ನೀತಿಗಳೂ ಅವರಿಗೆ ಸಮಾಧಾನವಿರಲಿಲ್ಲ. ಸಾಲದುದಕ್ಕೆ, ಸದಾಶಿವನು ತಿರುಮಲರಾಯನಿಗೆ ಒಂದು ಜಹಗೀರನ್ನೂ ಕೊಟ್ಟಿದ್ದನು. ಹೀಗೆ ತಮ್ಮಣ್ಣನ ಧೂರ್ತ ಆಚರಣೆಗಳ ವಿಷಯದಲ್ಲಿ ಅವರ ಮನಸ್ಸಿನಲ್ಲಿ ಅಸಮಾಧಾನವು ಇದ್ದರೂ, ವಿಧಿಯಿಲ್ಲದೆ ಕೆಲಕಾಲ ಅವನಿಗೆ ವಿಧೇಯರಾಗಿಯೇ ನಡೆದುಕೊಂಡು ಬಂದರು.

ಮುಂದೆ ಒಂದು ಸಂಗತಿಯೊದಗಿತು. ಅಹಮದ್ ನಗರದ ಸುಲ್ತಾನನಿಗೆ ವಿರೋಧವಾಗಿ ದಂಡೆತ್ತಿದ್ದ ಬಿಜಾಪುರದ ಸುಲ್ತಾನನಿಗೆ ಸಹಾಯಕನಾಗಿ ರಾಮರಾಜನು ಸೈನ್ಯದೊಂದಿಗೆ ಹೊರಟು ನಡೆದಿದ್ದನು. ಹೀಗೆ ಆತನು ರಾಜಧಾನಿಯಲ್ಲಿಲ್ಲದಿದ್ದ ಸಮಯವನ್ನು ಸಾಧಿಸಿ, ಆ ಇಬ್ಬರು ತಮ್ಮಂದಿರೂ, ತಮ್ಮ ಸ್ವಾಧೀನದಲ್ಲಿದ್ದ ಸೈನ್ಯ ಭಾಂಡಾರಗಳ ಸಹಾಯದಿಂದ ಆದವಾನಿಯ ಸುತ್ತಮುತ್ತಲಿದ್ದ ಕೆಲವು ಪ್ರಾಂತಗಳನ್ನು ತಮ್ಮ ಆಜ್ಞೆಗೆ ಒಳಪಡಿಸಿಕೊಂಡು ಸ್ವತಂತ್ರವಾಗಿ ಅಧಿಪತ್ಯ ಮಾಡತೊಡಗಿದರು. ರಾಮರಾಜನು ರಾಜಧಾನಿಗೆ ಬಂದ ತರುವಾಯ ಈ ಸಂಗತಿಯು ತಿಳಿಯಬರಲು, ಮಹಾಧೂರ್ತನಾದ ಆತನು ರೋಷಗೊಂಡು, ಗೋಲ್ಕೊಂಡದ ನವಾಬನಾದ ಇಬ್ರಾಹಿಂ ಕುತುಬ್ ಷಾ ಎಂಬಾತನಿಗೆ ತನ್ನ ಸಹಾಯಕ್ಕೆ ಸೈನ್ಯವನ್ನು ಕಳುಹಿಸುವಂತೆ ಬರೆಸಿದನು. ಅವನೂ ಆರು

ಸಾವಿರ ಸೈನ್ಯವನ್ನು ಕಳುಹಿಸಲು ರಾಮರಾಜನು, ಆ ಸೈನ್ಯದೊಂದಿಗೆ ತಮ್ಮ ಸೈನ್ಯವನ್ನೂ ಜೊತೆಮಾಡಿ ತನ್ನ ತಮ್ಮಂದಿರಮೇಲೆ ಕೈಮಾಡಲು ಕಳುಹಿಸಿದನು. ರಾಜಾ ವೆಂಕಟಾದ್ರಿ—ತಿರುಮಲರಾಯರು ಆ ಸಾಮ್ರಾಜ್ಯ ಸೈನ್ಯಕ್ಕೆ ಪ್ರತಿಭಟಿಸಿ ನಿಲ್ಲಲಶಕ್ತರಾಗಿ ಆದವಾನಿಯ ಕೋಟೆಯಲ್ಲಿ ಆಶ್ರಯಹೊಂದಿ ಅವಿತುಕೊಂಡರು. ಶತ್ರುಸೈನ್ಯವು ಅವರನ್ನು ಆರು ತಿಂಗಳ ಕಾಲ ಮುತ್ತಿ ಕೋಟೆಯನ್ನು ಆವರಿಸಿಕೊಂಡು ಹೊರಗಿನಿಂದ ಒಂದು ಪದಾರ್ಥವನ್ನೂ ಒಳಕ್ಕೆ ಬಿಡದೆ, ಒಳಗಿನಿಂದ ಒಬ್ಬರನ್ನೂ ಹೊರಕ್ಕೆ ಬರಲೀಯದೆ ನಿರ್ಬಂಧಗೊಳಿಸಿತು. ಕೊನೆಕೊನೆಗೆ ಕೋಟೆಯಲ್ಲಿದ್ದ ಜನರೂ, ಸೈನಿಕರೂ ಆಹಾರ ಸಾಮಗ್ರಿಗಳಿಲ್ಲದೆ ಸಾಯುವಕಾಲ ಬರಲು, ಆ ರಾಜ ಭ್ರಾತೃಗಳು ತಮ್ಮ ಅಣ್ಣನಿಗೆ ಶರಣಾಗತರಾಗಲು ಸಿದ್ಧರಾದರು. ರಾಮರಾಜನಾದರೂ, ಆ ತನ್ನ ತಮ್ಮಂದಿರನ್ನು ಒಡನೆ ಕ್ಷಮಿಸಿ, ಪೂರ್ವದಂತೆಯ್ಯೇ ಅಧಿಕಾರ ಪದವಿಗಳನ್ನಿತ್ತು ಗೌರವಿಸಿದನು. ರಾಮರಾಜನು ತನ್ನ ತಮ್ಮಂದಿರ ವಿಷಯದಲ್ಲಿ ಹಾಗೆ ಮಾಡಿದುದೇನು ಅಸಾಧಾರಣ ಕಾರ್ಯವಲ್ಲ; ಏಕೆಂದರೆ, ಶೂರರಾದ ತನ್ನ ತಮ್ಮಂದಿರ ಸಹಾಯವು ಆತನಿಗೆ ಅತ್ಯಾವಶ್ಯಕವಿತ್ತು. ಅವರ ಭುಜಬಲದ ಸಹಾಯದಿಂದ ಸುತ್ತುಮುತ್ತಲಿನ ಶತ್ರುವರ್ಗವನ್ನು ಜೈಸಿ, ವಿಜಯನಗರ ಸಾಮ್ರಾಜ್ಯವನ್ನು ಅಜೇಯವೆನ್ನಿಸಬೇಕೆಂಬುದು ಆತನ ಮಹತ್ವಾಕಾಂಕ್ಷೆಯಾಗಿದ್ದಿತು. ಹೀಗೆ ಬೆರೆತ ಆ ಮೂರುಮಂದಿ ಅರವೀಡುವಂಶಸ್ಥರಾದ ಸೋದರರೂ, ಇಪ್ಪತ್ತೈದು ವರ್ಷಕಾಲ ಆ ರಾಜ್ಯವನ್ನು, ಅಂತರಿಕ್ಷದಲ್ಲಿ ಮೆರೆವ ಮುಂಜಾವಿನ ಶುಕ್ರನಕ್ಷತ್ರದಂತೆ ಮಹಾ ತೇಜಸ್ವಿಯೆನ್ನಿಸಿ ಪಾಲಿಸಿದರು.



ಅಧ್ಯಾಯ ೪. "ರಾಮರಾಜನ ರಾಜ್ಯಶಾಸನ"

ವಿಸ್ತಾರವಾದ ವಿಜಯನಗರ ರಾಜ್ಯಪಾಲನೆಯಲ್ಲಿ ರಾಮರಾಜನಿಗೆ ಸ್ವಜನ ಸಹಾಯವು ವಿಶೇಷವಾಗಿ ಒದಗಿತು. ಆತನ ಸಾಕ್ಷಾತ್

ತಮ್ಮಂದಿರಾದ ತಿರುಮಲರಾಜ ವೆಂಕಟಾದ್ರಿರಾಜರಂತೂ ಸರ್ವಾಧಿಕಾರಿಯ ಎಡಬಲ ಭುಜಗಳಂತಿದ್ದರಷ್ಟೆ. ರಾಮರಾಜನು ಕಾರ್ಯಾಂತರದಿಂದ ದೇಶದಿಂದ ಹೊರಕ್ಕೆ ಹೋಗಿದ್ದಾಗಲೆಲ್ಲ ಇವರೇ ಸರ್ವಾಧಿಕಾರವನ್ನು ನಡೆಸುತ್ತಿದ್ದರು. ಇವರ ಹೆಸರಿನಲ್ಲಿ ಅನೇಕ ತಾಮ್ರದ ಶಾಸನಗಳೂ ದೊರಕುತ್ತಿವೆ. ಪಾಳೆಯಗಾರರಿಗೆ ಆಯಾಯ ದುರ್ಗಗಳನ್ನು ಕೊಡುವುದು ಅಥವಾ ಅವರನ್ನು ಅಧಿಕಾರದಿಂದ ತೊಲಗಿಸುವುದು, ಅವರಿಗೆ ಶಾಸನ ಸನ್ನದುಗಳನ್ನೂ ಬಿರುದುಗಳನ್ನೂ ದಯಪಾಲಿಸುವುದು ಮುಂತಾದ ಬಹು ಜವಾಬುದಾರಿಯ ಕೆಲಸಗಳನ್ನು ಸಹ ಈ ತಮ್ಮಂದಿರೇ ಮಾಡಿಬಿಡುತ್ತಿದ್ದರು. ತಿರುಮಲರಾಯನು ರಾಜಧಾನಿಯ ಸಮೀಪವನ್ನು ಬಿಟ್ಟು, ವಿಶೇಷವಾಗಿ ಹೊರಗಿರುತ್ತಿರಲಿಲ್ಲ. ಆದರೆ, ವೆಂಕಟಾದ್ರಿಯು, ತಂಜಾವೂರಿನ ಸಮೀಪದ ತಿರುವೈಯಾರು ಎಂಬಲ್ಲಿ ಆಧಿಪತ್ಯ ಮಾಡಿಕೊಂಡಿದ್ದಂತೆಯೂ ದಾಖಲೆ ಸಿಕ್ಕುತ್ತದೆ. ಇವರಲ್ಲದೆ, ವಿಠ್ಠಲರಾಯನೆಂಬ ತನ್ನ ಬಲತಮ್ಮನನ್ನು ರಾಮರಾಜನು, ಸಿಲೋನ್ ದ್ವೀಪಕ್ಕೆ ಸರ್ವಾಧಿಕಾರಿಯಾಗಿ ಕಳುಹಿಸಿದ್ದನು. ಮತ್ತು ತನ್ನ ಬಲಅಣ್ಣ ರಂಗರಾಜನ ಮಗನಾದ ಕೊಂಡರಾಜನನ್ನೂ, ತನ್ನ ತಾಯಿಯ ಕಡೆಯಿಂದ ಸಂಬಂಧಿಯಾದ ಜಿಲ್ಲೆಲ ರಂಗಪತಿರಾಜಯ್ಯದೇವ ಎಂಬಾತನನ್ನೂ ನಾಗಪ್ಪದೇವ ಎಂಬಾತನನ್ನೂ ಸಂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಅಧಿಕಾರ ಮಾಡುವಂತೆ ನಿಯಮಿಸಿ ಕಳುಹಿಸುತ್ತಿದ್ದನು. ಇವರೆಲ್ಲರೂ ಮಹಾಶೂರರೂ ಪ್ರತಿಭಾಶಾಲಿಗಳೂ ಆಗಿ ಮಹಾಮಂಡಲೇಶ್ವರರೆಂದು ಹೊಗಳಿಕೆಗೆ ಪಾತ್ರರಾಗಿ ತಮ್ಮ ಸ್ವಾಧೀನಕ್ಕೆ ಒಳಪಟ್ಟಿದ್ದ ಪ್ರಾಂತಗಳನ್ನು ವಿಚಕ್ಷಣೆಯಿಂದ ರಕ್ಷಿಸಿಕೊಂಡು ಬರುತ್ತಿದ್ದರು.

ಪ್ರಾರಂಭದ ಕೆಲವು ವರ್ಷಗಳಲ್ಲಿ ಮೂಲರಾಜನಾದ ಸದಾಶಿವರಾಯನು ಸೆರೆಯಲ್ಲೇ ಇದ್ದನಾದರೂ ರಾಮರಾಜನು ಆತನನ್ನು ವರ್ಷಕ್ಕೊಂದಾವರ್ತಿಯಾದರೂ ಹೊರಕ್ಕೆ ತಂದು ಪ್ರಜೆಗಳಿಗೆ ತಮ್ಮ ರಾಜನನ್ನು ದರ್ಶನಮಾಡುವ ಅವಕಾಶ ಕೊಡುತ್ತಿದ್ದನು. ಸುಮಾರು ೧೫೫೦ನೆಯ ಸಂ॥ ದ ವೇಳೆಗೆ ಅದೂ ನಿಂತುಹೋಯಿತು. ತನ್ನ ವಂಶದ

ಜನರಿಗೇ ಸಾಮ್ರಾಜ್ಯದ ವಿವಿಧ ಶಾಖೆಗಳಲ್ಲಿ ಉನ್ನತಾಧಿಕಾರಗಳನ್ನು ಕೊಟ್ಟು ತನ್ನ ಪಕ್ಷವನ್ನು ಅತಿಶಯವಾಗಿ ಅಭಿವೃದ್ಧಿಪಡಿಸಿಕೊಂಡಿದ್ದ ಆ ಧೂರ್ತ ಸರ್ವಾಧಿಕಾರಿಯು, ಸಿಂಹಾಸನವನ್ನು ಏರುವ ಮಹತ್ವಾಕಾಂಕ್ಷೆಯನ್ನು ವಹಿಸಿದುವರಲ್ಲಿ ಆಶ್ಚರ್ಯವೇನೂ ಇಲ್ಲ. ೧೫೫೪ನೆಯ ಸಂ॥ ದವರೆಗೆ ಕೊಟ್ಟ ಸನ್ನದು ಶಾಸನಗಳಲ್ಲೆಲ್ಲ, ರಾಜಾಸದಾಶಿವರಾಯನ ಆಜ್ಞಾಪ್ರಕಾರ ರಾಮರಾಜನಿಂದ ಕೊಡಲ್ಪಟ್ಟಿತೆಂಬ ಉಲ್ಲೇಖವಿದೆ ಆದರೆ ತರುವಾಯ ಕ್ರಮವಾಗಿ ಆ ಹೆಸರೂ ಲುಪ್ತವಾಗಸಾಗಿದೆ. ಈಚೆಗೆ, "ರಾಮರಾಜನು ತನ್ನ ಸಮಸ್ತ ಶತ್ರುಗಳನ್ನೂ ನಿರ್ಮೂಲಗೊಳಿಸಿ ವಿಜಯನಗರ ಮಹಾಸಾಮ್ರಾಜ್ಯವನ್ನು ಭರತ ಭಗೀರಥರಂತೆ ಪಾಲಿಸಿದನು" ಎಂದು ಹೊಗಳಿಸಿಕೊಂಡನೆಂಬಂತೆ ಐತಿಹಾಸಿಕರ ಲೇಖನಗಳಿವೆ. ಕೆಲವು ದಿನಗಳಮೇಲೆ ಸದಾಶಿವರಾಯನು ಮೃತನಾದನೆಂಬ ವರ್ತಮಾನವೂ ಹಬ್ಬಿತು. ಒಂದಿಗೇ ಅರಮನೆಯಲ್ಲಿ ರಾಮರಾಜನ ಪಟ್ಟಾಭಿಷೇಕವಾದರೂ ಮಹಾವಿಜೃಂಭಣೆಯಿಂದ ನೆರವೇರಿತು. ಆತನ ಹೆಸರಿನಲ್ಲಿ ನಾಣ್ಯಗಳನ್ನು ಹಾಕಿಸಿದಂತೆ ದಾಖಲೆ ಸಿಕ್ಕುವುದಿಲ್ಲವಾದರೂ, ತಾಳೀಕೋಟೆಯ ಯುದ್ಧಕ್ಕೆ ಸ್ವಲ್ಪ ಮುಂಚೆ ರಾಮರಾಜನ ಹೆಸರಿನಲ್ಲಿ ಹೊರಡಿಸಲ್ಪಟ್ಟ ನಾಣ್ಯಗಳು ಸಿಕ್ಕಿವೆಯಂತೆ ! ರಾಮರಾಜನು, 'ರಾಜಾಧಿರಾಜ ರಾಜಪರಮೇಶ್ವರ ವೀರ ಪ್ರತಾಪ ವೀರ ರಾಮದೇವರಾಯ ಮಹಾರಾಯ' ಎಂದು ಹೊಗಳಿಸಿಕೊಂಡಿದ್ದಾನೆ.

ಹೀಗೆ ತಮ್ಮಂದಿರೂ ಬಂಧುಗಳೂ ಮಿತ್ರರೂ ಸಾಮ್ರಾಜ್ಯದ ಉನ್ನತಾಧಿಕಾರಗಳನ್ನು ವಹಿಸಿ, ಸಮಸ್ತ ಕಾರ್ಯಗಳನ್ನೂ ನಿರ್ವಹಿಸಿಕೊಂಡಿರುತ್ತಿರಲು, ರಾಮರಾಜನು ಮಹಾಮಾತ್ಯ ತೋಡರಮಲ್ಲನೆಂಬ ತನ್ನ ಮಂತ್ರಿಯಿಂದ ಕಟ್ಟಲ್ಪಟ್ಟ, ರತ್ನಕೂಟವೆಂಬ ತನ್ನ ಭವ್ಯವಾದ ಅರಮನೆಯಲ್ಲಿ ಕುಳಿತು, ವೇದಶಾಸ್ತ್ರ ಪಾರಂಗತರಾದ ವಿದ್ವಾಂಸರು, ಸುಪ್ರಸಿದ್ಧ ಗಾಯಕರು, ಚಿತ್ರಶಿಲ್ಪ ಸಾಹಿತ್ಯಾದಿ ಕಲಾನಿಪುಣರು ಇವರ ಸಮ್ಮೇಳನದಲ್ಲಿ ವಿನೋದದಿಂದ ಕಾಲಯಾಪನೆ ಮಾಡತೊಡಗಿದನು. ಈ ಮಧ್ಯೆ ಕೆಲವು ಕಾಲ ತನ್ನ ಗುರುವಾದ ಶ್ರೀ ತಾತಾಚಾರ್ಯರೆಂಬವರೊಂದಿಗೆ ಚಂದ್ರಗಿರಿಯ ಏಕಾಂತಪ್ರದೇಶಕ್ಕೆ ಪ್ರಯಾಣಬೆಳೆಸಿ, ಅಲ್ಲಿ ಅಧ್ಯಾತ್ಮ ಶಾಸ್ತ್ರಾಧ್ಯಯನ ಮಾಡಿದನೆಂತಲೂ ಹೇಳಲ್ಪಟ್ಟಿದೆ.

ರಾಮರಾಜನು ಸಾರ್ವಭೌಮಪದವನ್ನು ಸ್ವೀಕಾರಮಾಡಿದಾಗಿನಿಂದ ರಾಜ್ಯದ ಪ್ರಧಾನ ಮಂತ್ರಿತ್ವವು ತಮ್ಮನಾದ ವೇಂಕಟಾದ್ರಿ ರಾಜನ ಸ್ವಾಧೀನಕ್ಕೆ ಬಂದಿತು. ಆತನು ಕೊಂಡವೀಡು ಪ್ರಾಂತವನ್ನು ಬಿಟ್ಟು ಬಂದು ರಾಜಧಾನಿಯಲ್ಲೇ ವಾಸಮಾಡತೊಡಗಿದನು. ರಾಜ್ಯದ ಸಮಸ್ತ ಭಾಗದಲ್ಲೂ ಭೂಕಂದಾಯವೂ, ನ್ಯಾಯನಿಬಂಧನೆಗಳೂ ಖಚಿತವಾಗಿ ಏರ್ಪಡಿಸಲ್ಪಟ್ಟು, ಕಾಲಕಾಲಕ್ಕೆ ತಗಾದೆ ಇಲ್ಲದೆ ಜಮಾವಣೆಯಾಗುತ್ತಿದ್ದುದರಿಂದ ಖಜಾನೆಯು ಸರ್ವದಾ ಕೊರತೆಯನ್ನರಿಯದೆ ತುಂಬಿರುತ್ತಿದ್ದಿತು. ಸಾಮ್ರಾಜ್ಯಕ್ಕೆ ಅಧೀನರಾದ ಪಾಳಯಗಾರರೂ, ನಾಯಕರೂ, ಸಣ್ಣ ಪುಟ್ಟ ರಾಜರೂ ತಮ್ಮಿಂದ ಮಹಾ ಸಂಸ್ಥಾನಕ್ಕೆ ಸಲ್ಲಬೇಕಾದ ಕಪ್ಪ ಕಾಣಿಕೆಗಳನ್ನು ಕಾಲಕ್ಕೆ ತಪ್ಪದೆ ತಂದೊಪ್ಪಿಸುತ್ತಾ ವಿಧೇಯರಾಗಿ ನಡೆದುಕೊಳ್ಳುತ್ತಿದ್ದರು.

ಸದಾಶಿವರಾಯನ-ಅರ್ಥಾತ್ ರಾಮರಾಜನ ಪ್ರಭುತ್ವವು ಪ್ರಾರಂಭವಾದೊಡನೆಯೇ ಹಿಂದೂದೇವಾಲಯಗಳ ಜೀರ್ಣೋದ್ಧಾರವನ್ನು ಕುರಿತು ಮಾಡಿದ ಏರ್ಪಾಡೊಂದು ಮಹತ್ವದ ವಿಚಾರವು. ಹಂಪೆಯ ವಿಠ್ಠಲಸ್ವಾಮಿ, ನಲ್ಲಚೆರುವುಪಲ್ಲೆ ಭೈರವಸ್ವಾಮಿ, ಮಾರ್ಗಾಪುರದ ಗೋಪಾಲ ಕೃಷ್ಣಸ್ವಾಮಿ, ಪುದೂರಿನ ಸಚ್ಚಿದಾನಂದಸ್ವಾಮಿ, ವೊಂಟಮಿಟ್ಟ ಕೋದಂಡರಾಮಸ್ವಾಮಿ, ಕೃಷ್ಣಾಪುರದ ವಿಷ್ಣುಮೂರ್ತಿ, ತಿಮ್ಮಸಮುದ್ರದಲ್ಲಿನ ಮಲ್ಲಿಕಾರ್ಜುನಸ್ವಾಮಿ, ಗಾಡಿಗರೆಲು ಗ್ರಾಮದಲ್ಲಿನ ಸಿದ್ಧೇಶ್ವರ—ಭೋಜೇಶ್ವರ ದೇವಾಲಯಗಳು, ಉದಯಗಿರಿ ದುರ್ಗದಲ್ಲಿನ ಶ್ರೀ ರಘುನಾಯಕಸ್ವಾಮಿ ಇವೇ ಮುಂತಾದ ದೇಶದ ಅನೇಕಾನೇಕ ದೇವಸ್ಥಾನಗಳಲ್ಲಿ ನಿತ್ಯೋತ್ಸವ ಮಾಸೋತ್ಸವ ಸಂವತ್ಸರೋತ್ಸವಗಳು ಕ್ರಮವಾಗಿ ನಡೆಪಂತೆ ಶಾಶ್ವತ ದಾನಧರ್ಮಾದಿಗಳು ಮಾಡಲ್ಪಟ್ಟುವು. ಅಲ್ಲದೆ ಚನ್ನಪುರಿಯ (ಮದ್ರಾಸು) ಪಾರ್ಥಸಾರಥಿ ದೇವಾಲಯ, ಮನ್ನೂರಿನ ಚೆನ್ನಕೇಶವಸ್ವಾಮಿ ದೇವಾಲಯ, ವಿಜಯನಗರದಲ್ಲಿನ ಮಹಾದೇವಸ್ವಾಮಿಯ ದೇವಾಲಯ, ಗೋಪಾಲಕೃಷ್ಣದೇವಾಲಯ, ಮದನಗೋಪಾಲಸ್ವಾಮಿ ದೇವಾಲಯ ಮುಂತಾದ್ವಹಲವು ದೇವಾಲಯಗಳನ್ನು ಕಟ್ಟಿಸಿಯೂ, ಗೋಪುರ ಪ್ರಾಕಾರ ರಂಗಮಂಟಪಾದಿಗಳನ್ನು ರಚಿಸಿಯೂ,

ರಥಾದಿಗಳನ್ನು ಕಟ್ಟಿಸಿಯೂ ಸ್ವಾಮಿಯ ಸೇವೆಯು ಅಖಂಡವಾಗಿ ನಡೆಯುವುದಕ್ಕೆ ಯಾವ ನ್ಯೂನತೆಯೂ ಉಂಟಾಗದಂತೆ ಸಕಲ ಸನ್ನಾಹಗಳನ್ನೂ ಮಾಡಿಸಿಯೂ ಶ್ರೀ ರಾಮರಾಜಾದಿಗಳು ಹಿಂದೂ ಧರ್ಮದ ಪ್ರಾಮುಖ್ಯತೆಗೆ ಆಧಾರಸ್ತಂಭರಾಗಿದ್ದರು.

ದೇವಾಲಯಾದಿಗಳಿಗೆ ಕೊಟ್ಟ ಉತ್ತೇಜನ ಮಾತ್ರವಲ್ಲ. ಸದಾಶಿವರಾಯನ ಆಳಿಕೆಯಲ್ಲಿ ಬ್ರಾಹ್ಮಣರಿಗೂ, ಅನೇಕ ಮಾನ್ಯಗಳೂ, ಧನರೂಪವಾದ ದಾನಗಳೂ ಕೊಡಲ್ಪಟ್ಟುವು. ಸ್ವತಃ ರಾಜನೇ, ಅನೇಕ ಮಂದಿ ವಿದ್ವಾಂಸರೂ ಶ್ರೋತ್ರಿಯರೂ ತಪಸ್ವಿಗಳೂ ಆದ ಬ್ರಾಹ್ಮಣೋತ್ತಮರಿಗೆ ಗ್ರಾಮಗಳನ್ನೋ ಅಥವ ಭೂಸ್ವಾಸ್ಥ್ಯವನ್ನೋ, ಅಗ್ರಹಾರಾದಿಗಳನ್ನೋ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ ಕೊಟ್ಟದ್ದುಂಟು. ರಾಜನ ಈ ಉದಾಹರಣೆಯನ್ನು ಅನುಸರಿಸಿ, ಮುಖ್ಯ ಪ್ರಧಾನನಾಗಿದ್ದ ಶ್ರೀ ರಾಮರಾಜನೂ, ಆತನ ತಮ್ಮಂದಿರೂ ಇತರ ಹಲವುಮಂದಿ ಸರದಾರರೂ ಬ್ರಾಹ್ಮಣರನ್ನು ಅತ್ಯಂತ ಗೌರವ ಬುದ್ಧಿಯಿಂದ ಕಾಣುತ್ತ, ಸಾಧು ಪ್ರಕೃತಿಯ ಆ ವರ್ಗದವರು ತಮಗೆ ಕುಲಕ್ರಮಾಗತವಾಗಿ ನಡೆದುಬಂದ ವೇದಶಾಸ್ತ್ರಾಧ್ಯಯನ, ಧರ್ಮಬೋಧೆ ಮುಂತಾದುವುಗಳಲ್ಲೂ, ಜನಾಂಗದ ಹಿತಚಿಂತನೆಯಿಂದ ಪುರಾಣ ಪುಣ್ಯಕಥಾದಿಗಳನ್ನು ಹೇಳುವುದರಲ್ಲೂ ಕಾಲಯಾಪನೆ ಮಾಡಲು ಬೆಂಬಲದಾಯಕರಾಗಿದ್ದರು.

ಬ್ರಾಹ್ಮಣರಿಗೆ ಮಾನ್ಯಗಳನ್ನು ಕೊಟ್ಟುದು ಅತಿಶಯವಲ್ಲ. ಸದಾಶಿವರಾಯನ ಕಾಲದಲ್ಲಿ ಮತ್ತೊಂದು ವಿಶೇಷ ವಿಚಾರವು ನಡೆದದ್ದರ ಉಲ್ಲೇಖವಿದೆ. ಈ ರಾಜನ ಕಾಲದಲ್ಲಿ ಇತರ ಎಲ್ಲಾ ಜಾತಿಯವರಿಗಿಂತಲೂ, ಕ್ಷೌರಕರಿಗೆ ದಯಪಾಲಿಸಿದ ವಿಶೇಷ ಮಾನ್ಯಗಳೂ, ಕಂದಾಯ ಕೌಳಿಗೆಗಳನ್ನು ತೆರಬೇಕಾದುದಿಲ್ಲವೆಂದು ಬರೆಸಿಕೊಟ್ಟ ತಾಮ್ರದ ಶಾಸನಗಳೂ ಹೆಚ್ಚಾಗಿವೆ. ಶ್ರೀ ರಾಮರಾಜನಿಗೆ ಬಾದಾಮಿ ಗ್ರಾಮದ ಮಂಗಲ ತಿಮ್ಮೋಜಿ ಕೊಂಡೋಜಿ ಎಂಬೊಬ್ಬ ಕ್ಷೌರಕನ ಮೇಲೆ-ಅವನು ಗದ್ದವನ್ನು ಬೋಳಿಸುವಲ್ಲಿ ತೋರಿಸುತ್ತಿದ್ದ ಕರಚಮತ್ಕೃತಿಗಾಗಿ-ಅತಿಶಯ ಪ್ರೇಮವುಂಟಾಗಿ ಅವನನ್ನು ಸದಾಶಿವರಾಯನ ಸಮ್ಮುಖಕ್ಕೆ ಕರೆ

ದೊಯ್ದು ಅವನ ವಿಷಯದಲ್ಲಿ ಶಿಫಾರಸು ಮಾಡಿದನು. ಮಹಾರಾಜನ ಅನುಗ್ರಹದಿಂದ ಅವನು ಕೊಡಬೇಕಾದ ಕಂದಾಯ, ಸುಂಕ ಮುಂತಾದು ವುಗಳು ಮಾನ್ಯವಾಗಿ ಬಿಡಲ್ಪಟ್ಟುವು. ಮುಂದೆ ಕೆಲವು ಕಾಲದಲ್ಲೇ ಅವನ ಗ್ರಾಮದಲ್ಲಿದ್ದ ಕ್ಷೌರಕರೆಲ್ಲರಿಗೂ ಕಸುಬುಕಂದಾಯವು ವಜಾಮಾಡಲ್ಪ ಟ್ಟಿತು. ಅಷ್ಟುಮಾತ್ರವಲ್ಲ, ಅವನಿಗೆ ರಾಜನಲ್ಲೂ ರಾಜಪ್ರತಿನಿಧಿಯಲ್ಲೂ ಇದ್ದ ಸಲುಗೆಯ ಫಲವಾಗಿ, ರಾಜ್ಯದಲ್ಲಿದ್ದ ಕ್ಷೌರಕರೆಲ್ಲರೂ ತಮ್ಮ ಕುಲ ಕಸಬಿನ ಮೇಲೆ ಕಂದಾಯ ಕೊಡಬೇಕಾದುದಿಲ್ಲವೆಂದೂ ಒಂದು ಸ್ಥಳ ದಿಂದ ಮತ್ತೊಂದು ಸ್ಥಳಕ್ಕೆ ಹೋಗಬೇಕಾದಾಗ ಪದಾರ್ಥಗಳಮೇಲೆ ಸುಂಕ ವಗೈರೆಗಳನ್ನು ಸಹ ತರಬೇಕಾದುದಿಲ್ಲವೆಂದೂ ರಾಜಾಜ್ಞೆಯನ್ನು ಪಡೆದನು. ಮಹಾರಾಜನ ಈ ಕಾರ್ಯವು ಇತರ ಸಾಮಂತ ರಾಜರಿಂ ದಲೂ ಅನುಸರಿಸಲ್ಪಟ್ಟಿತು.

ಸದಾಶಿವರಾಯನ-ಅರ್ಥಾತ್ ರಾಮರಾಜನ ಆಳ್ವಿಕೆಯಲ್ಲಿ ಕೆರೆ ಕಟ್ಟೆ ಕಾಲುವೆಗಳು ವಿಶೇಷವಾಗಿ ತೋಡಿಸಲ್ಪಟ್ಟು ಭೂವ್ಯವಸಾಯಕ್ಕೆ ವಿಶೇಷ ಉತ್ತೇಜನವು ದೊರೆಯಿತು. ವಿಜಯನಗರದ ರಾಜಧಾನಿಯಲ್ಲಿ ಬಹು ವಿಸ್ತಾರವೂ ಭವ್ಯವೂ ಆದ ಅನೇಕ ಮನೆಗಳೂ, ರಾಮರಾಜನ ಮತ್ತು ಆತನ ತಮ್ಮಂದಿರ ಅರಮನೆಗಳೂ ಕಟ್ಟಲ್ಪಟ್ಟುವು. ಸಕಲ ವಿಧ ವಾದ ಕೈಗಾರಿಕೆಗಳಿಗೂ ಉತ್ತೇಜನ ದೊರೆತು, ಕೆಲಸಗಾರರು ತಮ್ಮ ಕೈಕಷ್ಟದಿಂದ ಪುಷ್ಟರಾಗಲು ಅವಕಾಶವೊದಗಿತು. ಅಂತರ್ದೇಶೀಯ ವ್ಯಾಪಾರಕ್ಕೆ ಯಾವ ಪ್ರತಿಬಂಧಕವೂ ಇಲ್ಲದಿರಲು ವಣಿಕವರ್ಗವು ತಮ್ಮ ಕಾರ್ಯವನ್ನು ಅವ್ಯಾಹತವಾಗಿ ಸಾಗಿಸುತ್ತ ಲಾಭ ಸಂಪಾದನೆಯಿಂದ ಐಶ್ವರ್ಯಸಂಪನ್ನರಾದರು. ಹೀಗೆ ರಾಜ್ಯವು-ಮುಖ್ಯವಾಗಿ ರಾಜಧಾನಿ ಯಾದ ವಿಜಯನಗರಿಯು-ಸರ್ವ ಸಂಪತ್ ಪರಿಪೂರ್ಣವಾಗಿ ಪೃಥ್ವಿ ಯಲ್ಲಿ ಇದಕ್ಕೆ ಸಮಾನವಾದುದು ಇಲ್ಲ, ಮತ್ತೊಂದಿಲ್ಲ; ಎಂದು ಪರ ದೇಶದವರೂ, ಖಂಡಾಂತರಗಳವರೂ ಮುಕ್ತಕಂಠದಿಂದ ಹೊಗಳು ವಂತೆ ಪ್ರಖ್ಯಾತವಾಯಿತು.



## ಅಧ್ಯಾಯ ೫. "ವಿಜಯನಗರವೂ-ಮಹಮ್ಮದೀಯ ಪ್ರಭುಗಳೂ"

ಸದಾಶಿವರಾಯನ ಕಾಲದಲ್ಲಿ ಎಂದರೆ ಶ್ರೀರಾಮರಾಜನ ಸರ್ವಾಧಿಪತಿತ್ವದಲ್ಲಿ ಕರ್ಣಾಟಕಕ್ಕೆ ಹೊರಗಿದ್ದ ಅನೇಕ ಸಂಸ್ಥಾನಗಳೂ, ಕರ್ಣಾಟಕ ಸೈನ್ಯದಿಂದ ಜಯಿಸಲ್ಪಟ್ಟು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸಲ್ಪಟ್ಟುವು. ಈಗಿನ ಮೈಸೂರುದೇಶ, ಆಗ ಪ್ರತ್ಯೇಕರಾಷ್ಟ್ರವಾಗಿ ಒಬ್ಬ ನಾಯಕನ ಪಾಲನೆಗೆ ಒಳಪಟ್ಟಿದ್ದ ಬಿದನೂರು, ಮಧುರೆ, ತಂಜಾವೂರು, ಟ್ರಾವನ್ಕೂರು ಪ್ರಾಂತ ಮುಂತಾದುವುಗಳು ಮಾತ್ರವಲ್ಲ ಸಿಲೋನ್ ಎಂಬ ಲಂಕಾದ್ವೀಪವೂ ಮಧುರೆಯಲ್ಲಿ ಸರ್ವಾಧಿಕಾರಿಯಾಗಿದ್ದ ಕೃಷ್ಣಪ್ಪನಾಯಕನಿಂದ ಜಯಿಸಲ್ಪಟ್ಟು, ಸಾಮ್ರಾಜ್ಯಕ್ಕೆ ಒಳಪಡಿಸಲ್ಪಟ್ಟುವು. ಉತ್ತರಕ್ಕೆ ಒರಿಸ್ಸಾ ದೇಶದವರೆಗೂ ವಿಜಯನಗರದವರ ಪ್ರಭುತ್ವವು ನಡೆಯುತ್ತಿದ್ದಿತು. ಹೀಗೆ ಆಸೇತು ಹಿಮಾಚಲವಾಗಿ- ಎಂದು ಅಲ್ಲದಿದ್ದರೂ ವಿಜಯನಗರದ ಪ್ರಭುಗಳು ಆಸೇತು ವಿಂಧ್ಯಾದ್ರಿಯವರೆಗೂ ಏಕಚ್ಛತ್ರಾಧಿಪತ್ಯಮಾಡಿ ಕರ್ಣಾಟಕದ ಕೀರ್ತಿಧ್ವಜವನ್ನು ಎತ್ತಿಹಿಡಿದಿದ್ದರು.

ಇದೇ ಕಾಲದಲ್ಲೇ ಪಶ್ಚಿಮ ಸಮುದ್ರ ಪ್ರಾಂತದಲ್ಲಿ ವ್ಯಾಪಾರಕ್ಕಾಗಿ, ಬಂದು ನೆಲೆಸಿದ್ದ ಪೋರ್ಚ್‌ಗೀಸ್ ಜನರೊಂದಿಗೆ ವಿಜಯನಗರಿಯವರಿಗೆ ಆಗಾಗ್ಗೆ ವಾಕ್ಯವ್ಯವಹಾರಗಳೂ, ಕೆಲಕೆಲವುವೇಳೆ ಸಣ್ಣಪುಟ್ಟ ಕದನಗಳೂ ನಡೆಯುತ್ತಿದ್ದುದುಂಟು. ಪೋರ್ಚುಗೀಸರು, ಕೇವಲ ವ್ಯಾಪಾರ ನಿಮಿತ್ತವಾಗಿ ಬಹುದೂರದಿಂದ ಈ ದೇಶಕ್ಕೆ ಬಂದವರಾಗಿ ಇಲ್ಲಿಯ ಒಂದು ಬಲಿಷ್ಟ ಪ್ರಭುತ್ವದೊಂದಿಗೆ ವಿರೋಧವನ್ನು ಬೆಳೆಸಲು ಇಷ್ಟಪಡದೆ, ಸದಾಶಿವರಾಯನ ಪ್ರಭುತ್ವವು ಪ್ರಾರಂಭವಾದ ತರುಣದಲ್ಲಿ ಒಂದು ಕರಾರನ್ನು ಮಾಡಿಕೊಂಡರು. ಈ ಕೆಳಗೆ ಹೇಳುವಂತೆ ಇದ್ದ ಆ ಕರಾರಿನ ನಿಬಂಧನೆಯಂತೆ ಉಭಯರೂ ಒಪ್ಪಿ ನಡೆಯಬೇಕೆಂದು ಗೊತ್ತಾಯಿತು.

(೧) ವಿಜಯನಗರದ ಅರಸರೂ, ಪೋರ್ಚುಗಲ್‌ದೇಶದ ರಾಜನೂ ಪರಸ್ಪರ ಉಭಯರ ಶತ್ರುಗಳಿಗೆ ಶತ್ರುಗಳೂ ಉಭಯರ ಮಿತ್ರರಿಗೆ

ಮಿತ್ರರೂ ಆಗಿದ್ದು, ಇಬ್ಬರಲ್ಲಿ ಯಾರಿಗಾದರೂ ಯುದ್ಧಕಾಲ ಒದಗಿದಾಗ ಇನ್ನೊಬ್ಬರು ಶತ್ರುಸೈನ್ಯದ ಮೇಲೆ ಯುದ್ಧಮಾಡಲು ತಮ್ಮ ಸಕಲ ಬಲದೊಂದಿಗೆ ಸಹಾಯಕರಾಗಿರತಕ್ಕದ್ದು.

(೨) ಗೋವಾ ಪಟ್ಟಣಕ್ಕೆ ಬಂದಿಳಿಯುವ ಪರ್ಷಿಯಾ ಅಥವಾ ಅರೇಬಿಯಾ ದೇಶದ ಕುದುರೆಗಳನ್ನು ಪೋರ್ಚುಗೀಸರು, ವಿಜಯನಗರಿಯ ಪ್ರಭುತ್ವಕ್ಕಲ್ಲದೆ, ಬಿಜಾಪುರಕ್ಕಾಗಲೀ ಮತ್ತಾವ ದೇಶೀಯರಿಗಾಗಲೀ ಮಾರಕೂಡದು. ವಿಜಯನಗರದವರೂ, ಹಾಗೆ ಆ ಬಂದರಿನಲ್ಲಿ ಬಂದಿಳಿಯುವ ಸಕಲ ಕುದುರೆಗಳನ್ನೂ ಶೀಘ್ರವಾಗಿ ಬೆಲೆ ಮಾಡಿ ಸ್ವಾಧೀನ ತೆಗೆದುಕೊಳ್ಳಲೂ ಬದ್ಧರಾಗಿರತಕ್ಕದ್ದು.

(೩) ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ವರ್ತಕರೆಲ್ಲರೂ ತಮ್ಮ ಸಕಲವಿಧ ಆಮದು ರಫ್ತು ವ್ಯಾಪಾರಗಳಿಗೂ ಪೋರ್ಚುಗೀಸರ ರೇವು ಪಟ್ಟಣಗಳಾದ ಹೊನ್ನಾವರ, ಬಸರೂರುಗಳಿಗೆ ಹೋಗಬೇಕಲ್ಲದೆ ಬಿಜಾಪುರದವರ ರೇವುಪಟ್ಟಣಗಳಿಗೆ ಹೋಗದಂತೆ ವಿಜಯನಗರದ ಪ್ರಭುತ್ವದವರು ತಮ್ಮ ವರ್ತಕರೆಲ್ಲರಿಗೂ ಆಜ್ಞಾಪಿಸತಕ್ಕದ್ದು.

(೪) ವಿಜಯನಗರ ರಾಜ್ಯದಲ್ಲಿ ಸಿದ್ಧವಾಗುವ ಬಟ್ಟೆಗಳನ್ನೆಲ್ಲವನ್ನೂ ಪರದೇಶಕ್ಕೆ ರಫ್ತು ಮಾಡುವುದಕ್ಕಾಗಿ ಮೇಲ್ಕಂಡ ಪೋರ್ಚುಗೀಸರ ರೇವು ಪಟ್ಟಣಗಳಿಗೇ ತರಬೇಕು. ಪೋರ್ಚುಗೀಸು ವರ್ತಕರು ಅವುಗಳನ್ನೆಲ್ಲಾ ಕೊಂಡುಕೊಳ್ಳಲೂ, ಅವುಗಳಿಗೆ ಪ್ರತಿಯಾಗಿ, ಕಬ್ಬಿಣ, ತಾಮ್ರ, ಪಾದರಸ, ಚೈನಾಂಬರ (ರೇಷ್ಮೆವಸ್ತ್ರಗಳು) ಮುಂತಾದ ಪರದೇಶದ ಪದಾರ್ಥಗಳನ್ನು ಅವರಿಗೆ ಮಾರಲೂ ಬದ್ಧರಾಗಿರತಕ್ಕದ್ದು.

(೫) ವಿಜಯನಗರ ಸಾಮ್ರಾಜ್ಯಕ್ಕೆ ವಶಿತವಾದ ಸಮುದ್ರದಂಡೆಗೆ ಯಾವ ಮಹಮ್ಮದೀಯ ಹಡಗೂ ಬಂದಿಳಿಯದಂತೆಯೂ, ಹಾಗೊಂದುವೇಳೆ ಬಂದದ್ದಾದರೆ ಅಂತಹ ಹಡಗನ್ನು ತಪ್ಪದೆ ಹಿಡಿಸಿ ಗೋವಾದ ಪೋರ್ಚುಗೀಸ್ ಅಧಿಕಾರಿಗೆ ಒಪ್ಪಿಸುವಂತೆಯೂ, ವಿಜಯನಗರದ ಪ್ರಭುತ್ವದವರು ಒಪ್ಪಬೇಕು.

(೬) ಉಭಯರೂ ಸೇರಿ ಬಿಜಾಪುರದ ಆದಿಲ್‌ಷಹಾನ ಮೇಲೆ ಯುದ್ಧಮಾಡಬೇಕು. ಯುದ್ಧ ಫಲವಾಗಿ ದೊರೆವರಾಜ್ಯವು ವಿಜಯ

ನಗರದ ಸಾಮ್ರಾಜ್ಯಕ್ಕೂ, ಪಶ್ಚಿಮಘಟ್ಟದ ಪಶ್ಚಿಮಕ್ಕಿರುವ ಸಮುದ್ರ ತೀರ ಪ್ರದೇಶವು ಎಂದಿನಂತೆ ಪೋರ್ಚುಗೀಸರಿಗೂ ಸೇರಿರತಕ್ಕದ್ದು.

ಹೀಗೆ ವಿಜಯನಗರ ಸಾಮ್ರಾಜ್ಯಕ್ಕೂ ಪೋರ್ಚುಗೀಸ್ ಸರ್ವಾಧಿಪತಿಗೂ ಒಪ್ಪಂದವಾಗಿದ್ದಿತು. ಆದರೂ ಪೂರ್ವತೀರದ ಚೆನ್ನಪುರಿ (ಮದ್ರಾಸು) ಸಮೀಪದಲ್ಲಿ ಮೈಲಾಪುರದ ಬಳಿ ಸೆಂಟ್‌ಥೋಂ ಎಂಬ ಕೋಟೆಯಲ್ಲಿ ತಂಗಿ, ಸುತ್ತುಮುತ್ತಲಿನ ಪ್ರದೇಶಗಳಲ್ಲಿ ವ್ಯಾಪಾರ ಮಾಡಿಕೊಂಡಿದ್ದ ಕೆಲ ಪೋರ್ಚುಗೀಸ್ ಜನರು ಸುಮಾರು ಮೂರು ಸಾವಿರ ಮಂದಿ ಹಿಂದೂಗಳನ್ನು ಕ್ರೈಸ್ತಮತಕ್ಕೆ ಸೇರಿಸಿಕೊಂಡರೆಂದೂ, ಹಿಂದೂ ದೇವಾಲಯಾದಿಗಳನ್ನು ಒಡೆಸಿ, ಆ ಸ್ಥಳದಲ್ಲಿ ಚರ್ಚುಗಳನ್ನು ಕಟ್ಟಿಕೊಂಡರೆಂದೂ ಕೇಳಿ ರಾಮರಾಜನು ಕೋಪಗೊಂಡು ಅವರನ್ನು ಶಿಕ್ಷಿಸಲೆಳಸಿ, ಸ೯ ೧೫೫೮ನೆಯ ಸ॥ದಲ್ಲಿ ಅವರಮೇಲೆ ಯುದ್ಧಕ್ಕೆ ದಂಡೆತ್ತಿದನು. ಆದರೆ ಆ ಸ್ಥಳವನ್ನು ಸಮೀಪಿಸುವುದರೊಳಗಾಗಿಯೇ ಅಲ್ಲಿಯ ನಿವಾಸಿಗಳು ಜಾಗ್ರತರಾಗಿ, ಹಣ ಹೊನ್ನುಗಳನ್ನು ಕಾಣಿಕೆಯಾಗಿ ತಂದಿತ್ತು ಗೌರವಿಸಿ ಮೊರೆಹೊಗಲು, ದಯಾಳುವಾದ ಆತನು ಅವರಿಗೇ ಲೂಟಿಮಾಡಿಸಿದ್ದ ಪದಾರ್ಥಗಳಲ್ಲಿ ಒಂದೂ ಪೋಲಾಗದಂತೆ ಅವರವರ ಪದಾರ್ಥಗಳನ್ನು ಅವರವರಿಗೇ ಕೊಡಿಸಿ, ಇನ್ನು ಮುಂದೆ ಯಾವ ಬಗೆಯ ಚೇಷ್ಟೆಗೂ ಅವಕಾಶ ಕೊಡದಂತೆ ಎಚ್ಚರವಾಗಿರಬೇಕೆಂದು ಅವರಿಗೆ ಕಟ್ಟಪ್ಪಣೆ ಮಾಡಿ, ಒಂದು ಲಕ್ಷ ಮೊಹರಿಗಳನ್ನು ದಂಡವಾಗಿ ಪಡೆದು, ರಾಜಧಾನಿಯ ಕಡೆಗೆ ತಿರುಗಿದನು.

ವಿಜಯನಗರ ರಾಜ್ಯವು ವಿಸ್ತಾರವೂ ವೈಭವಪೂರ್ಣವೂ ಆಗಿದ್ದಿತಾದರೂ, ಶತ್ರುನಿರ್ಮುಕ್ತವಾಗಿರಲಿಲ್ಲ. ಆ ರಾಜ್ಯಕ್ಕೆ ಉತ್ತರಭಾಗದಲ್ಲಿದ್ದ ನಾಲ್ಕು ಮಹಮ್ಮದೀಯ ರಾಜ್ಯಗಳು, ಒಂದಲ್ಲದಿದ್ದರೊಂದು ವೇಳೆ ವಿಜಯನಗರದ ಪ್ರಭುತ್ವಕ್ಕೆ ಬದ್ಧದ್ವೇಷದಿಂದ ಇರುತ್ತಿದ್ದುದರಿಂದ ಅವುಗಳೊಂದಿಗೆ ಯುದ್ಧವು ಎಂದೂ ತಪ್ಪಿದ್ದುದಿಲ್ಲ. ಇವುಗಳಲ್ಲಿ ಆದಿಲ್‌ಶಾಹೀ ಎಂಬ ಬಿಜಾಪುರ ರಾಜ್ಯವೊಂದು; ಇದನ್ನು ಇಬ್ರಾಹಿಂ ಆದಿಲ್‌ಷಹಾ ಎಂಬಾತನು ಆಳುತ್ತಿದ್ದನು. ಎರಡನೆಯದು ನಿಜಾಂಷಾಹೀ ಎಂಬ ಅಹಮದ್ ನಗರರಾಜ್ಯ; ಇದನ್ನು ಆಗ ಬರ್ಹಾನ್

ನಿಜಾಂಷಹ ಎಂಬಾತನು ಪಾಲಿಸುತ್ತಿದ್ದನು. ಮೂರನೆಯದು ಕುತುಬ್ ಷಾಹೀ ಎಂಬ ಗೋಲ್ಕೊಂಡ ರಾಜ್ಯ; ಇದನ್ನು ಜಮ್‌ಷೀದ್ ಕುತುಬ್ ಷಹಾ ಎಂಬಾತನು ಪಾಲಿಸುತ್ತಿದ್ದನು. ನಾಲ್ಕನೆಯದು; ಬರೀದ್ ಷಾಹೀ ಎಂಬ ಹೆಸರಿನ ಬೀದರ್‌ರಾಜ್ಯ. ಇದನ್ನು ಅಲೀ ಬೇರೀದ್ ಎಂಬಾತನು ಪಾಲಿಸುತ್ತಿದ್ದನು. ಮಹಾ ರಾಜತಂತ್ರಜ್ಞನಾದ ರಾಮರಾಜನು, ಈ ಕಾಲದಲ್ಲಿ ಬ್ರಿಟಿಷ್ ಸಾಮ್ರಾಜ್ಯದವರಲ್ಲಿ ವಿಶೇಷ ರೀತಿಯಿಂದ ಅನುಸರಿಸಲ್ಪಡುತ್ತಿರುವ ಭೇದತಂತ್ರದಲ್ಲಿ ಸಂಪೂರ್ಣ ಪಂಡಿತನಾಗಿದ್ದುದರಿಂದ ಅವರವರಲ್ಲಿ ಯಾವಾಗಲೂ ಭೇದವನ್ನಿಟ್ಟು ನಾಲ್ವರಲ್ಲಿ ಯಾವನಾದರೊಬ್ಬನೊಂದಿಗೆ ಸ್ನೇಹಿಸಿ, ಮತ್ತೊಬ್ಬನನ್ನು ಸೋಲಿಸಿ, ಹೀಗೆ ಸಮಯಾಸಮಯಗಳನ್ನು ಹೊಂಚಿ ನಾಲ್ವರನ್ನೂ ಸದೆಬಡಿದು, ಸರ್ವದಾ ಅವರ ಕಾಣಿಕೆ ಜಯಶಾಲಿಯಾಗಿಯೇ ರಾಜಧಾನಿಗೆ ಹಿಂದಿರುಗುತ್ತಿದ್ದನು.

ಸದಾಶಿವರಾಯನ ಆಳ್ವಿಕೆಯು ವಿಜಯನಗರದ ಸಾಮ್ರಾಜ್ಯದ ಆಳಿಗಾಲದ ಸೂಚನೆಯೆಂದು ಮುನ್ನುಡಿಯಲ್ಲಿ ಹೇಳಿರುವ ಮಾತು ಅಕ್ಷರಶಃ ನಿಜವಾದುದು. ಏಕೆಂದರೆ, ಮಹಮದೀಯ ರಾಜರಿಗೂ ವಿಜಯನಗರದವರಿಗೂ ವೈರವು ಸದಾಶಿವರಾಯನ ಪಟ್ಟಾಭಿಷೇಕದ ದಿನವೇ ಆರಂಭಿಸಿತು. ತನ್ನ ಸಹಾಯದಿಂದ ಸಾಮ್ರಾಜ್ಯ ಸಿಂಹಾಸನವನ್ನು ಆಕ್ರಮಿಸಿದ್ದ ಸಲಕಮು ತಿಮ್ಮಯ್ಯನಿಗೆ ವಿರುದ್ಧವಾಗಿ ರಾಮರಾಜನೇ ಮುಂತಾದವರು ತುಳುವವಂಶದ ರಾಜಪುತ್ರನನ್ನು ಸಿಂಹಾಸನದ ಮೇಲೆ ಕೂರಿಸಿದರೆಂದು ತಿಳಿದೊಡನೆಯೇ ಬಿಜಾಪುರದ ಆದಿಲ್ ಷಹಾನು ಅಸಾದ್‌ಖಾನ್ ಎಂಬುವನ ವಶದಲ್ಲಿ ಸೈನ್ಯವನ್ನು ಕಳುಹಿಸಿ ಆದವಾನಿಯ ಕೋಟೆಯನ್ನು ಆಕ್ರಮಿಸಿದನು. ಈ ವಾರ್ತೆಯು ವಿಜಯನಗರಕ್ಕೆ ತಿಳಿದೊಡನೆಯೇ ರಾಮರಾಜನ ಆಜ್ಞೆಯ ಮೇರೆಗೆ ವೆಂಕಟಾದ್ರಿಯು ಸೈನ್ಯಸಮೇತನಾಗಿ ಹೊರಟು ಅವನ ಸೇನೆಗೆ ಇಪ್ಪತ್ತೈದು ಮೈಲಿ ದೂರದಲ್ಲಿ ಬೀಡುಬಿಟ್ಟನು. ವಿಜಯನಗರದ ಸೇನೆಯು ಸಾತ್ವಿಕವಾದುದೇ ಆಗಿದ್ದರೂ ತುರುಷ್ಕಸೇನೆಯು ಮಾರನೆಯ ಪ್ರಾತಃಕಾಲ ಸೂರ್ಯೋದಯಕ್ಕೆ ಮುಂಚೆಯೇ ಅಕಸ್ಮಾತ್ತಾಗಿ ಬಂದು ಮೇಲೆ ಬಿದ್ದುದರಿಂದ ಆ ಬಾರಿ ವೆಂಕಟಾದ್ರಿಯು ಸೋತುದು ಮಾತ್ರ

ವಲ್ಲದೆ, ತನ್ನ ಕುಟುಂಬದವರನ್ನೂ, ಸಮಸ್ತ ಸಾಮಗ್ರಿಗಳನ್ನೂ ಶತ್ರುಸೈನ್ಯದ ಕೊಳ್ಳೆಗೆ ವಹಿಸಿಕೊಟ್ಟು ಪ್ರಾಣರಕ್ಷಣೆಗಾಗಿ ಓಡಿಹೋಗ ಬೇಕಾಯಿತು ಕೊನೆಗೆ, ತನ್ನ ಸಂಸಾರದವರು ಅವರಲ್ಲಿ ಸೆರೆ ಸಿಕ್ಕಿರು ವಾಗ, ಯುದ್ಧ ಮಾಡುವಿಕೆಯ ಅನೌಚಿತ್ಯವನ್ನು ಯೋಚಿಸಿ, ಸಂಧಿ ಮಾಡಿಕೊಂಡು ಹೆಂಡಿರುಮಕ್ಕಳೊಂದಿಗೆ ಹಿಂದಿರುಗಿದನು.

ಇದಾದ ತರುವಾಯ ಆದಿಲ್‌ಷಹಾನು ತಾನು ಮಾಡಿಕೊಂಡಿದ್ದ ಸಂಧಿಗೆ ವಿರೋಧವಾಗಿ ಅಹಮದ್‌ನಗರದ ಬರ್ಹಾನ್ ನಿಜಾಂಷಹ ನೊಂದಿಗೆ ಸ್ನೇಹಮಾಡಿ ಪುನಃ ಬೀದರ್ ಮತ್ತು ವಿಜಯನಗರ ಸಂಸ್ಥಾನಗಳ ಮೇಲೆ ಯುದ್ಧಕ್ಕೆ ಸಿದ್ಧನಾದನು. ಈ ಸಂಗತಿಯು ತಿಳಿ ದೊಡನೆಯೇ ರಾಮರಾಜನು ಕೋಪೋದ್ರೇಪಿತನಾಗಿ ತನ್ನ ತಮ್ಮ ವೆಂಕಟಾದ್ರಿರಾಜ ಮತ್ತು ತಿರುಮಲರಾಜರೊಂದಿಗೆ ಅಗಾಧ ಸೇನಾ ಸಮೇತನಾಗಿ ಹೊರಟು, ಬರ್ಹಾನ್ ನಿಜಾಂಷಹನ ಅಹಮದ್‌ನಗರದ ಮೇಲೆ ದಂಡೆತ್ತಿದನು. ಅಹಮದ್‌ನಗರವನ್ನು ಸೇರುವುದಕ್ಕೆ ಗೋ ಲ್ಕೊಂಡ ಮತ್ತು ಬೀದರ್ ರಾಜ್ಯಗಳನ್ನು ದಾಟಿಯೇ ಹೋಗಬೇಕಾಗಿ ದ್ದುದರಿಂದ, ತನ್ನ ಪೂರ್ತಿಸೈನ್ಯವನ್ನೂ ಮೂರುಭಾಗಮಾಡಿ, ಸ್ವತಃ ತಾನೇ ಗೋಲ್ಕೊಂಡರಾಜ್ಯದಮೇಲೆ ಸಾಗಿದನು ವೆಂಕಟಾದ್ರಿಯು ಬೀದ ರ್ ರಾಜ್ಯದ ಮೇಲೂ, ಹಂಡೆ ಹನುಮಪ್ಪನಾಯಿಡು ಎಂಬ ಶೂರಸೇನಾ ಪತಿಯು ಅಹಮದ್‌ನಗರದಮೇಲೂ ಏರಿಹೋದರು. ಒಂದೊಂದು ಸ್ಥಳ ದಲ್ಲೂ ಹಿಂದೂಸೈನ್ಯಕ್ಕೇ ಸಂಪೂರ್ಣ ಜಯವಾಯಿತು. ರಾಮರಾಜನ ಸೈನ್ಯವು ಪುನಃ ಅಹಮದ್‌ನಗರಕ್ಕೆ ನಡೆದು, ಆ ರಾಜಧಾನಿಯ ಕೋಟೆ ಯನ್ನೂ ರಾಜನ ಅರಮನೆಯನ್ನೂ ಕೆಡಹಿಸಿ ನೆಲಸಮಮಾಡಿ ಅಲ್ಲಿ ಹರಳು ಬಿತ್ತಿಸಿ ಹಿಂದಿರುಗಿತು. ಮುಂದೆ ನಿಜಾಂಷಹಾನು, ರಾಮರಾಜನ ಕ್ಷಮಾಪಣೆ ಕೇಳಿಕೊಂಡು ಬಿಜಾಪುರದೊಂದಿಗೆ ಮಾಡಿದ್ದ ಸ್ನೇಹವನ್ನೂ ಕರಾರನ್ನೂ ರದ್ದುಪಡಿಸಿದನು. ತರುವಾಯ ರಾಮರಾಜನು, ಗೋ ಲ್ಕೊಂಡದ ಸುಲ್ತಾನ ಮತ್ತು ಅಹಮದ್‌ನಗರದ ನಿಜಾಂಷಾಹಿ ಇವರ ಸಹಾಯವನ್ನು ತೆಗೆದುಕೊಂಡು ಬಿಜಾಪುರದ ಆದಿಲ್‌ಷಹಾನನ್ನು ಹಣ್ಣಿಗೆ ತರಬೇಕೆಂದು ಪ್ರಯತ್ನಿಸಿದನು. ಮೂರು ಸೈನ್ಯಗಳೂ ಬಿಜಾ

ಪುರದಮೇಲೆ ದಂಡೆತ್ತಬೇಕೆಂದು ಏರ್ಪಾಡಾಯಿತು. ರಾಮರಾಜನ ಸೈನ್ಯವು ದಕ್ಷಿಣಭಾಗದಿಂದ ಬಿಜಾಪುರ ಪ್ರಾಂತವನ್ನು ಆಕ್ರಮಿಸಿತು. ಗೋಲ್ಕೊಂಡದ ಸುಲ್ತಾನನು ಪೂರ್ವದಿಕ್ಕಿನಿಂದಲೂ, ನಿಜಾಂಷಹಾನು ಈಶಾನ್ಯ ಮೂಲೆಯಿಂದಲೂ ಬಂದು ಆಕ್ರಮಿಸಿದರು. ಹೀಗೆ ತನ್ನ ರಾಜ್ಯಕ್ಕೆ ಮೂರು ಕಡೆಯಿಂದಲೂ ಬಂದೊದಗಿದ ವಿಪತ್ತಿಗಾಗಿ ಭಯ ಪಟ್ಟು ಅವನು, ಒಬ್ಬೊಬ್ಬರೊಂದಿಗೂ ಅಪಾರ ಹಣ ಹೊನ್ನುಗಳನ್ನೂ ತನ್ನ ರಾಜ್ಯದ ಭೂಭಾಗಗಳನ್ನೂ ವಹಿಸಿಕೊಟ್ಟು ಸಂಧಿಮಾಡಿಕೊಂಡನು. ಈ ಸಂಧಿಯೇನೋ ಆಯಿತಾದರೂ, ಪುನಃ ರಾಮರಾಜನು ಅವರವರಲ್ಲೇ ಯುದ್ಧಕಾರಣಗಳನ್ನು ಕಲ್ಪಿಸಿ ಮಹಮ್ಮದೀಯ ಸುಲ್ತಾನರ ಬಲವನ್ನು ಕ್ಷೀಣಿಸಲು ಪ್ರಯತ್ನಿಸುತ್ತಿದ್ದನು.

ಮಹಮ್ಮದೀಯ ಸೈನ್ಯಗಳೊಂದಿಗೆ ಹೋರಾಡುತ್ತಿದ್ದನಾದರೂ, ರಾಮರಾಜನು ಮಹಮ್ಮದೀಯರನ್ನು ವ್ಯಕ್ತಿಶಃ ದ್ವೇಷಿಸುತ್ತಿದ್ದನೆಂದು ಎಣಿಸಲಾಗದು. ಇದನ್ನು ಪ್ರದರ್ಶಿಸಲು ಒಂದು ಸಂಗತಿ ನಡೆಯಿತು. ಸುಮಾರು ೧೫೫೦ನೆಯ ಸಂ॥ ದ ಸುಮಾರಿನಲ್ಲಿ, ಗೋಲ್ಕೊಂಡ ರಾಜ್ಯದ ಜಮ್ಷಾದ್ ಕುತುಬ್‌ಷಹಾ ಎಂಬುವನು ದೇಹಾರೋಗ್ಯ ತಪ್ಪಿ, ಮನ ಶ್ಶಾಂತಿಯಿಲ್ಲದೆ, ಅಲ್ಪಸ್ವಲ್ಪ ತಪ್ಪುಗಳಿಗಾಗಿಯೂ ತನ್ನ ಪ್ರಜೆಗಳನ್ನು ಬಹು ಕ್ರೂರರೀತಿಯಿಂದ ಹಿಂಸಿಸಲಾರಂಭಿಸಿದನು. ಈ ಸ್ಥಿತಿಯನ್ನು ಕಂಡು ಬೆದರಿದ ಅವನ ತಮ್ಮಂದಿರು ಹೈದರ್‌ಖಾನ್ ಮತ್ತು ಇಬ್ರಾಹಿಂ ಎಂಬುವರು, ದೇಶದಿಂದ ಹೊರಹೊರಟು ಹೈದರನು ಮುಂದೆ ಕೆಲ ದಿನಗಳಲ್ಲೇ ಮರಣಹೊಂದಲು ಇಬ್ರಾಹಿಮನು ನಿರಾಶ್ರಿತನಾಗಿ ಪ್ರಾಣಭಯದಿಂದ ವಿಜಯನಗರಕ್ಕೆ ಓಡಿ ರಾಮರಾಜನಿಗೆ ಶರಣು ಬಿದ್ದನು. ರಾಮರಾಜನು, ರಾಜಪುತ್ರನಾದ ಅವನ ಗೌರವಕ್ಕೆ ತಕ್ಕಂತೆ ಆದರಿಸಿ, ಅವನ ವಾಸಕ್ಕಾಗಿ ಅರಮನೆಯೊಂದನ್ನು ಬಿಡಿಸಿ ಕೊಟ್ಟು ಅವನು ವಾಸಿಸಿದ್ದ ಆ ಭಾಗದಲ್ಲೇ ಅದನ್ನು ಆ ನಗರದಲ್ಲಿದ್ದ ಮಹಮ್ಮದೀಯರಿಗೆಲ್ಲ ವಾಸಿಸಲು ಅನುಕೂಲತೆಗಳನ್ನು ಕಲ್ಪಿಸಿಕೊಟ್ಟು 'ತುರಕೀ ಮೊಹಲ್ಲಾ' ಎಂಬ ಹೆಸರಿನಿಂದ ಕರೆಯುತ್ತಿದ್ದನು. ಅವರಿ

ಗಾಗಿ ಒಂದು ಮಸೀದಿಯನ್ನೂ ಕಟ್ಟಿಸಿಕೊಟ್ಟು, ಅವರನ್ನೂ ತನ್ನ ಹಿಂದೂ ಪ್ರಜೆಗಳಂತೆಯೇ ಪ್ರೀತಿವಿಶ್ವಾಸಗಳಿಂದ ನೋಡಿಕೊಳ್ಳುತ್ತಿದ್ದನು.

ಮುಂದೆ ಎರಡು ವರುಷಗಳ ತರುವಾಯ ಗೋಲ್ಕೊಂಡದ ಸುಲ್ತಾನನು ಮೃತನಾಗಲು, ಅವನ ಚಿಕ್ಕವಯಸ್ಸಿನ ಮಗನಿಗೆ ರಾಜ್ಯವನ್ನು ವಹಿಸಬೇಕೆಂದು ಅಲ್ಲಿ ಪ್ರಯತ್ನ ನಡೆಯುತ್ತಿತ್ತು. ಆದರೆ ಆ ಸಂಧಿಯನ್ನು ಸಾಧಿಸಿ ಕುಳಿತಿದ್ದ ಇಬ್ರಾಹಿಮನು ಆಗ ತನ್ನ ಮಿತ್ರನಾದ ರಾಮರಾಯನ ಸಲಹೆಯನ್ನನುಸರಿಸಿ, ವಿಜಯನಗರದ ಅಪಾರಸೈನ್ಯ ಸಹಾಯದಿಂದ ತನ್ನ ರಾಜ್ಯಕ್ಕೆ ನಡೆದು ಅದನ್ನು ಸ್ವಾಧೀನಪಡಿಸಿಕೊಂಡು ಸುಲ್ತಾನನಾದನು.

ಹೀಗಿರುವಲ್ಲಿ ೧೫೫೭ ನೆಯ ಸಂ॥ ದಲ್ಲಿ ಬಿಜಾಪುರದ ಇಬ್ರಾಹಿಂ ಆದಿಲ್‌ಷಹಾನು ಮೃತನಾಗಿ ಅವನ ಮಗ ಅಲ್ಲಿ ಅದಿಲ್‌ಷಹನು ರಾಜ್ಯಕ್ಕೆ ಹಕ್ಕುದಾರನಾದನು. ಅಲ್ಲಿ ಅದಿಲ್‌ಷಹನು, ಇನ್ನೂ ೧೬—೧೮ ವರ್ಷಗಳ ಯುವಕನಾಗಿದ್ದು--ಸ್ವಾಭಾವಿಕವಾಗಿಯೇ ರಾಜ್ಯಭಾರವನ್ನು ವಹಿಸಲು ದುರ್ಬಲನಾಗಿದ್ದುದರಿಂದ ಆ ಸಮಯವನ್ನು ಸಾಧಿಸಿ, ಬಿಜಾಪುರರಾಜ್ಯವನ್ನು ನುಂಗಬಹುದೆಂದು ಅಹಮುದ್‌ನಗರದ ಹುಸೇನ್ ನಿಜಾಂಷಹಾನು ಸೈನ್ಯ ಸಮೇತನಾಗಿ ಪುನಃ ಆ ರಾಜ್ಯದಮೇಲೆ ಸಾಗಿದನು. ಈ ಸಂಗತಿಯು ತಿಳಿದೊಡನೆಯೇ, ಅಲ್ಲಿ ಆದಿಲ್‌ಷಹಾನು, ದಿಕ್ಕು ತೋರದಂತಾಗಿ ಮುಂದೇನು ಮಾಡಬೇಕೆಂದು ಚಿಂತಿಸತೊಡಗಿದನು. ಅದೇಕಾಲದಲ್ಲೇ ರಾಮರಾಜನ ಚಿಕ್ಕವಯಸ್ಸಿನ ಮಗನೊಬ್ಬನು ಕಾಲಧರ್ಮವನ್ನು ಹೊಂದುವುದೂ ಸಂಭವಿಸಿತು. ಆ ಸಂಧಿಯನ್ನು ಸಾಧಿಸಿ, ತಾನು ಮುಖತಃ ನಡೆದು, ವ್ಯಸನವನ್ನು ಸೂಚಿಸಿ ಸಮಾಧಾನ ಮಾಡುವುದರಿಂದ ಆತನ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿ, ಸೈನ್ಯಸಹಾಯವನ್ನು ಪಡೆದು ತನ್ಮೂಲಕ ಮೇಲೇರಿ ಬರುತ್ತಿರುವ ಅಹಮುದ್‌ನಗರದ ಸೈನ್ಯವನ್ನು ಎದುರಿಸಬಹುದೆಂದು ನಿಶ್ಚಯಿಸಿದನು. ಅಂತೆಯೇ ನೂರು ಮಂದಿ ಅಂಗರಕ್ಷಕರನ್ನು ಮಾತ್ರ ಕರೆದುಕೊಂಡು, ವಿಜಯನಗರವನ್ನು ಸೇರಿ, ತನ್ನ ಬರುವಿಕೆಯನ್ನು ಹೇಳಿಕಳುಹಿಸಿದನು. ರಾಮರಾಜನು, ಅಕಸ್ಮಾತ್ತಾಗಿ ತನ್ನ ಮನೆಯ ಬಾಗಿಲಿಗೆ ಬಂದ ಶತ್ರು

ರಾಜಕುಮಾರನನ್ನು ಯೋಗ್ಯಗೌರವದಿಂದ ಎದುರುಗೊಂಡು, ಹಲವು ಬಗೆಯಿಂದ ಉಪಚರಿಸಿದನು. ಆ ಸುಲ್ತಾನಪುತ್ರನೂ, ರಾಜನ ಪುತ್ರ ಶೋಕದಲ್ಲಿ ಸಹಾನುಭೂತಿಯನ್ನು ತೋರಿಸಿದ್ದಲ್ಲದೆ ಪಿತೃವಿಹೀನನಾದ ತನ್ನ ದುರವಸ್ಥೆಯನ್ನೂ, ರಾಜ್ಯಕ್ಕೊದಗಿರುವ ವಿಪತ್ತನ್ನೂ ವಿಜ್ಞಾಪಿಸಿ ಕೊಂಡನು. ಅದನ್ನು ಕೇಳಿ ಮರುಗಿದ ರಾಮರಾಜನ ರಾಣಿಯು, ಅವ ನನ್ನು ತನ್ನ ಮಗನಂತೆ ನೋಡಿಕೊಳ್ಳುವುದಾಗಿ ನಿಶ್ಚಯಿಸಿದಳು. ಮಾತ್ರ ವಲ್ಲ ಅವನು ತನ್ನ ದತ್ತುಪುತ್ರನೆಂದೇ ಭಾವಿಸಿದಳು. ರಾಮರಾಜನೂ ಪ್ರೇಮಾಧಿಕ್ಯದಿಂದ, ವಿಜಯನಗರದ ಸಂಪೂರ್ಣ ಸೈನ್ಯವನ್ನೂ ಅವನ ಬೆಂಬಲಕ್ಕಾಗಿ ಕಳುಹಿಸಿದನು. ಅಹಮ್ಮದ್‌ನಗರದ ಸೈನ್ಯವು ಸೋಲಿ ಸಲ್ಪಟ್ಟಿತು. ಹೀಗಾಗಿ ಬಿಜಾಪುರವು ರಾಮರಾಜನ ದಾಕ್ಷಿಣ್ಯಕ್ಕೂ ಪೋಷಣೆಗೂ ಒಳಪಟ್ಟಂತಾಯಿತು.

ತರುವಾಯ ಅವರೆಗೇ ವಶಪಡಿಸಿಕೊಂಡಿದ್ದ ತನ್ನ ರಾಜ್ಯಕ್ಕೆ ಸೇ ರಿದ್ದ ಕಲ್ಯಾಣದುರ್ಗ--ಷೋಲಾಪುರ ಈ ಎರಡು ಪಟ್ಟಣಗಳನ್ನು ತನಗೆ ಹಿಂದಿರುಗಿ ಕೊಡಬೇಕೆಂದು ಅಲ್ಲಿ ಆದಿಲ್‌ಷಹಾನು ಅಹಮದ್ ನಗರದ ಸುಲ್ತಾನನ ಬಳಿಗೆ ರಾಯಭಾರಿಯನ್ನು ಕಳುಹಿಸಿದನು. ನಿಜಾಂಷ ಹಾನು ಅವನನ್ನು ಅಗೌರವ ಪಡಿಸಿದುದು ಮಾತ್ರವಲ್ಲ—ಬಹು ಅಶ್ಲೀಲ ವಾದ ಮಾತುಗಳಿಂದ ಪ್ರತ್ಯುತ್ತರವನ್ನು ಕಳುಹಿಸಿದನು. ಅದನ್ನು ಕೇಳಿದೊಡನೆಯೇ, ಬಿಜಾಪುರದ ಯುವಕ ಸುಲ್ತಾನನ ದೇಹದ ರಕ್ತ ವೆಲ್ಲಾ ಕುದಿದುಹೋಯಿತು. ಒಡನೆ ರಾಮರಾಜನಿಗೆ ಆ ಸಮಾಚಾರ ವನ್ನು ತಿಳುಹಿಸಿದನು. ರಾಮರಾಜನಿಂದ ಅಪಾರ ಸೈನ್ಯಸಹಾಯವೂ ಬಂದೊದಗಿತು. ಕೂಡಲೇ ವಿಜಯನಗರ ಬಿಜಾಪುರದ ಸೈನ್ಯಗಳೆರಡೂ ಹೊರಟು, ಅಹಮದ್ ನಗರದಿಂದ ದೌಲತ್ತಾಬಾದುವರೆಗೂ ಪೊಂಡೆ ಯಿಂದ ಬೀದರ್‌ವರೆಗೂ ಮಧ್ಯದಲ್ಲಿ ಒಂದು ಗ್ರಾಮವಾದರೂ ಉಳಿಯ ದಂತೆ ನಾಶಗೊಳಿಸಿದರು. ಈ ಯುದ್ಧದಲ್ಲಿ ಹಿಂದೂಗಳು ತಮಗೆ ತುರು ಷ್ಕರ ಮೇಲಿದ್ದ ಕೋಪವನ್ನೆಲ್ಲ ತೀರಿಸಿಕೊಂಡರು. ಹಲವರು ತುರುಷ್ಕ ಸ್ತ್ರೀಯರನ್ನು ಅಗೌರವಪಡಿಸಿದರು. ಮಸೀದಿಗಳನ್ನು ಒಡೆಸಿದರು. ಖು ರಾನ್ ಗ್ರಂಥವನ್ನು ಹರಿದುಹಾಕಿದರು. ತನ್ನ ರಾಜ್ಯವು ಹೀಗೆ ನಾಶವಾ

ಗುತ್ತಿಗಸ್ಸದನ್ನು ಕಂಡು, ನಿಜಾಮನು ಸೊಕ್ಕಡಗಿ ತಾನೇ ರಾಮರಾಜನ ಶಿಬಿರಕ್ಕೆ ಬಂದು, ಕಲ್ಯಾಣದುರ್ಗ ಷೋಲಾಪುರಗಳ ಕೋಟೆಯ ಬೀಗದ ಕೈಗಳನ್ನು ಮುಂದಿಟ್ಟು ಕ್ಷಮೆ ಬೇಡಿದನು. ಹೀಗೆ ಕಲ್ಯಾಣದುರ್ಗವನ್ನು ತನ್ನ ದತ್ತು ಪುತ್ರನಾದ ಆದಿಲ್‌ಷಹಾನಿಗೆ ಸಾಧಿಸಿಕೊಟ್ಟು, ರಾಮರಾಜನು, ವಿಜಯನಗರಕ್ಕೆ ನಡೆದನು. ಆದರೆ ನಿಜಾಮನು ತನಗಾದ ಪರಾಭವವನ್ನೂ ತನ್ಮೂಲಕ ಎದ್ದ ರೋಷವನ್ನೂ ಸಹಿಸಲಾರದೆ, ಗೋಲ್ಕೊಂಡದ ಕುತುಬ್‌ಷಹಾನ ಸ್ನೇಹಮಾಡಿ, ಪುನಃ ಕಲ್ಯಾಣದುರ್ಗವನ್ನು ಆಕ್ರಮಿಸಿದನು. ಆ ವಾರ್ತೆಯು ತಿಳಿದೊಡನೆಯೇ ರಾಮರಾಜನು ಕೋಪವನ್ನು ಸಹಿಸಲಾರದೆ, ಐವತ್ತು ಸಹಸ್ರ ಸೈನ್ಯದೊಂದಿಗೆ ಹೊರಟು, ನಿಜಾಂಷಹಾನನ್ನು ತರುಮಿಕೊಂಡು ಹೊರಟನು. ವಿಜಾಪುರದ ಸೈನ್ಯಸಾಗರವು ತನ್ನ ಮೇಲೇರಿ ಬರುತ್ತಿರುವುದೆಂದು ತಿಳಿದೊಡನೆಯೇ ಗೋಲ್ಕೊಂಡದ ಸುಲ್ತಾನನು ನಿಜಾಮರ ಪಕ್ಷವನ್ನು ತ್ಯಜಿಸಿದನು. ಒಡನೆ ನಿಸ್ಸಹಾಯಕನಾದ ನಿಜಾಮನು ಓಡಿಹೋಗಿ, ತನ್ನ ರಾಜಧಾನಿಯಲ್ಲಿ ಅಡಗಿಕೊಂಡನು. ಮೂವರ ಸೈನ್ಯಗಳೂ ಆ ಶತ್ರುವನ್ನು ಬೆನ್ನಟ್ಟಿ ಅಹಮದ್‌ನಗರವನ್ನು ಮುತ್ತಿದುವು. ಈ ಬಾರಿ, ಹಿಂದೂ ಸೈನಿಕರು ತುರುಷ್ಕರ ವಿಷಯದಲ್ಲಿ ನಡೆಸಿದ ಕ್ರೂರಕೃತ್ಯಗಳೂ ಅಕಾರ್ಯಗಳೂ, ನಿಜಾಮನಿಗೆ ಮಾತ್ರವಲ್ಲ;—ರಾಮರಾಜನ ಮಿತ್ರರಾದ ಬಿಜಾಪುರ ಗೋಲ್ಕೊಂಡದವರಿಗೆ ಸಹ ಅಸಹನೀಯವೆನಿಸಿ—ಹಿಂದೂಗಳಮೇಲೆ ಅವರಿಗೂ ದ್ವೇಷವುಂಟಾಗುವಂತೆ ಮಾಡಿದುವು.

ಹೀಗೆ ಎಲ್ಲೆಲ್ಲೂ ತನಗೆ ವಿಜಯವೇ ಉಂಟಾಗುತ್ತಿದ್ದುದೂ, ಮಹಮದೀಯ ಸುಲ್ತಾನರು ಮೇಲೆ ಮೇಲೆ ತನ್ನ ಸಹಾಯವನ್ನೇ ಕೋರುತ್ತಿದ್ದುದೂ ರಾಮರಾಜನಿಗೆ ತಲೆ ತಿರುಗುವಂತೆ ಮಾಡಿದುವು. ಆತನು ಆ ಗರ್ವಾಧಿಕ್ಯತೆಯಿಂದ ಮಹಮದೀಯ ಸುಲ್ತಾನರೆಂದರೆ ತೃಣಪ್ರಾಯವೆಂದು ಎಣಿಸಸಾಗಿದನು. ಒಂದಾನೊಂದು ವೇಳೆ ಕೆಲವು ಸಂಗೀತಗಾರರಿಂದ ತನ್ನ ಆಸ್ಥಾನದಲ್ಲಿ ಹಾಡಿಸಿ ಕೇಳಿ ಸಂತೋಷಪಟ್ಟು, ಅವರಿಗೆ ಬಹುಮಾನ ಮಾಡಿ ಕಳುಹಿಸೆಂದು ಬಿಜಾಪುರದ ಸುಲ್ತಾನನಲ್ಲಿಗೆ ಕಳುಹಿಸಿದನು. ತಾನು ಬಿಜಾಪುರ ಸೈನ್ಯದ

ಸಹಾಯಕ್ಕೆ ಆಗಾಗ್ಗೆ ಹೋಗುತ್ತಿದ್ದುದರಿಂದ ಆ ರಾಜ್ಯದ ಸ್ವಲ್ಪ ಭಾಗವನ್ನೂ, ಅಹಮ್ಮದ್ ನಗರರಾಜ್ಯದ ಸ್ವಲ್ಪ ಭಾಗವನ್ನೂ ವಿಜಯನಗರ ರಾಜ್ಯಕ್ಕೆ ಸೇರಿಸಿಕೊಂಡನು. ಕ್ರಮಕ್ರಮವಾಗಿ ಆ ತುರುಷ್ಕರಾಜ್ಯಗಳನ್ನೆಲ್ಲ ಆಕ್ರಮಿಸಿ, ದಕ್ಷಿಣ ಹಿಂದೂಸ್ಥಾನವಾದ್ಯಂತವಾಗಿ ವಿಜಯನಗರದವರ ಪ್ರಭುತ್ವವೇ ನೆಲಸುವಂತೆ ಮಾಡಬೇಕೆಂಬ ಆಕಾಂಕ್ಷೆಯೂ ಆತನಲ್ಲಿ ಮನೆಮಾಡಲಾರಂಭಿಸಿತು. ಸುಲ್ತಾನರ ರಾಯಭಾರಿಗಳನ್ನು ಪೂರ್ವದಂತೆ ಗೌರವಿಸುವುದರಲ್ಲಿ ಕೊರತೆಯುಂಟಾಯಿತು. ಅವರು ಆಸ್ಥಾನದಲ್ಲಿ ತನ್ನೆದುರಿಗೆ ನಿಂತಿರಬೇಕೆಂದು ಆಜ್ಞಾಪಿಸುವನು. ಪ್ರಯಾಣದಲ್ಲಿ ತನ್ನ ಆಜ್ಞೆಯಿಲ್ಲದೆ ಕುದುರೆಯೇರಕೂಡದೆಂದು ಅಪ್ಪಣೆ ಮಾಡುವನು. ಸಾಧ್ಯವಿದ್ದ ಪರಿಯಿಂದಲೆಲ್ಲ ಅವರನ್ನು ಅವಮಾನಗೊಳಿಸುವನು.

ಒಂದು ವೇಳೆ ಅಲ್ಲಿ ಆದಿಲ್‌ಷಹಾನ ರಾಯಭಾರಿಯೂ ರಾಮರಾಜನೂ ಮಾತನಾಡುತ್ತ ವಿಜಯನಗರದ ಸಭಾಭವನದ ಸಮೀಪದಲ್ಲಿ ನಿಂತುಕೊಂಡಿದ್ದರಂತೆ! ಆಗ ಒಂದು ಹಂದಿಯು ಆ ಮಾರ್ಗವಾಗಿ ಓಡಿಹೋಯಿತು. ಅದನ್ನು ಕಂಡು ಮುಹಮ್ಮದೀಯನಾದ ಆ ರಾಯಭಾರಿಯು ಬಹು ಅಸಹ್ಯಪಟ್ಟುಕೊಂಡು, ರಾಜನನ್ನು ಕುರಿತು, ಅಂತಹ ಅಪವಿತ್ರ ಜಂತುವನ್ನು ರಾಜಧಾನಿಯಲ್ಲಿರಿಸಬಹುದೇ? ಎಂದು ಪ್ರಶ್ನಿಸಿದನಂತೆ! ರಾಯನು ಆ ಮಾತನ್ನು ಕೇಳಿ, ಕೇವಲ ಪರಿಹಾಸಭಾವದಿಂದ ಕೈಹೊಯ್ದು ನಕ್ಕು,—"ಇದೇನು, ಅದನ್ನು ಅಷ್ಟು ಅಪವಿತ್ರ ಜಂತುವೆನ್ನುವಿರಲ್ಲ. ಇದರ ಮಲದಲ್ಲಿನ ಕಾಳುಗಳನ್ನು ಹೆಕ್ಕಿ ತಿನ್ನುವ ಕೋಳಿ-ಹುಂಜಗಳನ್ನು ಮನುಷ್ಯರಾದ ನೀವು ತಿನ್ನುವುದಿಲ್ಲವೆ" ಎಂದು ಹೇಳಿದ್ದಲ್ಲದೆ-ಸಮಯವನ್ನು ಸಾಧಿಸಿ ಅಂತಹ ಉದಾಹರಣೆಯನ್ನೂ ತೋರಿಸಿದನಂತೆ! ಮಹಾ ಅಭಿಮಾನಶೀಲನಾದ ಅವನ-ಮತ್ತು ತನ್ಮೂಲಕ ಆ ಬಗೆಯವರ ಗೌರವಕ್ಕೆ ಈ ಬಗೆಯ ಅಪಘಾತವುಂಟಾಗುತ್ತಿದ್ದರೆ ಅದು ದುರಂತ ಪರಿಣಾಮವನ್ನುಂಟುಮಾಡದೆ ಹೋದೀತೆ!

ತಮ್ಮ ರಾಯಭಾರಿಗಳಿಗೂ ತನ್ಮೂಲಕ ತಮಗೂ-ತಮ್ಮ ಮತಕ್ಕೂ ಆಗುತ್ತಿದ್ದ ಈ ಬಗೆಯ ಅಪಮಾನಗಳನ್ನು ಕಂಡು ಮುಹಮ್ಮದೀಯ

ಸುಲ್ತಾನರು, ಹೀಗೆ ದಿನದಿನಕ್ಕೆ ಪ್ರಬಲವಾಗುತ್ತಿದ್ದ ಆ ಹಿಂದೂ ರಾಜಶಲ್ಯವನ್ನು ಕಿತ್ತೊಗೆಯಬೇಕೆಂದು ನಿಶ್ಚಯಿಸಿ, ತಮ್ಮತಮ್ಮಲ್ಲಿ ಸಂಧಾನಗಳನ್ನು ನಡೆಯಿಸಿದರು. ಬಹು ದಿನಗಳಿಂದಲೂ ನಿಜಾಂಷಹಾ ಮತ್ತು ಆದಿಲ್‌ಷಹಾ ಇವರಿಬ್ಬರಲ್ಲಿ ನಡೆದುಬರುತ್ತಿದ್ದ ವೈರತ್ವವನ್ನು ಕಳೆದು ಗೋಲ್ಕೊಂಡದ ನವಾಬನು ಮಧ್ಯಸ್ಥನಾಗಿ ಮೈತ್ರಿಯನ್ನುಂಟುಮಾಡಿದನು. ಆ ಸ್ನೇಹವು ಸ್ಥಿರವಾಗಿರುವುದಕ್ಕಾಗಿ, ನಿಜಾಮನ ಮಗಳಾದ ಚಾಂದ್‌ಬೀಬಿ ಎಂಬ ಯುವತಿಯನ್ನು ಅಲ್ಲಿ ಆದಿಲ್‌ಷಹಾನಿಗೂ, ಅವನ ತಂಗಿಯನ್ನು ನಿಜಾಮನ ಹಿರಿಯಮಗ ಷಹಜಾದಾ ಮುರ್ತುಜಾ ಎಂಬಾತನಿಗೂ ಕೊಟ್ಟು ವಿವಾಹಮಹೋತ್ಸವಗಳನ್ನು ನೆರವೇರಿಸಿದರು. ದೀರ್ಘದ್ವೇಷದಿಂದ ಅನೇಕವೇಳೆ ಪರಸ್ಪರ ಹೊಡೆದಾಡುತ್ತಿದ್ದ ಅಹಮ್ಮದ್ ನಗರ ಬಿಜಾಪುರಗಳವರು ದೇಹಸಂಬಂಧ ಬಾಂಧವ್ಯಗಳಿಂದ ಹೀಗೆ ಒಂದಾಗಲು, ಅವರೊಂದಿಗೆ ಗೋಲ್ಕೊಂಡದ ನವಾಬನೂ ಬೀದರ್ ನವಾಬನೂ ಸೇರಿದರು. ಹೀಗೆ ಈ ನಾಲ್ಕು ಸಂಸ್ಥಾನಗಳ ದಖ್ಖನೀ ಸುಲ್ತಾನರೂ ಏಕತ್ರ ಸೇರಿ, ತಮ್ಮ ಅಭಿವೃದ್ಧಿ ಮಾರ್ಗದಲ್ಲಿ ಕಂಟಕಸ್ವರೂಪವಾಗಿದ್ದ-ರಾಮರಾಜನ ವಿಜಯನಗರರಾಜ್ಯವನ್ನು ಮೂಲೋತ್ಪಾಟನಗೊಳಿಸಬೇಕೆಂದು ಸಂಕಲ್ಪಿಸಿದರು.



## ಅಧ್ಯಾಯ ೭. "ತಾಳೀಕೋಟೆಯ ಮಹಾಯುದ್ಧ"

ಹಿಂದೂರಾಜ್ಯದಮೇಲೆ ಬೀಳಬೇಕೆಂದು ಮಹಮ್ಮದೀಯರು ಮಾಡುತ್ತಿದ್ದ ಈ ಸನ್ನಾಹಗಳ ವೃತ್ತಾಂತವೆಲ್ಲವೂ ಗುಪ್ತಚಾರರ ಮೂಲಕ ರಾಮರಾಜನಿಗೆ ತಿಳಿಯಲು, ಆತನು ಬಿಜಾಪುರದ ಸುಲ್ತಾನನನ್ನು ಆ ವಾರ್ತೆಯೇನೆಂದು ವಿಚಾರಿಸಿದನು. ಅದಕ್ಕೆ ಪ್ರತ್ಯುತ್ತರವಾಗಿ ಆತನು—"ನಿಮ್ಮ ಮಗನಾದ ನಾನು ನಿಮಗೆಲ್ಲಿಯಾದರೂ ದ್ರೋಹ ಮಾಡುವೆನೇ! ಮತಾಭಿಮಾನಕ್ಕಾಗಿ ಅವರೊಂದಿಗೆ ಸೇರಿದಂತಿದ್ದು, ಯುದ್ಧಕಾಲದಲ್ಲಿ ತಪ್ಪದೆ ನಿಮಗೆ ಸಹಾಯಮಾಡುವೆನು" ಎಂದು ಹೇಳಿಕಳುಹಿಸಿದನು.

ಇದಾದ ಒಡನೆ ನಾಲ್ಕುಮಂದಿ ಸುಲ್ತಾನರೂ ಸ್ವಲ್ಪವೂ ಸಾವಕಾಶಮಾಡದೆ ಇನ್ನು ಪ್ರಕೃತ ಯುದ್ಧಕ್ಕೊಂದು ಸಾಕ್ಷಾತ್ ಕಾರಣವನ್ನು ಕಲ್ಪಿಸಬೇಕೆಂದು ಯೋಚಿಸಿದರು. ಅದಿಲ್‌ಷಹಾನು —'ನನ್ನ ರಾಜ್ಯದಿಂದ ನೀವು ತೆಗೆದುಕೊಂಡ ದುರ್ಗಗಳನ್ನು ನನಗೆ ವಾಪಸು ಕೊಡಿರಿ' ಎಂದು ರಾಮರಾಜನಿಗೆ ವರ್ತಮಾನ ಕಳುಹಿಸಿದನು. ರಾಮರಾಜನು ಆ ರಾಯಭಾರಿಯನ್ನು ಅವಮಾನ ಪಡಿಸಿ ಹಿಂದಕ್ಕೆ ಕಳುಹಿಸಿಬಿಟ್ಟನು. ಒಡನೆ ಆ ನಾಲ್ಕುಮಂದಿ ನವಾಬರೂ ೧೫೬೪ ನೆಯ ಡಿಶಂಬರು ೧೫ನೆಯದಿನ ಬಿಜಾಪುರದಿಂದ ಹೊರಟು ದಕ್ಷಿಣದಿಕ್ಕನ್ನು ಅನುಸರಿಸಿ ಪ್ರಯಾಣಮಾಡಿದರು. ಸಮುದ್ರದಂತೆ ವಿಸ್ತಾರವಾದ ಅವರ ಸೇನಾಸಮೂಹಕ್ಕೆ ಆಹಾರಪಾನೀಯಗಳು ದೊರಕುವಂತಹ ಫಲವತ್ತಾದ ದಕ್ಷಿಣದೇಶದ ಮೈದಾನ ಪ್ರದೇಶದಲ್ಲಿ ಪ್ರಯಾಣಮಾಡುತ್ತಾ ತಾಳೀಕೋಟೆದುರ್ಗದ ಸಮೀಪಕ್ಕೆ ಬಂದರು. ತಾಳೀಕೋಟೆಯು ಕೃಷ್ಣಾನದಿಗೆ ಇಪ್ಪತ್ತೈದುಮೈಲು ದೂರದಲ್ಲಿ ಅದಕ್ಕೆ ಉಪನದಿಯಾದ ದ್ರೋಣನದಿಯ ದಡದಲ್ಲಿದೆ. ಅಪಾರ ಮಹಮ್ಮದೀಯ ಸೈನ್ಯಗಳು ಅಲ್ಲಿ ಕೆಲವು ದಿನಗಳು ವಾಸಿಸಿದ್ದು, ವ್ಯೂಹವನ್ನು ರಚಿಸಿ ಸಿದ್ಧಗೊಳ್ಳುತ್ತ-ಕೃಷ್ಣಾನದಿಯನ್ನು ದಾಟಲು ಯೋಗ್ಯಸ್ಥಳವಾವುದೆಂದು ಅಲ್ಲಲ್ಲಿ ಸೈನಿಕರನ್ನು ಕಳುಹಿಸಿ ಹುಡುಕಿಸುತ್ತಿದ್ದರು.

ಇತ್ತ ರಾಮರಾಜನಾದರೂ ಆಲಸನಾಗಿ ಸುಮ್ಮನೆ ಕುಳ್ಳಿರಲಿಲ್ಲ. ನಾಲ್ಕುಮಂದಿ ಸುಲ್ತಾನರೂ ಒಂದಾಗಿ ಬರುವ ಆ ಪ್ರಬಲ ಶತ್ರುಸೈನ್ಯವನ್ನು ಎದುರಿಸಲು, ತನ್ನ ಸಾಮ್ರಾಜ್ಯದ ಸಕಲ ಭಾಗಗಳಿಂದಲೂ, ಮಂತ್ರಿ ಸಾಮಂತರಾಜರನ್ನು ಕರೆಸಿಕೊಂಡು ರಾಜಕಾರ್ಯವನ್ನು ಕುರಿತು ಯೋಚಿಸಿದನು. ಉತ್ತರಕ್ಕೆ ಕೃಷ್ಣಾನದಿಯಿಂದ ದಕ್ಷಿಣಕ್ಕೆ ಮಧುರೆ ತಿರುವಾಂಕೂರು ಲಂಕಾದ್ವೀಪಗಳ ಸಾಮಂತರಾಜ ಪ್ರತಿನಿಧಿಗಳೂ ಸಭೆಯಲ್ಲಿ ಹಾಜರಿದ್ದು ಧರ್ಮಬಾಹಿರರಾದ ಆ ಯವನರ ಸೈನ್ಯವನ್ನು ಹೊಡೆದಟ್ಟುವೆವೆಂದು ಅಟ್ಟಹಾಸಮಾಡಿದರು. ಆದರೆ ರಾಮರಾಜನು ಕೇವಲ ತನ್ನ ಸೈನಿಕರ ಉತ್ಸಾಹದಿಂದಲೇ ಶತ್ರು ಸೈನಿಕರು ಜಿತರಾಗುವರೆಂದು ನಂಬುವಷ್ಟು ಹುಚ್ಚನೇ! ಒಂದು ಲಕ್ಷ ಕುದುರೆಗಳನ್ನೂ ಆರು ಲಕ್ಷ ಕಾಲ್ಬಲವನ್ನೂ ಸಾವಿರ

ವೈದುನೂರು ಆನೆಗಳನ್ನೂ ನೆರೆಯಿಸಿ ಆ ಅಗಾಧ ಬಲದೊಂದಿಗೆ ಶತ್ರು ಸೈನ್ಯವನ್ನೆದುರಿಸಿ ಹಿಂದಕ್ಕಟ್ಟಲು ಸಂಕಲ್ಪಿಸಿದನು.

ಯುದ್ಧ ವಿದ್ಯಾವಿಚಕ್ಷಣನಾದ ರಾಮರಾಜನು ಒಡನೆ ತನ್ನ ಸೈನ್ಯವನ್ನು ಮೂರುಭಾಗನಾಗಿ ವಿಂಗಡಿಸಿ, ಒಂದು ಲಕ್ಷ ಕಾಲ್ಬಲವನ್ನೂ, ಇಪ್ಪತ್ತು ಸಹಸ್ರ ಕುದುರೆಗಳನ್ನೂ ಐನೂರು ಆನೆಗಳನ್ನೂ ಕೊಟ್ಟು ತನ್ನ ಚಿಕ್ಕ ತಮ್ಮ ತಿರುಮಲರಾಜನನ್ನು ಶತ್ರುಗಳು ಕೃಷ್ಣಾನದಿಯನ್ನು ದಾಟಿ ಈಚೆಗೆ ದಕ್ಷಿಣಕ್ಕೆ ಬರದಂತೆ ತಡೆಯಬೇಕೆಂದು ಕಳುಹಿಸಿ, ಆತನಿಗೆ ಬೆಂಬಲವಾಗಿ ವೆಂಕಟಾದ್ರಿ ರಾಜನೊಂದಿಗೂ ಅಪಾರ ಸೇನೆಯನ್ನಿತ್ತು ಕಳುಹಿಸಿದನು. ತರುವಾಯ, ತಾನು ಪತ್ನಿಯರೆಲ್ಲರಿಗೂ ವಿವಿಧ ವಸ್ತ್ರಾಭರಣಗಳನ್ನಿತ್ತು ಸಂತುಷ್ಟಿಪಡಿಸಿ, ಅವರ ಸಮ್ಮತಿಯನ್ನು ಪಡೆದು, ತಾಯಿಗೆ ನಮಸ್ಕರಿಸಿ ಅಕೆಯ ಆಶೀರ್ವಾದವನ್ನು ಹೊಂದಿ, ಬ್ರಾಹ್ಮಣೋತ್ತಮರಿಗೂ ದೀನಾನಾಥರಿಗೂ ದೇವಸ್ಥಾನ ಧರ್ಮಸ್ಥಳಗಳಿಗೂ ಮುಕ್ತಹಸ್ತನಾಗಿ ದಾನಮಾಡಿ, ಸಕಲರೂ ಜಯಜಯವೆಂದು ಜಯಘೋಷ ಮಾಡುತ್ತಿರಲು ಶತ್ರುಹನನಕ್ಕಾಗಿ ಉತ್ತಮ ಗಜಾರೋಹಣಮಾಡಿ ಮಿಕ್ಕಸೈನ್ಯದೊಂದಿಗೆ ರಾಜಧಾನಿಯಿಂದ ಉತ್ತರ ದಿಕ್ಕನ್ನು ಕುರಿತು ಪ್ರಯಾಣಮಾಡಿದನು. ಈ ಯುದ್ಧಕ್ಕೆ ಹೊರಟಾಗ ಆತನಿಗೆ ಎಪ್ಪತ್ತು ವರ್ಷ ವಯಸ್ಸಾಗಿದ್ದಿತೆಂದು ಫೆರಿಸ್ತಾ ಎಂಬ ಚರಿತ್ರಕಾರನು ಹೇಳುತ್ತಾನೆ ಆದರೆ, ರಾಜಾಸ್ಥಾನದಲ್ಲಿ ವಿಶೇಷ ಪ್ರವೇಶವೂ ಅನೇಕ ಅಂತರ್ಯ ವಿಷಯಗಳ ಅನುಭವವೂ ಇದ್ದ ಪೋರ್ಚುಗೀಸ್ ಚರಿತ್ರಕಾರರು ಆಗ ಆತನಿಗೆ ತೊಂಬತ್ತಾರನೆಯ ವರ್ಷ ನಡೆಯುತ್ತಿತ್ತೆಂದು ಉಲ್ಲೇಖಿಸುತ್ತಾರೆ. ರಾಮರಾಜನ ಸೈನ್ಯದೊಂದಿಗೆ ಆನೆಗಳು, ಒಂಟೆಗಳು, ಕುದುರೆಗಳು, ವಿವಿಧ ಆಹಾರ ಸಾಮಗ್ರಿಗಳು, ದನಕರುಗಳು, ಕುಶಿತದ ಅಂಗಡಿಗಳು, ಬೇಟೆಯ ಸಾಮಾನು ಸರಂಜಾಮುಗಳು, ಖಜಾನೆ ಮುಂತಾದ ಸಕಲ ಸನ್ನಾಹವೂ ತುಂಬಿದ್ದು ಒಂದು ಪಟ್ಟಣವೇ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗುವುದೋ ಎಂಬಂತೆ ಇದ್ದಿತು.

ಇನ್ನು ಸಾವಕಾಶವೇಕೆಂದು ಸುಲ್ತಾನರ ಸೈನ್ಯಗಳು ತಾಳೀಕೋಟೆಯ ಬಳಿಯಿಂದ ಹೊರಟು ಕೃಷ್ಣಾನದಿಯನ್ನು ದಾಟುವ

ಉದ್ದೇಶದಿಂದ ದಕ್ಷಿಣ ದಿಕ್ಕನ್ನನುಸರಿಸಿ ಪ್ರಯಾಣ ಮಾಡಿದುವು. ಆದರೆ, ನದಿಯನ್ನು ದಾಟಲು ಎಲ್ಲೂ ಅವಕಾಶವೇ ಇಲ್ಲದಂತೆ ಅದರ ದಕ್ಷಿಣ ತೀರದಲ್ಲಿ ಹಿಂದೂಸೈನ್ಯವು ಗುಂಪು ಸೇರಿದ್ದುದರಿಂದ ಮಹಮ್ಮದೀಯ ಸುಲ್ತಾನರು ಮಂತ್ರಾಲೋಚನೆಮಾಡಿ ಹಿಂದೂ ಸೈನ್ಯವನ್ನು ಮೋಸಪಡಿಸುವುದಕ್ಕಾಗಿ ತಾವಿದ್ದ ಉತ್ತರದಿಕ್ಕಿನ ನದೀತೀರದಲ್ಲೇ, ತಮ್ಮ ಠಾಣ್ಯದಿಂದ ಸೈನ್ಯವನ್ನು ಕದಲಿಸಿ ಕೆಳಕ್ಕೆ ತೆಗೆದುಕೊಂಡುಹೋದರು. ಮಹಮ್ಮದೀಯ ಸೈನ್ಯವು ಕದಲಿದಂತೆಲ್ಲ ಹಿಂದೂ ಸೈನ್ಯವೂ ಕದಲುತ್ತಾ ಈಚೆಯ ದಡದಲ್ಲಿ ನಡೆದು ಹೋಗುತ್ತಿತ್ತು. ಹೀಗೆ ಎರಡು ದಿನಗಳವರೆಗೆ, ತಮ್ಮ ಶಿಬಿರವನ್ನು ಬಿಟ್ಟು ಪ್ರಯಾಣ ಮಾಡಿ ನಡೆದು, ಮೂರನೆಯ ದಿನ ಪ್ರಾತಃಕಾಲ ಸುಲ್ತಾನರ ಸೈನ್ಯವು ಅಕಸ್ಮಾತ್ತಾಗಿ ವೇಗವಾಗಿ ಹಿಂದಿರುಗಿ ಮೊದಲಿದ್ದ ಸ್ಥಳಕ್ಕೆ ಬಂದು ಅಲ್ಲಿಂದ ನದಿಯನ್ನು ದಾಟಿ, ದಕ್ಷಿಣತೀರದ ಬಯಲನ್ನು ಸೇರಿತು.

ಹೀಗೆ ತುರುಷ್ಕಸೈನ್ಯವು ನದಿದಾಟಿದ ಮರುದಿನ ಎಂದರೆ ೧೫೬೫ನೆಯ ಜನವರಿ ೨೩ ನೆಯ ಮಂಗಳವಾರದ ದಿನ ಉಭಯಸೈನ್ಯಗಳಿಗೂ ಘೋರವಾದ ಯುದ್ಧನಡೆಯಿತು. ಇದಕ್ಕೇ ತಾಳೀಕೋಟೇ ಯುದ್ಧವೆಂದು ಹೆಸರು. ತಾಳೀಕೋಟೆಯು ಕೃಷ್ಣಾನದಿಗೆ ಉತ್ತರದಿಕ್ಕಿನಲ್ಲಿದೆ. ಯುದ್ಧ ನಡೆದುದು ನದಿಗೆ ದಕ್ಷಿಣದಲ್ಲಿ! ಆದರೂ, ನವಾಬರ ಸೈನ್ಯಗಳು ಕೆಲವು ದಿನಗಳವರೆಗೆ ತಾಳೀಕೋಟೆಯ ಬಳಿ ತಂಗಿದ್ದುದರಿಂದ ಐತಿಹಾಸಿಕರು ಈ ಯುದ್ಧಕ್ಕೆ ಆ ಹೆಸರನ್ನೇ ಇಟ್ಟು ಕರೆದಿದಾರೆ. ಆದರೆ ಮಹಾರಾಷ್ಟ್ರ ಇತಿಹಾಸಕರ್ತರು ತಮ್ಮ ಬಖೇರುಗಳಲ್ಲಿ ಯುದ್ಧವು ರಾಕ್ಷಸನೇರ್ ಎಂಬ ಗ್ರಾಮದ ಸಮೀಪದ ವಿಶಾಲವಾದ ಮೈದಾನದಲ್ಲಿ ಜರುಗಿತೆಂದು ಬರೆಯುತ್ತಾರೆ.

ಯುದ್ಧಕ್ಕೆ ಮುಂಚೆ, ವೆಂಕಟಾದ್ರಿ ತಿರುಮಲರಾಯರು ತಮ್ಮ ವಯೋವೃದ್ಧನಾದ ಅಣ್ಣನ ಸಮೀಪಕ್ಕೆ ಬಂದು, ತಾವು ಯುದ್ಧವಿಚಾರವನ್ನು ನೋಡಿಕೊಳ್ಳುತ್ತೇವೆಂದೂ, ರಾಜನಾದ ಆತನು ಬೇರೊಂದು ಸುರಕ್ಷಿತಸ್ಥಳದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಾ ಇರಲೆಂದೂ ವಿಜ್ಞಾಪಿಸಿಕೊಂಡರು. ಆದರೆ ಯುದ್ಧಜೀವಿಯಾದ ಆತನಿಗೆ ಆ ಮಾತುಗಳು ರುಚಿಸಲಿಲ್ಲ. ಭೀಷ್ಮಾಚಾರ್ಯನಂತೆ ಶತವೃದ್ಧನಾಗಿ

ದ್ದರೂ ಆ ಧೀರೋತ್ತಮನು--ತನ್ನ ತಮ್ಮಂದಿರನ್ನೂ ಸರ್ದಾರರನ್ನೂ ಸಂಬೋಧಿಸಿ-"ಮಿತ್ರರೇ, ಮಹಮ್ಮದೀಯ ಸೈನ್ಯಕ್ಕೆ ಎಂದೂ ಮೊಳಕಾಲೂರದಂತೆ ಧೈರ್ಯದಿಂದ ಎದುರಿಸಿ ನಿಲ್ಲಿರಿ. ನನ್ನ ಈ ವೃದ್ಧಾಪ್ಯದ ವರೆಗೆ ಎಂದೂ ಯುದ್ಧರಂಗದಲ್ಲಿ ನನ್ನ ಕೀರ್ತಿಗೆ ನಾನು ಕಳಂಕ ತಂದು ಕೊಳ್ಳಲಿಲ್ಲ. ಈಗ ನನ್ನ ಆಯುಸ್ಸಿನ ಕೊನೆಯಭಾಗದಲ್ಲಿ ಭಯದಿಂದ ಹಿಂಜರಿಯಲಾ! ಹಾಗೆ ಯಾರಿಗಾದರೂ ಭಯವಿದ್ದರೆ, ಹಿಂದಿರುಗಿ ಪ್ರಾಣರಕ್ಷಣೆಮಾಡಿಕೊಳ್ಳಲು ಇನ್ನೂ ಸಮಯವಿದೆ" ಎಂದನು. ಆ ಮಾತು ಕೇಳಿ, ವೆಂಕಟಾದ್ರಿ ಮುಂತಾಗಿ ಸಮಸ್ತ ಸರದಾರರೂ ತಮ್ಮ ಅಪಾರ ಸೈನ್ಯದೊಂದಿಗೆ-ಮರಣ ಪರ್ಯಂತ ಹೋರುವುದೇ ಅಲ್ಲದೆ, ಹಿಂಜರಿಯಲಾರೆವೆಂದು ಆಯುಧಗಳನ್ನು ಹಿಡಿದು ಭಾಷೆಯಿತ್ತರು. ರಾಮರಾಜನು,—'ಭಯವಿಲ್ಲ-ಇದೇನು ಮಹಾಯುದ್ಧವು. ಈ ಮಕ್ಕಳ ಆಟಕ್ಕಾಗಿ ಇಷ್ಟು ಕಾತರವೇಕೆ-ಯೋಚನೆಯೇಕೆ ? ಹಿಂದೂಸೈನ್ಯದ ಮೊದಲನೆಯ ಶಸ್ತ್ರಪ್ರಯೋಗವನ್ನೇ ತಡೆಯಲಾರದೆ ಈ ಮುಸಲರು ಓಡುವುದನ್ನು ನೋಡುವಿರಿ" ಎಂದು ತನ್ನ ಸೈನಿಕರನ್ನು ಪ್ರೋತ್ಸಾಹಗೊಳಿಸಿ, ತಾನೊಂದು ಮೇನಾ ಹತ್ತಿ ಹೋದನು. ಆಪ್ತರಾದ ಸರದಾರರು, ಕುದುರೆಯಮೇಲಿರುವುದು ಸುರಕ್ಷಿತವೆಂದು ಸೂಚಿಸಿದರು.

ಆ ವೇಳೆಗೆ ಮಧ್ಯಾಹ್ನವಾಯಿತು. ಪ್ರಾರಂಭಕ್ಕೆ ವೆಂಕಟಾದ್ರಿಯ ಸೈನ್ಯವೇ ಬಿಜಾಪುರದವರ ಮೇಲೆ ಶರವರ್ಷವನ್ನು ಸುರಿಸಿತು. ಮಹಮ್ಮದೀಯ ಸೈನ್ಯದಲ್ಲಿ ವೆಂಕಟಾದ್ರಿಯ ಸೈನ್ಯಕ್ಕೆ ಅಭಿಮುಖವಾಗಿ ಬಿಜಾಪುರದ ಅಲ್ಲಿ ಅದಿಲ್‌ಷಹಾನ ಸೈನ್ಯವೂ ಮಧ್ಯಭಾಗದಲ್ಲಿ ನಿಜಾಂ ಷಹಾನ ಸೈನ್ಯವೂ ಎಡಭಾಗದಲ್ಲಿ ಬೀದರ್ ಮತ್ತು ಗೋಲ್ಕೊಂಡದ ಸುಲ್ತಾನರ ಸೈನ್ಯಗಳೂ ಇದ್ದುವು. ನಿಜಾಂಷಹಾನ ಮುಂಭಾಗದಲ್ಲೇ ಆರು ನೂರು ಫಿರಂಗಿಗಳನ್ನೂ ಶತಘ್ನಗಳನ್ನೂ ಮೂರುಸಾಲಾಗಿ ಹೊಂದಿಸಿಟ್ಟು, ಹಾಗೆ ಇಟ್ಟ ಅವುಗಳು ಹಿಂದೂಸೈನ್ಯಕ್ಕೆ ಕಾಣಿಸದಂತಿರಬೇಕೆಂದು ಅವುಗಳ ಮುಂಭಾಗದಲ್ಲಿ ಎರಡು ಸಾವಿರಮಂದಿ ಪರದೇಶೀಯ ಬಿಲ್ಲುಗಾರರು ನಿಲ್ಲಿಸಲ್ಪಟ್ಟದ್ದರು. ಮಹಮ್ಮದೀಯಸೈನ್ಯದ ಎಡಭಾಗಕ್ಕೆ ಎಂದರೆ ಬೀದರ್ ಗೋಲ್ಕೊಂಡದವರ ಸೈನ್ಯಕ್ಕೆ ಅಭಿಮುಖವಾಗಿ ತಿರುಮಲ ರಾಜನ ಸೈನ್ಯವು ನಿಂತಿತು. ಫಿರಂಗಿಗಳಿದ್ದ ನಿಜಾಂ ಷಹಾನ ಮಧ್ಯ

ಭಾಗದ ಸೈನ್ಯಕ್ಕೆ ಅಭಿಮುಖವಾಗಿ ರಾಮರಾಜನೇ ನಿಂತನು. ಮೇಲ್ಕಂಡಂತೆ ವೆಂಕಟಾದ್ರಿಯ ಸೈನ್ಯವು ಪ್ರಾರಂಭಕ್ಕೆ ಶರವರ್ಷವನ್ನು ಸುರಿಸಿ ಯುದ್ಧ ಪ್ರಾರಂಭಮಾಡಿದೊಡನೆಯೇ ಪೂರ್ತಿಯಾದ ಸೈನ್ಯವೂ ಪರಸ್ಪರ ಹೊಡೆದಾಡಲಾರಂಭಿಸಿತು. ಮಧ್ಯಭಾಗದ ಬಿಲ್ಲುಗಾರರನ್ನು ಎದುರಿಸಿ ರಾಮರಾಜನ ಕೈಕೆಳಗಿದ್ದ ಹಿಂದೂಸೈನಿಕರು ತಮ್ಮಿಕೊಂಡು ಹೋದರು. ಹಿಂದೂ ಸೈನ್ಯದ ಬಲಭಾಗದಲ್ಲಿದ್ದ ತಿರುಮಲನ ಇಪ್ಪತ್ತು ಸಹಸ್ರ ಅಶ್ವಸೈನ್ಯವು ಆತನ ಮಗ ರಘುನಾಥರಾಜನ ಮೇಲ್ವಿಚಾರಣೆಯಲ್ಲಿ ಗೋಲ್ಕೊಂಡದ ಸುಲ್ತಾನನ ಸೈನ್ಯದಮೇಲೆ ಬಿದ್ದು ಧ್ವಂಸಮಾಡಲಾರಂಭಿಸಿತು. ರಾಮರಾಜನು ವೀರಾವೇಶದಿಂದ ಶತ್ರುಸೈನ್ಯದಮೇಲೆ ನುಗ್ಗಲು, ನಿಜಾಮನ ಸೈನ್ಯವು ಆ ರಭಸವನ್ನು ತಡೆಯಲಾರದೆ ಅರ್ಧ ಹರದಾರಿಯ ದೂರ ಹಿಂಜರಿದು ಹೋಯಿತು. ಅಷ್ಟರಲ್ಲಿ ಬಿಜಾಪುರದ ಸೈನ್ಯದ ಒತ್ತಾಸೆಯೂ ಒದಗಲು ನಿಜಾಮನು ಸ್ವಲ್ಪ ಸುಧಾರಿಸಿಕೊಂಡು ಹೆಚ್ಚಿ ಹೋಗುತ್ತಿರುವ ಹಿಂದೂಸೈನ್ಯಕ್ಕೆ-ಪ್ರಾಣಹೋದರೂ ಹಿಂಜರಿಯದಂತೆ ತನ್ನ ಸೈನ್ಯಕ್ಕೆ ಪ್ರೋತ್ಸಾಹ ಕೊಡುವುದಕ್ಕಾಗಿ, ರಣರಂಗದ ಮಧ್ಯದಲ್ಲೊಂದು ಉನ್ನತ ಪೀಠವನ್ನು ಹಾಕಿಸಿಕೊಂಡು ಅದರಮೇಲೆ ಕುಳಿತು ಸೈನಿಕರಿಗೆ ಹಣ ಹೊನ್ನುಗಳನ್ನು ಕೊಟ್ಟು ಪ್ರೋತ್ಸಾಹಿಸತೊಡಗಿದನು. ಇದನ್ನು ಕಂಡೊಡನೆ ರಾಮರಾಜನು ಸಹಿಸಲಾರದೆ ತನ್ನ ಸೈನ್ಯದಲ್ಲೂ ಒಂದು ಉನ್ನತವಾದ ಸಿಂಹಪೀಠವನ್ನು ಹಾಕಿಸಿದನು ಅದರಮೇಲೆ ರತ್ನಖಚಿತವಾದ ಆಸನವು ಸಿದ್ಧಗೊಳಿಸಲ್ಪಟ್ಟಿತು. ಮೇಲೆ ಬಂಗಾರದ ಜರಿ ಮತ್ತು ಮುತ್ತು ರತ್ನಗಳ ಜಾಲರಿಯಿಂದ ಅಲಂಕೃತವಾದ ಕೆಂಪು ಮಖಮಲ್ಲಿನ ಛತ್ರಿಯು ಪಂಚ ಕಲಶಗಳಿಂದ ಒಪ್ಪುತ್ತ ಶತ್ರು ರಾಜವೈಭವವನ್ನು ಅಣಕಿಸುವಂತಿತ್ತು. ಆ ಪೀಠದಮೇಲೆ ಕುಳಿತು ಶ್ರೀ ರಾಮರಾಜನು, ಮುತ್ತು ರತ್ನಗಳು ವಜ್ರ ಕೆಂಪುಗಳು, ಸುವರ್ಣ ನಾಣ್ಯಗಳು, ಮುಂತಾದುವನ್ನು ತನ್ನ ಸೈನಿಕರಿಗೆ ಬೊಗಸೆ ಬೊಗಸೆಯಾಗಿ ಬಹುಮಾನವಿತ್ತು ಅವರಲ್ಲಿ ನೂತನೋತ್ಸಾಹವನ್ನು ಹುಟ್ಟಿಸತೊಡಗಿದನು.

ಆವೇಳೆಗೆ ಹಿಂದೂ ಸೈನ್ಯದಮೇಲೆ ಒಂದು ಅಪಘಾತವೊದಗಿತು. ಅಹಮ್ಮದ್‌ನಗರದ ಸೈನ್ಯದಿಂದ ಖಿಷ್ವರ್‌ಖಾನ್ ಎಂಬೊಬ್ಬ ಸರದಾರನು

ಐದು ಸಾವಿರ ಕುದುರೆಯ ದಳವನ್ನು ತೆಗೆದುಕೊಂಡು ಅಗಾಧರೋಷದಿಂದ ಬಂದು ಹಿಂದೂಸೈನ್ಯವನ್ನು ಚದುರಿಸಿದನು. ಅದೇ ಸಂಧಿಯನ್ನು ಸಾಧಿಸಿ, ವಿಜಯನಗರದ ಸೇವೆಯಲ್ಲಿದ್ದ ಇಬ್ಬರು ಮಹಮ್ಮದೀಯ ಸರದಾರರು ಜಾತ್ಯಭಿಮಾನದಿಂದ, ಸ್ವಾಮಿದ್ರೋಹವನ್ನು ಗಣಿಸದೆ ಶತ್ರುಪಕ್ಷವನ್ನು ಸೇರಿ, ಹಿಂದೂಸೇನೆಯ ಮೇಲೆಯೇ ಕೈಮಾಡಸಾಗಿದರು. ಹಿಂದೂ ಸೈನ್ಯದಲ್ಲಿ ಎಲ್ಲಿ ನೋಡಿದರೂ ವ್ಯವಸ್ಥೆ ತಪ್ಪಿ ಗದ್ದಲಕ್ಕೆ ಪ್ರಾರಂಭವಾಯಿತು. ಸೈನಿಕರು ದಿಕ್ಕುತೋರದಂತಾದರು. ಆಗ ರಾಮರಾಜನು, ತಾನೇ ಸೈನ್ಯಮಧ್ಯದಲ್ಲಿದ್ದು ಅವರನ್ನು ಪ್ರೋತ್ಸಾಹಗೊಳಿಸತಕ್ಕುದು ಕರ್ತವ್ಯವೆಂದು ಯೋಚಿಸಿ ಒಂದು ಮೇನಾವನ್ನು ಹತ್ತಿ ಹೊರಟನು. ಸ್ವಲ್ಪ ದೂರ ಸಾಗುವುದರೊಳಗಾಗಿಯೇ ಎದುರಿಗೆ ಆತನ ಮೃತ್ಯುವೇ ರೂಪುಗೊಂಡು ಬಂದಿತೋ ಎಂಬಂತೆ ಅಹಮ್ಮದ್ ನಗರದ ಸೈನ್ಯದ ಮದಹತ್ತಿದ ಒಂದು ಆನೆಯು, ತನ್ನ ಮಾವುತನನ್ನು ಕೊಂದು ಮನಬಂದಂತೆ ತಿರುಗುತ್ತಾ ರಾಮರಾಜನು ಕುಳಿತಿದ್ದ ಮೇನೆಯ ಮೇಲೇರಿ ಬರತೊಡಗಿತು. ಆನನ್ನು ಕಂಡು ಮೇನೆಯನ್ನು ಹೊತ್ತಿದ್ದ ಬೋಯಿಗಳು ಭಯಪಟ್ಟು ಆದನ್ನು ಕೆಳಕ್ಕೆ ಎತ್ತಿಹಾಕಿ ಪ್ರಾಣಭಯದಿಂದ ಓಡಿಹೋಗಿದರು. ರಾಮರಾಜನು, ಒಡನೆ ಕುದುರೆಯನ್ನು ಹತ್ತಬೇಕೆಂದು ಪ್ರಯತ್ನಿಸುತ್ತಿರುವಷ್ಟರಲ್ಲಿ, ಆನೆಯು ಆತನನ್ನು ತನ್ನ ಸೊಂಡಿಲಿನಿಂದ ಸುತ್ತಿ ಹಾಕಿಕೊಂಡಿತು ಅಷ್ಟರಲ್ಲಿ ಘಲಾಬಿ ರುಮಿಖಾನನೆಂಬ ಒಬ್ಬ ಮುಹಮ್ಮದೀಯ ಸರದಾರನು ಆತನನ್ನು ಕೊಲ್ಲಲು ಕತ್ತಿಯನ್ನೆತ್ತಿದನು. ಆ ವೇಳೆಗೆ ಹಿಂದೂಸೈನ್ಯದ ದಳಪತ್‌ರಾಯ್ ಎಂಬೊಬ್ಬ ಬ್ರಾಹ್ಮಣಯೋಧನು—'ಕೊಲ್ಲಬೇಡ, ಆತನನ್ನು ಕೊಲ್ಲಬೇಡ. ಆತನನ್ನು ದಿವಾನ್ ಬಾರೀದ್‌ಖಾನರ ಬಳಿಗೆ ಕರೆದುಕೊಂಡುಹೋಗು' ಎಂದು ತಡೆದನು. ಕೊನೆಗೆ ಆ ಸಾರ್ವಭೌಮಕೈದಿಯನ್ನು ಹುಸೇನ್ ನಿಜಾಂಷಹಾನ ಎದುರಿಗೆ ಕರೆತಂದರು. ಆತನು, ತಕ್ಷಣವೇ ರಾಮರಾಜನ ತಲೆಯನ್ನು ಹಾರಿಸಿಬಿಡುವಂತೆ ಆಜ್ಞಾಪಿಸಿದನು.—ಅಲ್ಲಲ್ಲ ತಾನೇ—ತನ್ನ ಕೈಕತ್ತಿಯಿಂದ ಆತನ ತಲೆಯನ್ನು ಕತ್ತರಿಸಿ—'ಈಗ, ನಿನ್ನ ಮೇಲಿದ್ದ ರೋಷಕ್ಕೆ ಪ್ರತೀಕಾರ ಮಾಡಿದೆನು. ಇನ್ನು ದೇವರು ನನಗೆ ಏನು ಬೇಕಾದರೂ ಮಾಡಲಿ' ಎಂದು ಅಬ್ಬರಿಸಿ ಬೊಬ್ಬಿರಿದನು.

ರಾಮರಾಜನು ಸೆರೆಸಿಕ್ಕನೆಂಬ ವಾರ್ತೆಯನ್ನು ಅಲ್ಲಿ ಆದಿಲ್‌ಷಹನು ಕೇಳಿ, ಆತನನ್ನು ಪ್ರಾಣಸಹಿತ ರಕ್ಷಿಸಬೇಕೆಂದು ಹುಸೇನ್ ನಿಜಾಂಷಹಾನ ಬಳಿಗೆ ಒಡನೆ ಓಡಿಬಂದನು. ಆದರೆ ಅವನು ಬರುವವೇಳೆಗೇ ರಾಮರಾಯನ ರುಂಡವು ಮುಂಡದಿಂದ ಬೇರೆಯಾಗಿ ಬಿದ್ದಿತ್ತು. ಇದನ್ನು ಕಂಡು ಆತನು ಅಪಾರಶೋಕಗ್ರಸ್ತನಾದನೆಂದು ವರ್ಣಿತವಾಗಿದೆ!

ಹುಸೇನ್ ನಿಜಾಂಷಹನ ಅಪ್ಪಣೆಯಾದ ಒಡನೆ ರಾಮರಾಜನ ಆ ಶಿರಸ್ಸನ್ನು ಒಂದು ಉದ್ದವಾದ ಭಲ್ಲೆಗೆ ಸಿಕ್ಕಿಸಿ, ಸೈನ್ಯಕ್ಕೆಲ್ಲಾ ಕಾಣುವಂತೆ ಎತ್ತಿ ಪ್ರದರ್ಶಿಸಿದರು. ತಮ್ಮ ರಾಜನ ತಲೆಯನ್ನು ಭಲ್ಲೆಯ ಕೊನೆಯಲ್ಲಿ ಕಂಡೊಡನೆಯೇ ವಿಜಯನಗರದ ಸೈನ್ಯವು ಭಯಾಕ್ರಾಂತವಾಗಿ ದಿಕ್ಕು ತಿಳಿಯದಂತೆ ಚದುರಿ ಓಡಿಹೋಯಿತು. ತುರುಷ್ಕರು ಅವರ ಬೆನ್ಹತ್ತಿ ತಮ್ಮ ಮನಸ್ಸಿಗೆ ತೃಪ್ತಿಯಾಗುವವರೆಗೂ ಹಿಂದೂಗಳನ್ನು ಸಂಹರಿಸಿದರು. ಹೀಗೆ ಕತ್ತರಿಸಲ್ಪಟ್ಟ ಹಿಂದೂಗಳ ಸಂಖ್ಯೆಯು ಲಕ್ಷಕ್ಕೆ ಕಡಿಮೆಯಿರಲಿಕ್ಕಿಲ್ಲವೆಂದು ಚರಿತ್ರಕಾರರು ಹೇಳುತ್ತಾರೆ. ಇವರೊಂದಿಗೆ ಹಿಂದೂ ಸೈನ್ಯದ ವೈಭವವು ಕೊನೆಗಂಡಿತು. ಮುಂದೆ ಹಿಂದೂಗಳು ಅಂತಹದೊಂದು ಅಗಾಧರಾಜ್ಯವನ್ನೂ ಕಟ್ಟಲಿಲ್ಲ. ಏಕನಾಯಕಪ್ರಭುತ್ವದಲ್ಲಿ ಹಾಗೆ ಬಲಗೊಂಡು ಒಂದಾಗಿ ಬೆರೆಯಲೂ ಇಲ್ಲ.

ಬಿಜಾಪುರದ ಆದಿಲ್‌ಷಹಾನು, ತಾನು ತನ್ನ ಜಾತಿಬಾಂಧವರೊಂದಿಗೆ ಕಲೆತಿದ್ದರೂ, ತಂದೆಯೆಂದು ಸಂಬೋಧಿಸಿರುವ ನಿಮಗೆ ದ್ರೋಹ ಮಾಡುವುದಿಲ್ಲವೆಂದು ಕೊನೆಯವರೆಗೂ ಹೇಳಿಕೊಂಡು ಬಂದು ಕೊನೆಗೆ ತಾನೇ ಕೊಂದನೆಂದೂ, ಇಂತಹ ವಿಶ್ವಾಸಘಾತುಕತೆಯಿಂದಲೇ ಹಿಂದೂಗಳಿಗೆ ಪರಾಜಯವುಂಟಾಯಿತೆಂದೂ ಫೆರಿಸ್ತಾ ಎಂಬ ಚರಿತ್ರಕಾರನು ಬರೆಯುತ್ತಾನೆ. ಮುಖ್ಯ ವಿಧಿಯೇ ಬಲೀಯವಾದುದು!

ಹೀಗೆ ಚದುರಿಹೋದ ಹಿಂದೂ ಸೈನಿಕರು ಪುನಃ ಒಂದಾಗಿ ಕಲೆಯಲಿಲ್ಲ. ಶತ್ರುಸೈನ್ಯವನ್ನು ಎದುರಿಸಲಿಲ್ಲ. ಯಾರಿಗೆ ಹೇಗೆ ತೋರಿದರೆ ಹಾಗೆ ಬಿದ್ದು ಎದ್ದು ಓಡುತ್ತಾ ಬಂದು ವಿಜಯನಗರವನ್ನು ಸೇರಿ, ಕೈಗೆ ಸಿಕ್ಕ ಹಣಕಾಸುಗಳನ್ನು ಬಾಚಿಕೊಂಡು, ತಮ್ಮ ಕುಟುಂಬಗಳನ್ನು ಕರೆದುಕೊಂಡು ತೋರಿದಲ್ಲಿಗೆ ಓಡಿಹೋದರು. ರಾಮರಾಜನ ತಮ್ಮಂದಿರಲ್ಲಿ ವೆಂಕಟಾದ್ರಿಯು ಯುದ್ಧರಂಗದಲ್ಲಿ ಮಡಿದನು. ತಿರುಮಲರಾಜ

ಮಾತ್ರ ಬದುಕಿ ಒಡನೆ ವಿಜಯನಗರಕ್ಕೆ ಬಂದು, ಹೆಸರಿಗೆ ಮಾತ್ರ ರಾಜನಾಗಿದ್ದ ಸದಾಶಿವರಾಯನನ್ನೂ, ರಾಜಭವನದಲ್ಲಿದ್ದ ಅಪಾರ ಸಂಪತ್ತನ್ನೂ ತೆಗೆದುಕೊಂಡು ಪೆನುಗೊಂಡೆಗೆ ಹೊರಟು ನಡೆದನು. ಆತನು ರಾಜಭಂಡಾರದ ಮುತ್ತುರತ್ನಗಳು ಬೆಳ್ಳಿಬಂಗಾರಗಳು ಅಪಾರ ವಸ್ತ್ರಾಭರಣಗಳು ಮುಂತಾದುವುಗಳನ್ನೆಲ್ಲ ಐದುನೂರ ಐವತ್ತು ಆನೆ ಗಳಮೇಲೆ ಹೇರಿಸಿಕೊಂಡು ಹೋದನೆಂದು ಹೇಳುತ್ತಾರೆ. ಹೀಗೆ ರಾಜನೂ ಸೈನಿಕರೂ ಇಲ್ಲದೆ ಪಟ್ಟಣವು ನಿರಾಧಾರವಾಯಿತು. ಈವರೆಗೆ ಭಯವೆಂಬ ಹೆಸರನ್ನರಿಯದೆ ಇದ್ದ ಆ ಪಟ್ಟಣಿಗರು ಇಂದು ದಿಕ್ಕಿಲ್ಲದ ಪರದೇಶಿಗಳಂತಾದರು. ತಮ್ಮಲ್ಲಿದ್ದ ಕಾಳುಕಡ್ಡಿಗಳನ್ನಾದರೂ ಹೊತ್ತು ಕೊಂಡು ಎಲ್ಲಿಗಾದರೂ ಓಡಿಹೋಗೋಣವೆಂದರೆ, ವಾಹನಗಳಿಲ್ಲ. ಬಂಡಿಗಳಿಲ್ಲ. ಎತ್ತು ಕುದುರೆಗಳಿಲ್ಲ. ಏನುಮಾಡಲೂ ತೋರದೆ ಇದ್ದು ದಿದ್ದಂತೆ ಬಿಟ್ಟು ಪ್ರಾಣಿಗಳನ್ನು ರಕ್ಷಿಸಿಕೊಳ್ಳಲು ಹಲವರು ಓಡಿಹೋ ದರು. ಯುದ್ಧನಡೆದ ಎರಡುದಿನಗಳೊಳಗಾಗಿ ಸುತ್ತುಮುತ್ತಲಿದ್ದ ಲಂಬಾಣಿಗರು ಕೊರಚರು ಮುಂತಾದ ಕಳ್ಳಕಾಕರು ಬಂದು ಮನ ಬಂದಂತೆ ಪಟ್ಟಣಿಗರನ್ನು ಆರುಬಾರಿ ದೋಚಿಕೊಂಡರು. ಹಿಂದೂ ಸೈನ್ಯದ ಅಪಾರಸಂಪತ್ತನ್ನು ಕೊಳ್ಳೆ ಹೊಡೆದುಕೊಂಡ ನಂತರ ಮೂರ ನೆಯ ದಿನ ಮಹಮ್ಮದೀಯ ಸೈನ್ಯವು ಬಂದು ವಿಜಯನಗರದಮೇಲೆ ಬಿದ್ದಿತು. ಅಂದಿನಿಂದ ಆರು ತಿಂಗಳುಕಾಲ ಅವರು ಆ ಪಟ್ಟಣದಲ್ಲಿ ನಡೆಸಿದ ಘೋರಕೃತ್ಯಗಳನ್ನು ಇಷ್ಟಿಷ್ಟೆಂದು ವರ್ಣಿಸಲಳವಲ್ಲ. ನಿರಪ ರಾಧಿಗಳಾದ ಅಸಂಖ್ಯ ಜನರನ್ನು ಸಂಹರಿಸಿದರು. ರಾಜಪ್ರಾಸಾದಗಳು? ಭವ್ಯದೇವಾಲಯಗಳು ಸುಂದರಮಂದಿರಗಳು, ಪವಿತ್ರ ಜಲಯುಕ್ತವಾದ ಕೆರೆ ಕಟ್ಟೆ ಕಾಲುವೆಗಳು -ಸಮಸ್ತವೂ ಧ್ವಂಸವಾಗಿ ಹೋದುವು. ಹಲವು ಬಗೆಯ ಪೂಜೆಪುರಸ್ಕಾರಗಳನ್ನು ಕೈಗೊಳ್ಳುತ್ತಿದ್ದ ಪವಿತ್ರದೇವತಾ ವಿಗ್ರಹಗಳು ಛಿನ್ನಭಿನ್ನವಾಗಿ ನಾಶವಾದುವು. ಪ್ರಪಂಚದಲ್ಲೇ ಅದ್ವಿತೀ ಯವೆಂಬ ಪ್ರಖ್ಯಾತಿಗೆ ಪಾತ್ರವಾಗಿದ್ದ ವಿಜಯನಗರ ರಾಜಧಾನಿಯು, ತಾಳೀಕೋಟೆಯ ಮಹಾ ಯುದ್ಧವಾದ ಆರುತಿಂಗಳೊಳಗಾಗಿ ನಿರ್ಜನ ಸ್ಮಶಾನದಂತಾಯಿತು. ಮಹಮ್ಮದೀಯ ಸೈನ್ಯದ ಒಬ್ಬ ಯಃಕಶ್ಚಿತ ಸೈನಿಕನು ಸಹ ಲಕ್ಷಾಧೀಶನಾದನು.

# ಉಪಸಂಹಾರ

ಶ್ರೀ ರಾಮರಾಜನ ಪತನದೊಂದಿಗೆ ಅಸ್ತಮಿಸಿದ ವಿಜಯನಗರ ರಾಜ್ಯಭಾಸ್ಕರನು ಪುನಃ ಉದಯವಾಗಲಿಲ್ಲ. ತಿರುಮಲರಾಯನು ಪೆನುಗೊಂಡೆಯನ್ನು ಸೇರಿದ ತರುವಾಯ ಅಲ್ಲಿ ಆ ದುರ್ದೈವಿ ಸದಾಶಿವ ರಾಯನನ್ನು ಕೊಂದು ತಾನೇ ರಾಜನಾದನಂತೆ! ವಿಜಯನಗರವನ್ನು ಪುನಃ ಜನಾವಾಸಯೋಗ್ಯವಾಗಿ ಮಾಡಬೇಕೆಂದೂ ಈತನು ಒಂದುಬಾರಿ ಪ್ರಯತ್ನಿಸಿದನಂತೆ, ಆದರೂ ಅದು ಸಾಧ್ಯವಾಗಲಿಲ್ಲ. ಮುಂದೆ ವಿಜಯ ನಗರಕ್ಕೆ ಒಳಿತವಾಗಿದ್ದ ಬಿದನೂರು, ಮೈಸೂರು, ಮಧುರೆ, ತಂಜಾವೂರು ಮುಂತಾದ ರಾಜ್ಯಗಳೆಲ್ಲ ಸ್ವತಂತ್ರವಾದುವು.

ತಿರುಮಲರಾಯನ ವಂಶೀಕರು ೧೭ನೆಯ ಶತಮಾನದ ಆದಿಭಾಗ ದಲ್ಲಿ ಚಂದ್ರಗಿರಿಯಲ್ಲಿ ಆಳುತ್ತಿದ್ದರು. ತಿರುಮಲರಾಯನಿಂದ ಆರನೆಯ ತಲೆಯವನಾದ ಶ್ರೀರಂಗರಾಜನೆಂಬಾತನಿಂದಲೇ, ಈಸ್ಟ್ ಇಂಡಿಯಾ ಕಂಪೆನಿಯವರು ೧೬೩೯ನೆಯ ಮಾರ್ಚಿ ತಿಂಗಳಲ್ಲಿ ಮದ್ರಾಸು ಪಟ್ಟಣ ವನ್ನು ಬೆಲೆಗೆ ತೆಗೆದುಕೊಂಡುದು. ಈಗ ಆನೆಗೊಂದಿಯಲ್ಲಿ ವಾಸಿಸುತ್ತಿ ರುವ ರಾಜರು ಈ ಶ್ರೀರಂಗರಾಜನ ಸಂತತಿಯವರೇ!

ಪ್ರಪಂಚವು ಪರಿವರ್ತನಸ್ವಭಾವವನ್ನುಳ್ಳುದು. ಭಗವದಿಚ್ಛೆಗನು ಸರಿಸಿ, ಲೋಕದಲ್ಲಿ ಯಾವ ಪ್ರಾಪಂಚಿಕವೈಭವವೂ ಸ್ಥಿರವಾಗಿರದೆ, ಕಾಲ ಕಾಲಕ್ಕೆ ವ್ಯತ್ಯಾಸವಾಗುತ್ತಲೇ ಇರುವುದು. ಮುನ್ನುಡಿಯಲ್ಲಿ ಸೂಚಿಸಿ ದಂತೆ, ಲೌಕಿಕಸಾಮಾನ್ಯವಾದ ಈ ವಿಚಾರಗಳಿಗಾಗಿ ಹತಾಶರಾಗದೆ, ಕನ್ನಡಿಗರೂ ಲೋಕಯಾತ್ರೆಯಲ್ಲಿ ಪರಕೀಯರಂತೆಯೇ ನಡೆಯಬೇಕಾ ಗಿದೆ. ಅದಕ್ಕೆ ಬೇಕಾದ ಶಕ್ತಿಸಾಮರ್ಥ್ಯಗಳೂ, ಧೈರ್ಯ ಶೌರ್ಯ ಚಾತುರ್ಯಗಳೂ, ಏಕನಿಷ್ಠೆ, ಸತ್ಯ ಧರ್ಮ ನ್ಯಾಯಮಾರ್ಗಾನುವರ್ತನೆ ಗಳೂ, ಅವರಲ್ಲಿ ಮೂಡಲು ಅವರು ತಮ್ಮ ಪೂರ್ವಿಕರ ಪವಿತ್ರ ಚರಿತ್ರೆ ಗಳನ್ನು ಪಠಿಸಬೇಕಾದುದು ಅ-ನಿವಾರ್ಯವು. ಸರ್ವೇಶ್ವರನು ಪ್ರಗತಿ ಮಾರ್ಗವನ್ನನುಸರಿಸಲು ಅಡಿಯಿಡುತ್ತಿರುವ ಕರ್ಣಾಟಕರಿಗೂ-ಭಾರತೀ ಯರಿಗೂ, ಸಕಲವಿಧ ಉನ್ನತಧ್ಯೇಯಗಳಲ್ಲೂ ಮಾರ್ಗದರ್ಶಕನಾಗಿ, ಅವರು ತಮ್ಮ ಲಕ್ಷ್ಯಸಾಧನೆಯಲ್ಲಿ ಹಿಂಜರಿಯದಂತೆ, ಅವರಲ್ಲಿ ಆತ್ಮ ನಿಷ್ಠೆಯನ್ನೂ ಕಾರ್ಯತತ್ಪರತೆಯನ್ನೂ ಕರುಣಿಸಿ ರಕ್ಷಿಸಲಿ.

ತಥಾಸ್ತು.

॥ ಶ್ರೀ ರಾ ಮ ಸ ಹಾ ಯ ಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ :—**

ನಮ್ಮ ಪ್ರಕೃತ ಚರಿತ್ರೆಯು, ಈ ಭಾರತವರ್ಷದ ಒಬ್ಬಾನೊಬ್ಬ ಚಕ್ರವರ್ತಿಯ ಚರಿತ್ರೆಯನ್ನೂ ಆತನ ದೇವಯೋಗ್ಯವಾದ ಕೀರ್ತಿಪ್ರತಿಭೆಗಳನ್ನೂ ವರ್ಣಿಸುವುದರೊಂದಿಗೆ, ಒಂದು ಅಲೌಕಿಕ ಅಮೌಲ್ಯ ಆಧ್ಯಾತ್ಮಿಕ ತತ್ತ್ವವನ್ನೂ ಬೋಧಿಸುತ್ತದೆ. ಸೃಷ್ಟಿ ಶ್ರೇಷ್ಠನಾದ ಮಾನವನು, ಆದ್ಯಂತರಹಿತನೂ ದೇವಾದಿದೇವನೂ ಪರಮಪುರುಷನೂ ಆದ ಶ್ರೀಮನ್ನಾರಾಯಣ ಮೂರ್ತಿಯ ಪರಮಮಂಗಳಸ್ವರೂಪದ ದರ್ಶನಾನಂದವನ್ನು ಪಡೆದು ಆತನ ಸಾನ್ನಿಧ್ಯವನ್ನು ಹೊಂದತಕ್ಕುದೇ, ಇಹಲೋಕದಲ್ಲಿದ್ದು ಸಾಧಿಸಬೇಕಾದ ಪರಮಾವಧಿ ಪ್ರಯೋಜನವಲ್ಲವೆ? ಜೀವಿತದ ಆದ್ಯಧ್ಯೇಯವಾದ ಈ ಪ್ರಯೋಜನವನ್ನೊಂದನ್ನು ಬಿಟ್ಟು-ಮಾಡುವ, ಮಾನವನ ಸಮಸ್ತ ವಿಧ ಕ್ರಿಯೆಗಳೂ, ಅವನನ್ನು ಪ್ರಪಂಚಕ್ಕೆ ಬಂಧಿಸಿ, ಜನನ ಮರಣ ಪ್ರವಾಹದಲ್ಲಿ ಮುಳುಗಿಸೇಳಿಸುವುದಕ್ಕೆ ಸಹಾಯಕವಾಗುವುವಲ್ಲದೆ ಬೇರಲ್ಲ. ಅವನು ಅತಿಶಯ ಮೇಧಾವಿಯೆನಿಸಿ ವೇದಶಾಸ್ತ್ರ ಪುರಾಣೇತಿಹಾಸಾದಿಗಳನ್ನು ಪಠಿಸಿ ಪಂಡಿತನೆಂದು ಪ್ರಸಿದ್ಧನಾಗಬಹುದು. ಅತಿಶಯ ಬಲಶಾಲಿಯೆನಿಸಿ ಶಸ್ತ್ರಾಸ್ತ್ರ ಪ್ರಯೋಗ ನಿಪುಣನಾಗಿ ಭೂಮಿಯಲ್ಲಿನ ಸಕಲರನ್ನೂ ಜಯಿಸಿ ತನ್ನ ಆಜ್ಞೆಗೆ ಒಳಪಡಿಸಿಕೊಂಡು- ಏಕಚ್ಛತ್ರಾಧಿಪತಿಯೆನ್ನಿಸಿಕೊಂಡು ಮೆರೆಯಬಹುದು. ಅಥವ ಅತಿಶಯ ಧನ ಕನಕಗಳನ್ನೂ ಮುತ್ತು ಮಾಣಿಕ್ಯಗಳನ್ನೂ ಹೆಚ್ಚೇನು- ನವ ನಿಧಿಗಳನ್ನೂ ಗಳಿಸಿ ಕುಬೇರಸಮಾನನೆಂಬ ಪ್ರಶಸ್ತಿಯನ್ನು ಪಡೆಯಬಹುದು. ಆದರೇನು! ಭೂ ಸಂಬಂಧವಾದ ಈ ಬಗೆಯ ಯಾವ ಸಂಪದವೂ ಜನ್ಮ ಸಾರ್ಥಕ್ಯವನ್ನು ಉಂಟುಮಾಡಲರಿಯದು. ಇದರಿಂದ ಧನ ಕನಕಾದಿಗಳಿಗೆ ಸುಖಶಾಂತಿಗಳನ್ನು ತಂದೀವ ಸಾಮರ್ಥ್ಯವಿಲ್ಲವೆಂದು ಎಣಿಸಲಾಗದು; ಇದೆ. ಆದರೆ, ಆದು ದುಃಖಮಿಶ್ರಿತವಾದುದಲ್ಲದೆ, ನಿಷ್ಕಲ್ಮಷವಾದುದಲ್ಲ. ಆ ಸುಖದೊಂದಿಗೆ ಕಷ್ಟವೂ ಬೆರೆತೇ ಇದೆಯಲ್ಲದೆ, ಆದು ನಿರಂತರ ಸುಖ ಸ್ವರೂಪಿಯಾದುದಲ್ಲ. ನಮ್ಮ ಮನಸ್ಸು ಇಂದ್ರಿಯ ಬದ್ಧ

ವಾಗಿ ಎಂದಿನವರೆಗೆ ವಿಷಯವಾಸನೆಯ ಹದ್ದನ್ನು ಮೀರಿ ಮುಂದಕ್ಕೆ ಹೋಗಲರಿಯದೋ ಅಂದಿನವರೆಗೆ ನಮಗೆ ಆ ಅಲೌಕಿಕ ಸುಖದ-ಆನಂದದ ಕಲ್ಪನೆಯುಂಟಾಗುವುದು ಸಾಧ್ಯವಲ್ಲ. ಪೂರ್ವಿಕ ಮಹನೀಯರು ಲೌಕಿಕ ವಾಗಿ ಎಷ್ಟು ಧನ ಧಾನ್ಯ ಸಂಪನ್ನರಾಗಿದ್ದರೂ, ಬಲಶಾಲಿಗಳಾಗಿದ್ದು-ಚಕ್ರ ವರ್ತಿ ಪದವಿಯನ್ನೇ ಅನುಭವಿಸುತ್ತಿದ್ದರೂ, ಅದ್ವಿತೀಯ ವೇದ ವಿದ್ಯಾಧಿಕಾ ರಿಗಳೇ ಆಗಿದ್ದರೂ ಅವರು ಅವುಗಳಿಂದಲೇ ಬಂಧಿತರಾಗಿರಲಿಲ್ಲ. ಅವುಗಳಿ ಗಿಂತಲೂ, ಉನ್ನತವಾದುದೂ ಶ್ರೇಷ್ಠವಾದುದೂ ಅವುಗಳಿಗೆ ಆಧಾರಸ್ವರೂ ಪವಾದುದೂ ಯಾವುದೆಂಬುದರ ಜ್ಞಾನವನ್ನು ಮರೆತಿರಲಿಲ್ಲ. ಆದುದರಿಂದಲೇ ಅವರು ಇಂದು ಯಶಶ್ಚಕ್ರವರ್ತಿಗಳಾಗಿ ಮೆರೆಯುತ್ತ ಜನಾಂಗವನ್ನು ನಕ್ಷ ತ್ರಸ್ವರೂಪರಾಗಿ ಬೆಳಗುತ್ತಿರುವರು. – ಜನಾಂಗದ ತಲೆ ತಲಾಂತರಗಳಿಗೂ ಆದರ್ಶ ಸ್ವರೂಪರಾಗಿರುವರು.

ಜೀವನು ಜನನ ಮರಣ ಪ್ರವಾಹ ಬದ್ಧನು. ಈ ಪ್ರವಾಹವು ಎಂದು ಎಲ್ಲಿ ಪ್ರಾರಂಭವಾಯಿತೆಂಬುದಾಗಲೀ-ಎಂದಿಗೆ ಯಾವಲ್ಲಿಗೆ ಮುಗಿವುದೆಂಬು ದಾಗಲೀ ಆ ಸರ್ವೇಶ್ವರನಿಗೊಬ್ಬಗಲ್ಲದೆ ಇತರರಿಗೆ ತಿಳಿಯದು. ಒಂದು ಜನ್ಮ ದಿಂದ ಇನ್ನೊಂದು ಜನ್ಮಕ್ಕೆ ಹೋಗುತ್ತ ಜೀವನು ಹೊಸಹೊಸ ಅನುಭವಗ ಳನ್ನೂ ನವನವೀನ ಪರಿಸ್ಥಿತಿಗಳನ್ನೂ ಹೊಂದುತ್ತ ಹೋಗುವನು. ಈ ಅನು ಭವಗಳೂ ಜನ್ಮಜನ್ಮಕ್ಕೆ ಉತ್ತಮಗೊಂಡರಲ್ಲದೆ ಜನ್ಮಸಾರ್ಥಕತೆಯೂ, ಜನನ ಮರಣಪ್ರವಾಹದಿಂದ ಬಿಡುಗಡೆಯೂ ಲಭಿಸದು. ಹೀಗೆ ಉತ್ತಮಗೊ ಳ್ಳುವುದರ ಮೂಲಸೂತ್ರವು ಸರ್ವಶಕ್ತನಾದ ಶ್ರೀಮನ್ನಾರಾಯಣನ ಕೈಯ ಲ್ಲಡಗಿದೆಯೆಂದು ಜ್ಞಾನಿಗಳು ಉದ್ಘೋಷಿಸುತ್ತಿರುವರು. ಆತನಾದರೋ ನೆನೆ ವವರ ಮನದಲ್ಲಿರುವನು. ಸ್ಮರಿಸುವವರ ಸ್ಮರಣೆಯಲ್ಲಿರುವನು. ಭಜಿಸು ವವರ ಬೆಂಬಿಡದಿರುವನು. ಅಂತೆಯೇ ಮರೆತವರನ್ನೂ – ಮರೆಯುವನು. ಉದಾಸೀನ ಮಾಡುವವರನ್ನು – ಉದಾಸೀನಭಾವದಿಂದಲೇ ಕಾಣುವನು. ಸಮಸ್ತಕ್ಕೂ ಆದಿಕಾರಣನಾದ ಆತನನ್ನು ಸ್ಮರಣೆಗೂ ತಾರದೆ ಇರತಕ್ಕವ ರನ್ನು ಆತನಾದರೂ ಸ್ಮರಿಸಿಕೊಳ್ಳುವನೆಂದು ಹೇಗೆ ಭಾವಿಸಲಾದೀತು!

ಜೀವನು ಜನ್ಮಜನ್ಮಕ್ಕೂ ಉತ್ತಮಗೊಳ್ಳುತ್ತ, ಭಗವಂತನ ಸಮೀಪ ವರ್ತಿಯಾಗುತ್ತ ಸಾಗುವ ಒಂದು ಸುಲಭೋಪಾಯವನ್ನು ಶ್ರೀ ಕೃಷ್ಣಪರ ಮಾತ್ಮನು ಗೀತಾಶಾಸ್ತ್ರದಲ್ಲಿ ಸೂಚಿಸಿದ್ದಾನೆ.

ಶ್ಲೋಕ:—ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ |
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ೮. ೫.

ತಾ|| "ಯಾವನು ಮರಣಕಾಲದಲ್ಲಿಯೂ ನನ್ನನ್ನು ಸ್ಮರಿಸುತ್ತಾ ಶರೀರವನ್ನು ಬಿಡುವನೋ, ಆತನು ನನ್ನ ಭಾವವನ್ನೇ ಐದುವನು. ಈ ವಿಷಯದಲ್ಲಿ ಸಂದೇಹವಿಲ್ಲ."

ಇದರಿಂದ, ಮುಂದಿನ ಜನ್ಮದಲ್ಲಿ ಭಗವದ್ಭಕ್ತರ, ಯೋಗಿಗಳ. ಧರ್ಮಾತ್ಮರ, ದಯಾಮಯರ, ಆತ್ಮಜ್ಞಾನಿಗಳ, ಮಹಾತ್ಯಾಗಿಗಳ, ಪರೋಪಕಾರಿಗಳ, ಮಹತ್ಕಾರ್ಯಸಾಧಕರ, ರಾಷ್ಟ್ರಭಕ್ತರ ಉದರದಲ್ಲಿ ಜನ್ಮಿಸಿ - ಅಂಥವರ ಸಹವಾಸದಲ್ಲಿ ವಾಸಿಸಿ, ಉನ್ನತೋನ್ನತ ಗತಿಗಳನ್ನು ಸಾಧಿಸಿಕೊಳ್ಳಲು, ಮನುಷ್ಯನು ಇಹಜನ್ಮದ ಅಂತ್ಯಕಾಲದಲ್ಲಿ ದೀನಜನಶರಣ್ಯನಾದ ಭಗವಂತನ ದಿವ್ಯನಾಮಗಳನ್ನು ಮರೆಯದೆ ಸ್ಮರಿಸಿಕೊಳ್ಳುವುದೇ - ನಿಶ್ಚಲಚಿತ್ತದಿಂದ ಆತನ ಪರಮ ಮಂಗಳ ಸ್ವರೂಪವನ್ನು ಧ್ಯಾನಿಸಿಕೊಳ್ಳುವುದೇ ಮೂಲಸಾಧನವೆಂದಾಯಿತು. ಆದರೆ ಈ ಕಾರ್ಯವಾದರೂ ಸುಲಭವಾಗಿ ಲಭ್ಯವಾದೀತೋ! ಜನ್ಮಾರಭ್ಯ ದುಶ್ಚಿಂತೆಯಲ್ಲೂ, ದುಷ್ಕಾರ್ಯಗಳಲ್ಲೂ, ಸುಳ್ಳು ಮೋಸ ಪರಪೀಡನೆ ಪ್ರಾಣಿಹಿಂಸೆ ನಾಸ್ತಿಕತೆ, ವಿದ್ಯ - ಐಶ್ವರ್ಯಾದಿ ಮದಾಂಧತೆ ಮುಂತಾದುವುಗಳಿಂದ ಬೇಗಿ ತನ್ನ ತಲೆಯೆಲ್ಲಿರುವುದೆಂಬುದನ್ನೇ ಅರಿಯದ ಅಜ್ಞಾನಿಗೆ- ಅಹಂಕಾರಿಗೆ ಅಂತ್ಯಕಾಲದಲ್ಲಿ ಭಗವಂತನ ದಿವ್ಯನಾಮವು ಒದಗೀತೋ ! ಬದುಕಿದ್ದ ಅನುಗಾಲವೂ ಧನ ಧಾನ್ಯಗಳು ವೃತ್ತಿಕ್ಷೇತ್ರಗಳು ಕಾಮಿನೀ ಕಾಂಚನಗಳು ಅಧಿಕಾರ ಪದವಿಗಳು ಬಿರುದು ಬಹುಮತಿಗಳು ಎಂದು ಹಂಬಲಿಸಿ ಅವುಗಳನ್ನು ಗಳಿಸಲಾತುರಗೊಳ್ಳುತ್ತಾ,-ದೊರೆತರೆ ಉಬ್ಬುತ್ತ, ದೊರೆಯದಿದ್ದರೆ ಕುಗ್ಗಿ ಧರೆಗಿಳಿಯುತ್ತ, ಕೋಪತಾಪಗಳಲ್ಲಿ ಮುಳುಗಿ ಏಳುತ್ತ ಇರತಕ್ಕ ಮದೋನ್ಮತ್ತನಿಗೆ ಅಂತ್ಯಕಾಲದಲ್ಲಿ ಮಂಗಳಸ್ವರೂಪವಾದ ಭಗವಂತನ ದಿವ್ಯನಾಮವು ಚಿತ್ತಕ್ಕೆ ಬಂದೀತೋ! ಅದು ಸ್ವಾಭಾವಿಕವೆ? ಹಾಗೂ ಅಲ್ಲದೆ, ಸದಾಕಾಲವೂ ದ್ಯೂತ ಸುಳ್ಳುಸಾಕ್ಷ್ಯ, ನೃತ್ಯಗೀತವಾದ್ಯಾದಿಗಳು, ಪಗಡೆ ಚದುರಂಗ ಮುಂತಾದ ಆಟಪಾಟಗಳು, ಕೆಲಸಕ್ಕೆ ಬಾರದ ಹಾಳು ಕಥೆ ಮಾಳು ಪ್ರಸಂಗಗಳು ಇವೆಲ್ಲಕ್ಕೂ ಹೆಚ್ಚಾಗಿ ಹೊಟ್ಟೆ ಬಿರಿವಂತೆ ವಿವಿಧ ತಿಂಡಿ ತೀರ್ಥಗಳು-ಮುಚ್ಚು ಮರೆಯೇಕೆ, ಮದ್ಯ ಮಾಂಸಾದಿಗಳು

ಇವುಗಳ ಚಾಪಲ್ಯಕ್ಕೆ ಮನಗೊಟ್ಟು ಕೋತಿಯಂತೆ ಕುಣಿಯುತ್ತಾ ಮನ ಬಂದಲ್ಲಿಗೆ ಓಡುತ್ತಾ ಇರುವ ನರಪಶುವಿಗೆ ಅಂತ್ಯಕಾಲದಲ್ಲಿ ಪರಮ ಮಂಗಳ ಸ್ವರೂಪವಾದ ಶ್ರೀಮನ್ನಾರಾಯಣನ ದಿವ್ಯನಾಮವು ಜ್ಞಾಪಕಕ್ಕೆ ಬಂದೀತೆ! ಆತನ ದಿವ್ಯಸ್ವರೂಪವು ಗೋಚರವಾದೀತೆ! ಲೋಕಗುರು ಶ್ರೀಕೃಷ್ಣ ಪರಮಾತ್ಮನು, ಈ ವಿಷಯವನ್ನೂ ಪರಮ ಪೂಜ್ಯವಾದ ಗೀತಾ ಶಾಸ್ತ್ರದಲ್ಲಿ ನಿರೂಪಿಸಿರುತ್ತಾನೆ.

ಶ್ಲೋ:—ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ |
ತಂ ತಮೇವೈತಿ ಕೌಂತೇಯ ಸದಾತದ್ಭಾವ ಭಾವಿತಃ ||೮-||

ತಾ|| "ಎಲೈ ಕುಂತೀಪುತ್ರನೇ! ಯಾವ ವಸ್ತುವನ್ನೇ ಯಾವಾಗಲೂ ಚಿಂತಿಸುತ್ತಾ, ಅಂತ್ಯಕಾಲದಲ್ಲಿ ಯಾವಯಾವ ಸ್ವರೂಪವನ್ನು ಧೃಢವಾಗಿ ಸ್ಮರಿಸುತ್ತಾ (ಪ್ರಾಣಿಯು) ದೇಹವನ್ನು ಬಿಡುವನೋ ಆಯಾಸ್ಥಿತಿಯನ್ನೇ ಹೊಂದುವನು."

ಇದರಿಂದ 'ಜೀವಿತ ಕಾಲದಲ್ಲಿ ಬೇಕು ಬೇಕಾದಂತೆಲ್ಲ ಇದ್ದು-ತಿಂದು ಕುಡಿದು ಮೆರೆದು, ಸಾಧ್ಯವಿದ್ದ ದುಷ್ಕಾರ್ಯಗಳನ್ನೆಲ್ಲ ಮಾಡಿ, ಕೊನೆಯು ಳ್ಳೊಂದುವೇಳೆ 'ನಾರಾಯಣ' ಎಂದು ನುಡಿದುಬಿಟ್ಟರೆ ಆಯಿತಲ್ಲ! ಸದ್ಗತಿಯು ದೊರೆಯುವುದು" ಎಂದು ಯಾವನಾದರೂ ಭಾವಿಸುವನಾದರೆ ಅವನಿಗಿಂತಲೂ ಅಜ್ಞಾನಿಯು ಮತ್ತೊಬ್ಬನಿರನು. ಅದು ಮನಸ್ಸಿನ ಸ್ವಭಾವಕ್ಕೆ ಅಂತ್ಯತ ವಿರುದ್ಧವಾದ ಕ್ರಿಯೆಯು. ಮನಸ್ಸು ಅನುಗಾಲವೂ ಯಾವುದನ್ನು ಕುರಿತು ಚಿಂತಿಸುತ್ತಿರುವುದೋ ಕೊನೆಗಾಲದಲ್ಲೂ ಅದೇ ಬರುವುದಲ್ಲದೆ-ಬೇರೇನೂ ಜ್ಞಾಪಕಕ್ಕೆ ಬಾರದು. ಕೊನೆಗಾಲದಲ್ಲಿ ಭಗವನ್ನಾಮವು ಸ್ಮರಣೆಗೆ ಬಂದು ತನ್ಮೂಲಕ ಜನ್ಮ ಸಾರ್ಥಕತೆಯುಂಟಾಗಬೇಕೆಂಬ ಆಸೆಯಿದ್ದುದಾದರೆ, ಅದಕ್ಕೆ ಪ್ರಯತ್ನವು-ಕೈಕಾಲುಗಳಲ್ಲಿ ಶಕ್ತಿಯು ಡುಗಿ ಇಂದ್ರಿಯ ಪಾಟವವು ತಪ್ಪಿ, ಹೃದಯ ಚಲನೆಯು ನಿಂತು, ಶ್ಲೇಷ್ಮವು ಕುತ್ತಿಗೆಗೆ ಬಂದು ಶ್ವಾಸವನ್ನು ಬಂಧಿಸಿ-ಪ್ರಾಣವು ಕಂಠಗತವಾದಾಗ-ನಡೆದರೆ ಪ್ರಯೋಜನವಾಗದು. ಅಂತಹ ಆಸೆಯೊಂದಿದ್ದುದಾದರೆ ಅದಕ್ಕೆ ಬೀಜಾವ್ಯಾಪನೆಯು ಇಂದೇ-ಅಹಂಕಾರ ಮಮಕಾರಗಳೆಂಬ ಹೆಂಡೆಗಳನ್ನೊಡೆದು—ಕಾಮ ಕ್ರೋಧಾದಿ ಕಳೆಗಳನ್ನು ತೆಗೆದು, ಸತ್ಯ ಶಾಂತತೆ ದಯೆ

ಮಮತೆಗಳೆಂಬ ಸೀರನ್ನು ಹೊಯ್ದು ಹೃದಯ ಕ್ಷೇತ್ರವನ್ನು ಸಿದ್ಧಗೊಳಿಸಿಕೊಂಡು ಅದರಲ್ಲಿ ಜಗಜ್ಜನ್ಮಾದಿ ಕಾರಣನೂ ಸರ್ವಶಕ್ತನೂ ಸರ್ವಶ್ರೇಷ್ಠನೂ ಆದ ಶ್ರೀರಾಮಚಂದ್ರನ ದಿವ್ಯನಾಮವೆಂಬ ಅಮೃತ ಬೀಜವನ್ನು ನೆಟ್ಟು ಅದನ್ನು ನಿತ್ಯ ಧ್ಯಾನ ಭಜನೆ ಅಂತರ್ಬಾಹ್ಯಸೇವೆ ನಿಷ್ಕಾಮಕರ್ಮ ಮುಂತಾದ ಗೊಬ್ಬರ ಗೋಡುಗಳಿಂದ ಬೆಳೆಸಿ ರಕ್ಷಿಸಿಕೊಂಡು ಬಂದರೆ, ಆ ವೃಕ್ಷದಲ್ಲಿ ಬಿಡುವ ಅಮೃತಫಲವು 'ಯಮದೂತರು ಬಂದೆಳೆವ' ಅಂದು ಕೈಗೆ ದೊರೆತು ಭಗವಧ್ಯಾನವೂ ಭಗವನ್ನಾಮವೂ ಸ್ಮರಣೆಗೆ ಬರುವುವು. ಅಲ್ಲವೆ? ಹಾಗಲ್ಲದಿರಲು ಅದೇನು ಹುಡುಗಾಟಿಕೆಯೆ?

ಮೇಲೆ ಹೇಳಿಕೊಂಡು ಬಂದ ಈ ಅಧ್ಯಾತ್ಮ ತತ್ವವನ್ನು ಪ್ರಕೃತ ನಾವು ಕೊಡಹೋಗುವ ಜಡಭರತ ಮಹರ್ಷಿಯ ದಿವ್ಯ ಚರಿತ್ರವು ಆದ್ಯಂತ ವಿವರಿಸುವುದು. ಇದನ್ನೂ ಕರ್ಣಾಟಕ ಬಾಂಧವರು ಯಥಾಪೂರ್ವ ಪ್ರೇಮಾದರಗಳಿಂದ ಸ್ವೀಕರಿಸುವುದಲ್ಲದೆ ತಮ್ಮ ನೆರೆಹೊರೆ ಬಂಧು ಬಾಂಧವರಿಗೂ ಗ್ರಂಥಮಾಲೆಯನ್ನು ಪರಿಚಯಮಾಡಿಸಿ ಈ ನಮ್ಮ ಮಾತೃಭಾಷಾ ಸೇವಾಕಾರ್ಯಕ್ಕೆ ಯಥಾಶಕ್ತಿ ಸಹಾಯ ಮಾಡಬೇಕೆಂದು ಪ್ರಾರ್ಥನೆ.

ಬೆಂಗಳೂರು ನಗರ }
ತಾ|| ೧೧-೧೨-೧೯೨೮ }

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ರೀರಾಮಸಹಾಯಂ

# ಜಡಭರತಮಹರ್ಷಿ

**ಅಧ್ಯಾಯ ೧.** **"ಭರತರಾಜರ್ಷಿ"**

ನಮ್ಮ ಮಾತೃಭೂಮಿಯಾದ ಈ ಭರತಖಂಡವನ್ನು ಪುರಾಣಯುಗದಲ್ಲಿ ಭರತವರ್ಷವೆಂದೂ ಕರೆಯುತ್ತಿದ್ದುದುಂಟು. ಜನ್ಮದಾತರೂ ತನ್ಮೂಲಕ ಪ್ರತ್ಯಕ್ಷದೇವತಾಸ್ವರೂಪರೂ ಆದ ಮಾತಾಪಿತೃಗಳಂತೆಯೇ-ಜನ್ಮದಾಯಿಯಾದ ಈಪುಣ್ಯ ಭೂಮಿಯಾದರೂ ಅಹರ್ನಿಶಿ ಸ್ಮರಣೆಗೆ ಅರ್ಹವಾದುದೂ ವಂದನೆಗೆ ಪಾತ್ರವಾದುದೂ ಎಂಬುದನ್ನು ಒತ್ತಿಒತ್ತಿ-ಸ್ಪಷ್ಟವಾಗಿ ಹೇಳುವುದಕ್ಕೋ ಎಂಬಂತೆ ಆರ್ಯ ಮಹರ್ಷಿಗಳು ಈ 'ಭರತವರ್ಷ-ಭರತಖಂಡ' ಎಂಬನಾಮಗಳನ್ನು ದ್ವಿಜರ ನಿತ್ಯಸಂಧ್ಯೆಯ ಸಂಕಲ್ಪದಲ್ಲೇ ಸೇರಿಸಿಟ್ಟಿರುವರು. ದೇಹಪುಷ್ಟಿಗೂ, ದೇಹದ ಬೆಳೆವಣಿಗೆಗೂ ದೇಹಧಾರಣೆಗೂ ಆಹಾರಪಾನೀಯಗಳು ಆವಶ್ಯಕವೆಂಬುದನ್ನು ಮರೆಯದೆ-ಕ್ರಮತಪ್ಪದೆ ಗ್ರಹಿಸುವುದರಲ್ಲಿ ಜಾಗ್ರತರಾಗಿರುವ, ನಮ್ಮಯುವಕರಲ್ಲೂ, ತರುಣರಲ್ಲೂ ಏಕೆ ಹಲಕೆಲ ಪ್ರೌಢವಯಸ್ಕರಲ್ಲೂ ಆತ್ಮಿಕಬೆಳೆವಣಿಗೆಗೂ ಒಂದುಬಗೆಯ ಆಹಾರಬೇಕೆಂಬ ತತ್ವವನ್ನರಿತವರಿದ್ದರೆ ಅಂತಹವರೆಲ್ಲರೂ, ಇತರ ಯಾವಕರ್ಮವನ್ನು ಮಾಡದಿದ್ದರೂ ಈ ಸಂಧ್ಯಾವಂದನೆಯೊಂದನ್ನಾದರೂ ಮಾಡಬಹುದಾದುದರಿಂದ ಅವರಿಗೆ ಈ ಪದಗಳು ತಪ್ಪದೆ ಜ್ಞಾಪಕವಿರಲು ಸಂಶಯವಿಲ್ಲ. ಬ್ರಾಹ್ಮಣ್ಯದ ಮೂಲಸೂತ್ರವಾದ ಗಾಯತ್ರಿಯನ್ನೇ ಮರೆತು-ಅಥವ ಉದಾಶೀನ ಭಾವದಿಂದ ಜಪಿಸದಿದ್ದವರ ವಿಷಯವನ್ನು ಕುರಿತು ಪ್ರಸ್ತಾಪಿಸಬೇಕೇಕೆ?

ಈ ಭರತವರ್ಷದಂತೆಯೇ ಇನ್ನೂಎಂಟು ವರ್ಷಗಳಿವೆಯೆಂದು ಆರ್ಯಭೂಗೋಳಶಾಸ್ತ್ರವು ಹೇಳುತ್ತದೆ. ಇಲಾವೃತ್ತವರ್ಷ, ಭದ್ರಾಶ್ವವರ್ಷ, ಹರಿವರ್ಷ

ಕೇತುಮಾಲವರ್ಷ, ರಮ್ಯಕವರ್ಷ, ಹಿರಣ್ಮಯವರ್ಷ, ಉತ್ತರಕುರುವರ್ಷ, ಕಿಂಪುರುಷವರ್ಷ, ಭರತವರ್ಷ ಇವೇ ಪೃಥ್ವಿಯ ನವವರ್ಷಗಳು ಅಥವ ನವ ಖಂಡಗಳು ಎಂದು ಪ್ರಸಿದ್ಧವಾಗಿರುವುವು. ಈ ನವಖಂಡ ಪೃಥ್ವಿಯೂ ಜಂಬೂದ್ವೀಪವೆಂಬ ಒಂದು ದ್ವೀಪದ ವಿವಿಧಭಾಗಗಳೆಂದು ಆ ಭೂಗೋಳ ಶಾಸ್ತ್ರವು ವರ್ಣಿಸುತ್ತದೆ. ಈ ಜಂಬೂದ್ವೀಪದಂತೆಯೇ ಪ್ಲಕ್ಷದೀಪ, ಶಾಲ್ಮಲದ್ವೀಪ, ಕ್ರೌಂಚದ್ವೀಪ, ಶಾಕದ್ವೀಪ, ಪುಷ್ಕರದ್ವೀಪ, ಎಂಬ ಈ ಬೇರೆ ಆರುದ್ವೀಪಗಳಲ್ಲೂ ಹಲವು ವಿಶಾಲ ಭೂಭಾಗಗಳಿದ್ದು ಅವುಗಳನ್ನೂ ಹಲವು ಖಂಡಗಳನ್ನಾಗಿ ವಿಭಾಗಿಸಿರುವರೆಂದೂ ಆ ಶಾಸ್ತ್ರದಲ್ಲಿ ವರ್ಣಿತವಾಗಿದೆ.

ಆಧುನಿಕ ಪಾಶ್ಚಾತ್ಯ ಶಾಸ್ತ್ರಜ್ಞರು ರಚಿಸಿರುವ ಅಗಾಧ ಭೂಗೋಳ ಶಾಸ್ತ್ರವೆಂಬುದೆಲ್ಲವೂ ಈ ಜಂಬೂದ್ವೀಪವೊಂದನ್ನೇ ಕುರಿತುದೆಂದರೆ ಅನೇಕರಿಗೆ ಆಶ್ಚರ್ಯತೋರದಿರದು. ಈಗ ನಮಗೆ ತಿಳಿದಿರುವ–ನಮ್ಮ ಬಾಲಕರು ಓದುತ್ತಿರುವ ಏಷ್ಯ ಯೂರೋಪು ಆಫ್ರಿಕಾ, ಅಮೆರಿಕಾ ಆಸ್ಟ್ರೇಲಿಯಾ ಎಂಬ ಪಂಚಖಂಡಗಳಿಗೆ ಆಚೆ ಭೂಮಿಯೇಯಿಲ್ಲವೆಂದೂ, ಹಾಗೆ ಇದೆಯೆಂದು ಹೇಳುವ ನಮ್ಮ ಪುರಾಣ ಇತಿಹಾಸಾದಿಗಳೆಲ್ಲ ಕೆಲಸಕ್ಕೆ ಬಾರದ ಕಾಡುಕಗ್ಗಗಳೆಂದೂ, ಹುಚ್ಚು ಹುರುಳು ಕಥೆಗಳೆಂದೂ ಹೇಳುವ ಪಾಶ್ಚಾತ್ಯ ವಿದ್ಯಾಪಾರಂಗತರಿಗೆ ನಮ್ಮಲ್ಲಿ ಕೊರತೆಯಿಲ್ಲ: ಹಿಂದೆ ಅಮೆರಿಕಾಖಂಡವನ್ನೂ ಕೊಲಂಬಸ್ಸೆಂಬ ನಾವಿಕನು ಕಂಡು ಹಿಡಿಯುವುದಕ್ಕೆ ಮುಂಚೆ ಯೂರೋಪುಖಂಡದಲ್ಲಿದ್ದವರೂ ಸಹ, ಭೂಮಿಯು ಗೋಳಾಕಾರವಾಗಿಯಲ್ಲದೆ ತಟ್ಟೆಯಂತೆ ಚಪ್ಪಟೆಯಾಗಿಯೇ ಇದೆಯೆಂದೂ, ನಮ್ಮ ಕಣ್ಣೆದುರಿಗಿರುವ ಸ್ವಲ್ಪಪ್ರದೇಶವಲ್ಲದೆ ಮುಂದೆ ಭೂಭಾಗವೇ ಇಲ್ಲವೆಂದೂ ತಿಳಿದಿದ್ದರು. ಈಗಿನವರು ಚರ್ಮಚಕ್ಷುಗಳಿಂದ ನೋಡಿ ತಿಳಿಯುವುದಕ್ಕಿಂತಲೂ ಅತಿಶಯವಾದ ಅನಂತ ವಿಚಾರಗಳನ್ನು ಯೋಗಸಾಮರ್ಥ್ಯದಿಂದ ತಿಳಿಯುವ ಜ್ಞಾನಚಕ್ಷುಗಳನ್ನು ನಮ್ಮ ಪೂರ್ವಿಕರು ಪಡೆದಿದ್ದರು ಎಂಬ ನಂಬಿಕೆಯನ್ನುಳ್ಳವರು, ನಮ್ಮ ಶಾಸ್ತ್ರಗಳಲ್ಲಿ ಹೇಳಿರುವ ಹಲವು ವಿಚಾರಗಳನ್ನು ಸಹಜವೆನ್ನಲು ಅಭ್ಯಂತರವಿಲ್ಲ.–ಹಾಗಲ್ಲದೆ, ಕೇವಲ ಪ್ರತ್ಯಕ್ಷವಾದುದನ್ನು ಮಾತ್ರವೇ ನಂಬುತ್ತೇವೆಂದು ಛಲಮಾಡುವವರನ್ನಾದರೂ ನಾವು ದ್ವೇಷಿಸಲು ಕಾರಣವಿಲ್ಲ-ದೂಷಿಸುವುದೂ ಇಲ್ಲ. ಏಕೆಂದರೆ ಅವರೂ ಇಂದಲ್ಲ ನಾಳೆ ನಂಬಲೇ ಬೇಕಾಗುವುದು,

ಪಾಶ್ಚಾತ್ಯ ವಿದ್ವಾಂಸರು ಮಹತ್ಶೋಧಗಳನ್ನು ನಡೆಸಿ ಈಗೀಗ-ಆರ್ಯಋಷಿಗಳು ಸಹಸ್ರಾರು ವರ್ಷಗಳಹಿಂದೆಯೇ ಹೇಳಿದ್ದ ಸಂಗತಿಗಳಲ್ಲಿ ಒಂದೊಂದನ್ನಾಗಿ ಸತ್ಯವೆಂದು ಸ್ಥಾಪಿಸುತ್ತಿದ್ದಾರೆಯಲ್ಲವೆ! ಬಾಲಪಾಠದ ಈ ಕಾಲವೂ ಕಳೆಯಬೇಕಷ್ಟೆ! ಬಾಲಪಾಠವೇ ನಡೆಯದಿರುವಾಗ ಪ್ರೌಢವಿಚಾರಗಳಲ್ಲಿ ಪ್ರವೇಶವಾದರೂ ಹೇಗುಂಟಾದೀತು !

ನಮ್ಮ ಪುರಾಣಾದಿಗಳಲ್ಲಿ ಹೇಳಿರುವ ಅತಲ ವಿತಲ ಸುತಲ ರಸಾತಲ ತಲಾತಲ ಮಹಾತಲ ಪಾತಾಲಗಳೆಂಬ ಅಧೋಲೋಕಗಳೂ ಭೂಲೋಕ ಭುವರ್ಲೋಕ ಸುವರ್ಲೋಕ ಜನೋಲೋಕ ತಪೋಲೋಕ ಮಹೋಲೋಕ ಸತ್ಯಲೋಕಗಳೆಂಬ ಏಳು ಊರ್ಧ್ವಲೋಕಗಳೂ ಅಷ್ಟದಿಗ್ಗಜಗಳೂ ಜ್ಯೋತಿಶ್ಚಕ್ರಾದಿಗಳೂ, ನವಗ್ರಹಗಳೂ, ಏಕಾದಶ ರುದ್ರರೂ, ದ್ವಾದಶಾದಿತ್ಯರೂ ಮುಂತಾದುವುಗಳೆಂದರೇನೆಂಬುದೂ ಅವುಗಳಲ್ಲಡಗಿರುವ ಅಗಾಧತತ್ವಗಳೇನೆಂಬುದೂ ಇನ್ನೂ ಅದೃಶ್ಯವಾಗಿರುವುದರಿಂದ ಅದು ಅಲೌಕಿಕ ವಿಚಾರವೆಂದೇ ಹಲವರ ಮತವಿದೆ. ಇವುಗಳ ವಿಷಯದಲ್ಲಿ ನಮ್ಮ ಪೂರ್ವಿಕರು ನಡೆಸಿದ್ದ ಶೋಧಗಳನ್ನು ಪಾಶ್ಚಾತ್ಯರ ವಿವಿಧ ಪರಿಶ್ರಮಗಳ ಫಲವಾಗಿ ಇಷ್ಟುದಿನಗಳವರೆಗೆ ನಡೆದಿರುವ ಶೋಧದೊಂದಿಗೂ ಅದರಿಂದ ಲಭ್ಯವಾಗಿರುವ ಫಲದೊಂದಿಗೂ ಹೋಲಿಸಿ ನೋಡುವುದಾದರೆ, ಇದನ್ನು ಕೇವಲ ಅಕ್ಷರಾಭ್ಯಾಸಸ್ಥಿತಿ ಎಂಬುದರಲ್ಲಿ ಅನ್ಯಾಯ ತೋರುವುದಿಲ್ಲ. ವಸ್ತುಸ್ಥಿತಿಯು ಹೀಗಿರುವುದರಿಂದ ಇದನ್ನು ಕುರಿತು ಹೆಚ್ಚು ವಿಚಾರವು ಈಗ ಅಪ್ರಕೃತವು!

ಪೂರ್ವಯುಗದಲ್ಲ ಸ್ವಾಯಂಭುವ ಮನುವು ಭೂಗೋಳದ ಆಧಿಪತ್ಯವನ್ನು ಪಡೆದಿದ್ದನು. ಆತನಿಗೆ ಪ್ರಿಯವ್ರತ ಉತ್ತಾನಪಾದ ಎಂಬಿಬ್ಬರು ಪುತ್ರರು. ಉತ್ತಾನಪಾದರಾಜನ ಮಕ್ಕಳೇ ಧ್ರುವ ಉತ್ತಮರೆಂಬುವರು. ಪ್ರಿಯವ್ರತನು ಏಳುಮಂದಿ ಮಕ್ಕಳನ್ನು ಪಡೆದನು. ಅವರಲ್ಲಿ ಹಿರಿಯನಾದ ಅಗ್ನೀಧ್ರನು ಧರ್ಮದಿಂದ ಜಂಬೂದ್ವೀಪವನ್ನಾಳಿ ಭೂಮಿಯನ್ನು ಸ್ವರ್ಗದಂತೆ ಸುಖಪ್ರದವನ್ನಾಗಿಸಿದ್ದನು. ಈತನಿಗೆ ಪೂರ್ವಚಿತ್ತಿಯೆಂಬ ದೇವಾಂಗನೆಯು ಪತ್ನಿಯಾಗಿ ಆಕೆಯಲ್ಲಿ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ್ತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ, ಕೇತುಮಾಲ ಎಂಬ ಒಂಬತ್ತು ಮಂದಿಮಕ್ಕಳು ಜನಿಸಿದರು. ಈ ಒಂಬತ್ತು ಮಂದಿ ಮಕ್ಕಳಿಗೆ ಜಂಬೂದ್ವೀ

ಪದ ವಿಶಾಲ ಭೂಭಾಗವು ಒಂಬತ್ತು ಭಾಗವಾಗಿ ಹಂಚಿಕೊಡಲ್ಪಟ್ಟಿತು. ಆ ಒಂಬತ್ತು ಭಾಗಗಳೂ ಅವರ ಹೆಸರುಗಳಿಂದಲೇ ಪ್ರಸಿದ್ಧವಾದುವು. ಈ ನಾಭಿ ರಾಜನಿಗೆ ಭಗವದನುಗ್ರಹದಿಂದ ಋಷಭನೆಂಬ ಪುತ್ರಶ್ರೇಷ್ಠನು ಉದಯಿಸಿ ಭೂಮಿಯನ್ನು ಪಾಲಿಸಿದನು. ಈತನ ಹಿರಿಯಮಗನೇ ಭರತ ಮಹಾರಾಯನು. ಈ ಭರತ ಮಹಾರಾಜನು ಮಹಾಭಗವದ್ಭಕ್ತನೂ, ಸಾಧುಸಂತರಲ್ಲಿ ಅತ್ಯಂತ ಅಭಿಮಾನಿಯೂ ನಿಷ್ಠನೂ ತತ್ವಜ್ಞಾನಿಯೂ ಆಗಿ ಭೂಮಿಯನ್ನು ಧರ್ಮದಿಂದ ಪಾಲಿಸಿದನು. ಆತನ ರಾಜ್ಯಪಾಲನೆಯಲ್ಲಿ ಭೂಮಿಯು ಸಕಲ ಸಸ್ಯಸಮೃದ್ಧಿಯಿಂದ ಸುವರ್ಣವೃಷ್ಟಿಯನ್ನು ಹೊಂದಿದಂತೆ ಸೌಭಾಗ್ಯಯುಕ್ತವಾಗಿ ಕಂಗೊಳಿಸುತ್ತಿದ್ದಿತು. ಆತನ ರಾಜ್ಯದಲ್ಲಿ ಸತ್ಯ ಧರ್ಮ ನ್ಯಾಯ ಪಾಲನೆಗೆ ಲೇಶವೂ ಲೋಪವುಂಟಾಗದೆ ಸುಳ್ಳು ಕಳ್ಳತನ ಮೋಸ ಕಾಪಟ್ಯಾದಿಗಳ ಹುಟ್ಟಡಗಿ ಲೋಕವು ಶಾಂತಿಸಮಾಧಾನಗಳ ತೌರುಮನೆಯೋ ಎಂಬಂತೆ ಪ್ರಕಾಶಿಸಿತು. ಭರತರಾಜರ್ಷಿಯು, ವಿಶ್ವರೂಪನೆಂಬ ರಾಜನ ಮಗಳಾದ ಪಂಚಜನಿ ಎಂಬ ಕನ್ಯಾಶಿರೋಮಣಿಯನ್ನು ಲಗ್ನವಾಗಿ ಆಕೆಯಲ್ಲಿ ಸುಮತಿ, ರಾಷ್ಟ್ರಭೃತ್, ಸುದರ್ಶನ, ಆಚರಣ, ಧೂಮುಕೇತು ಎಂಬ ಐದು ಮಂದಿ ಮಕ್ಕಳನ್ನು ಪಡೆದು, ತನ್ನ ಸದ್ಗುಣ ಸದಾಚರಣೆಗಳಿಂದ ಧರೆಯನು ರಂಜಿಸಿದನು.



## ಅಧ್ಯಾಯ. ೨ "ಹರಿಣಶಿಶು"

ಮಹಾವಂಶ ಸಂಭೂತನಾದ ಭರತರಾಜರ್ಷಿಯು ತನ್ನ ಪಿತೃಪಿತಾಮಹರ ಆಚರಣೆಗಳಿಗೆ ಲೇಶಮಾತ್ರವೂ ಕುಂದುಂಟಾಗದಂತೆ ಸಮಸ್ತ ವಿಧವಾದ ಯಜ್ಞಯಾಗಾದಿಗಳನ್ನೂ ನೆರವೇರಿಸಿದನು. ಭಗವತ್ಪ್ರೀತ್ಯರ್ಥವಾಗಿ ಅನೇಕ ವ್ರತನಿಯಮಾದಿಗಳನ್ನೂ ಆಚರಿಸಿದನು. ಗೋದಾನ ಭೂದಾನ ಹಿರಣ್ಯದಾನ ಕನ್ಯಾದಾನಾದಿಗಳನ್ನು ಯೋಗ್ಯಪಾತ್ರಗಳಿಗಿತ್ತು, ತನ್ನ ಅಪಾರ ಐಶ್ವರ್ಯಕ್ಕೆ ಸಾರ್ಥಕತೆಯನ್ನುಂಟುಮಾಡಿದನು. ಪ್ರಜಾಪಾಲನೆಯೆಂಬುದು ಆತನಿಗೆ ಪ್ರೌಢಿಮೆ ಪ್ರತಿಷ್ಠೆಗಳನ್ನು ತಂದೀಯುವ ಒಂದು ಸಾಧನವೆಂದಲ್ಲ ಅವು ಭಗವತ್ಸೇವಾರೂಪವಾದ ಒಂದು ಪವಿತ್ರ ಕರ್ಮವೆಂಬುದೇ ಆತನ ಭಾವನೆಯಾಗಿದ್ದಿತು. ಅದ್ಯಂತ ಭರತವರ್ಷದ ಏಕಮಾತ್ರ ಅಧಿಪತಿಯಾಗಿದ್ದ

ಆತನು ತನ್ನ ಅಪಾರ ಐಶ್ವರ್ಯವನ್ನು ತನ್ನ ಸುಖೋಪಭೋಗಕ್ಕಾಗಿಯುಲ್ಲದೆ-ಇಂದ್ರಿಯ ತೃಪ್ತಿಗಾಗಿಯುಲ್ಲದೆ, ಕೇವಲ ಪ್ರಜಾಪಾಲನೆಗೆಂದೇ ಉಪಯೋಗಿಸಿ ಅದರಿಂದಲೇ ತೃಪ್ತಿಶಾಂತತೆಗಳನ್ನು ಹೊಂದುವನು. ದಯಾಮಯನೇ ಆದರೂ ದುಷ್ಟಶಿಕ್ಷಣೆ ಶಿಷ್ಟರಕ್ಷಣೆ ಧರ್ಮಸ್ಥಾಪನೆಗಳಲ್ಲಿ ದಕ್ಷನೂ ಆಗಿದ್ದು ಆ ಮಹಾತ್ಮನು ನಳ ಮಾಂಧಾತ ಭಗೀರಥ ಹರಿಶ್ಚಂದ್ರರಂತೆ ಯಶೋವಂತನಾಗಿ ಭೂಮಿಯನ್ನಾಳಿ ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿದನು. ಆ ಮಹಾಪುರುಷನ ಆಳ್ವಿಕೆಗೊಳಪಟ್ಟಾಗಿನಿಂದಲೇ ಈ ನಮ್ಮ ಮಾತೃಭೂಮಿಯು, ಭರತವರ್ಷ- ಭರತಖಂಡ ಎಂದು ಪ್ರಶಸ್ತಿಯನ್ನು ಪಡೆಯಲಾರಂಭವಾದುದು.

ಹೀಗೆ ಅನೇಕಕಾಲ ರಾಜ್ಯವಾಳಿದ ಮೇಲೆ ತನ್ನ ಮಕ್ಕಳಿಗೆ ರಾಜ್ಯಾಧಿಪತ್ಯವನ್ನು ವಹಿಸಿ ತರುವಾಯ ಕೇವಲ ನಿಷ್ಕಾಮಭಾವನೆಯಿಂದ ಭಗವತ್ಸೇವೆಯೆಂದು, ಲೌಕಿಕದ ಸಮಸ್ತ ಕಾರ್ಯಗಳನ್ನೂ ಸಾಗಿಸುತ್ತಿದ್ದ ಆ ಮಹಾನುಭಾವನಿಗೆ ಕರ್ಮವಾಸನೆಯು ಸಂಪೂರ್ಣವಾಗಿಯೂ ನೀಗಿಹೋಯಿತು. ಕಾಮಕ್ರೋಧಾದಿ ಅರಿಷಡ್ವರ್ಗಗಳ ಕಾಟವು ತಪ್ಪಿ ಹೃದಯವು ಪರಿಶುದ್ಧವಾಯಿತು. ಮನಸ್ಸಿನಿಂದ ಅಭಿಮಾನ ಅಹಂಕಾರಾದಿಗಳು ಓಡಿಹೋಗಿ ಚಿತ್ತ ಶಾಂತತೆಯು ನಿಶ್ಚಲಗೊಂಡಿತು. ಹೀಗೆ ಶುದ್ಧವಾದ ಮನಸ್ಸಿನಿಂದ ಆತನು, ಲೋಕನಾಯಕನ ಪಾದಕಮಲಗಳಲ್ಲಿ ಅನನ್ಯ ಭಕ್ತಿಭಾವವನ್ನಿಟ್ಟು ಧ್ಯಾನಮಾಡಸಾಗಿದನು. ಕ್ರಮಕ್ರಮವಾಗಿ ಧ್ಯಾನನಿಷ್ಠೆಯು ಬಲಗೊಂಡಿತು. ಭಗವನ್ನಾಮಪಠನೆಯಲ್ಲಿ ಸಿದ್ಧಿಯು ನೆಲೆಗೊಂಡೊಡನೆಯೆ ಭಗವನ್ಮೂರ್ತಿಯ ದಿವ್ಯ ಸ್ವರೂಪವು ಆತನ ಹೃದಯಕಮಲದಲ್ಲಿ ನೆಲೆಸಿತು. ದಿವ್ಯ ಪೀತಾಂಬರಧಾರಿಯೂ, ಶ್ರೀವತ್ಸ, ಕೌಸ್ತುಭ, ವನಮಾಲಿಕೆಗಳನ್ನೂ ಶಂಖ ಚಕ್ರ ಗದಾ ಪದ್ಮಾದಿಗಳನ್ನೂ ಧರಿಸಿದ ಮನೋಹರ ಮೂರ್ತಿಯೂ ಆದ ಶ್ರೀಮನ್ನಾರಾಯಣನ ದಿವ್ಯಮಂಗಳ ವಿಗ್ರಹವನ್ನು ಸಾಕ್ಷಾತ್ಕರಿಸಿಕೊಂಡು ಆ ರಾಜರ್ಷಿಶ್ರೇಷ್ಠನು ಪರಮಾನಂದಗೊಂಡನು. ಧ್ಯಾನಾಸಕ್ತನಾಗಿ ಅರೆಮುಚ್ಚಿದ ನೇತ್ರಗಳಿಂದ - ಹೃದಯಾಂತರ್ವರ್ತಿಯಾದ ಶ್ರೀಮನ್ನಾರಾಯಣನ ದಿವ್ಯಸ್ವರೂಪದರ್ಶನಾನಂದದಿಂದ ಧಾರೆಧಾರೆಗಳಾಗಿ ಬಾಷ್ಪಗಳನ್ನು ಸುರಿಸುತ್ತ, ಗದ್ಗದ ಸ್ವರದಿಂದ ಭಗವನ್ನಾಮ

ಗಳನ್ನುಚ್ಚರಿಸುತ್ತ ಇರುವನು. ಹೀಗೆ ಹತ್ತು ಸಾವಿರ ವರ್ಷಗಳಕಾಲ ಸತ್ಕಾರ್ಯಗಳಲ್ಲಿ ನಿರತನಾಗಿದ್ದು - ತರುವಾಯ ಕುಲಕ್ರಮಾಗತವಾಗಿ ಬಂದ ತನ್ನ ವಿಶಾಲ ರಾಜ್ಯವನ್ನು ತನ್ನ ಮಕ್ಕಳಿಗೆ ಹಂಚಿಕೊಟ್ಟನು. ಸಕಲೈಶ್ವರ್ಯ ಸಂಪೂರ್ಣವಾಗಿದ್ದ ರಾಜಗೃಹವನ್ನು ಬಿಟ್ಟು ಹೊರಟು ಚಕ್ರನದೀತೀರದಲ್ಲಿದ್ದ ಸಾಲಗ್ರಾಮಕ್ಷೇತ್ರವೆಂಬ ಸ್ಥಳಕ್ಕೆ ಬಂದು, ಅಲ್ಲಿ ಏಕಾಕಿಯಾಗಿ ವಾಸಿಸಿದನು. ನಿತ್ಯವೂ ಬ್ರಾಹ್ಮೀಮುಹೂರ್ತಕ್ಕೆ ಸರಿಯಾಗಿ ಎದ್ದು ಪವಿತ್ರಜಲವುಳ್ಳ ಆ ಚಕ್ರನದಿಯಲ್ಲಿ ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು, ಪಕ್ಕದಲ್ಲಿದ್ದ ಶಿಲಾಮಂಟಪಗಳಲ್ಲಿ ಕುಳಿತು ಜಪತಪನಿತ್ಯಕರ್ಮಾನುಷ್ಠಾನಗಳನ್ನು ನೆರವೇರಿಸಿ, ನದೀತೀರದಲ್ಲೇ ನಿಬಿಡವಾಗಿ ಬೆಳೆದಿದ್ದ ಬಗೆಬಗೆಯ ಪುಷ್ಪಗಳು, ತುಲಸೀದಳಗಳು, ಗೆಡ್ಡೆಗೆಣಸುಗಳು, ಮಧುರಫಲಗಳು ಇವುಗಳನ್ನು ಸಂಗ್ರಹಿಸಿ ತಂದು ಶ್ರೀಮನ್ನಾರಾಯಣನ ಪಾದಕಮಲಗಳನ್ನರ್ಚಿಸಿ, ಆ ದೇವದೇವನ ಕಲ್ಯಾಣಗುಣಗಳನ್ನು ಬಗೆಬಗೆಯಿಂದ ಭಜಿಸಿ ಪರಮಾನಂದದಿಂದ ಕಾಲ ಕಳೆಯುವನು. ಫಲಮೂಲಾದಿ ಸತ್ವಮಯ ಪದಾರ್ಥಗಳನ್ನೇ ದೇಹಧಾರಣೆಯ ಮಟ್ಟಿಗೆ ಆಹಾರವಾಗಿ ಸ್ವೀಕರಿಸುತ್ತ ಸದಾ ಭಗವತ್ಸಂಬಂಧ ಯೋಚನೆಗಳಲ್ಲೇ ನಿರತನಾಗಿದ್ದ ಆ ರಾಜರ್ಷಿಯ ಕಡೆ ವಿಷಯಾಭಿಲಾಷೆಗಳು ಇಣಿಕಿನೋಡದಂತೆ ಓಡಿಹೋದುವು. ಇಂದ್ರಿಯಾದಿಗಳು ಜಯಿಸಲ್ಪಟ್ಟುವು. ಭಗವಂತನಲ್ಲಿ ಅಪೂರ್ವ ಅನುರಾಗವುಂಟಾಯಿತು. ಅದರ ಫಲವಾಗಿ ಆತನ ಹೃದಯಕವಾಟವು ತೆರೆದಂತಾಗಿ ಅಲ್ಲಿಂದ ಪ್ರಪಂಚದಮೇಲೆ ಪ್ರೇಮಪ್ರವಾಹವು ಹರಿಯಲಾರಂಭಿಸಿತು. ಯಾವುದೊಂದು ಪ್ರಾಣಿಯು ಕಷ್ಟಕ್ಕೆ ಸಿಕ್ಕಿದ್ದರೂ - ಸಂಕಟಪಡುತ್ತಿದ್ದರೂ, ಆ ದಯಾಮಯನು ಅದರ ಕಷ್ಟದುಃಖಗಳೊಂದಿಗೆ ಸಹಾನುಭೂತಿಯನ್ನು ತೋರಿಸಿ, ತಾನೂ ಕಣ್ಣೀರಿಟ್ಟು ಅದರ ಆ ಕಷ್ಟವನ್ನು ತೊಲಗಿಸಲು ತನ್ನ ಕೈಯಲ್ಲಾದ ಸಹಾಯವನ್ನೆಲ್ಲ ಮಾಡುವನು. ಹೀಗೆ ಪರೋಪಕಾರ ಬುದ್ಧಿಯೂ - ಪ್ರಾಣಿವರ್ಗದ ಮೇಲೆ ಅಪಾರಪ್ರೇಮವೂ ನೆಲೆಗೊಂಡಿತು. ಆದರೆ ಅದು ನಿರ್ಜನಸ್ಥಳವಾಗಿ, ಆತನ ಸೇವಾಭಿಲಾಷೆಯನ್ನು ಪೂರ್ತಿಗೊಳಿಸಿಕೊಳ್ಳಲು ಅಲ್ಲಾರೂ ಇಲ್ಲದಿದ್ದುದರಿಂದ ರಾಜನು ಕೇವಲ ಭಗವಧ್ಯಾನದಿಂದಲೇ ಸಂತುಷ್ಟನಾಗಬೇಕಾಗುತ್ತಿತ್ತು. ನಿತ್ಯವೂ ಸೂರ್ಯೋದಯವಾದೊಡನೆಯೇ ಜ್ಯೋತಿರ್ಮಂಡಲಕ್ಕೆ ಅಭಿಮು

ಖವಾಗಿ ನಿಂತು ಕೈಮುಗಿದುಕೊಂಡು,— 'ಯಾವ ದೇವೋತ್ತಮನು ತನ್ನ ಸಂಕಲ್ಪ ಮಾತ್ರದಿಂದಲೇ ಸಮಸ್ತ ಜಗತ್ತನ್ನೂ ಸೃಷ್ಟಿಸಿ, ತಾನೂ ಜೀವನ ಮೂಲಕವಾಗಿ ಆದರಲ್ಲಿ ಪ್ರವೇಶಿಸಿ, ಅದನ್ನು ಆಯಾ ಕಾರ್ಯಗಳಲ್ಲಿ ಪ್ರೇರಿಸುವನೋ ಅಂತಹ ಶ್ರೀಮನ್ನಾರಾಯಣನ ತೇಜೋಮಯವಾದ ಈ ರೂಪವನ್ನು ಶರಣುಹೊಂದುವೆನು. ಮತ್ತು ಯಾವಾತನು-ಆ ಜೀವನು ದುರ್ವಿಷಯಗಳಲ್ಲಿ ಪ್ರೇರಿಸತಕ್ಕ ಬುದ್ಧಿಗೆ ವಶನಾಗಿ ದುಷ್ಕರ್ಮಗಳನ್ನು ನಡೆಸಿ, ಅವುಗಳಿಗೆ ತಕ್ಕ ಫಲಗಳನ್ನೂ ನರಕಾದಿಗಳ ಯಾತನೆಗಳನ್ನೂ ಅನುಭವಿಸುವನೋ ಆಗಲೂ ಅಂತರಾತ್ಮನಾಗಿದ್ದು ಅವನ ವ್ಯಾಪಾರಗಳನ್ನು ನೋಡುತ್ತಿರುವನೋ, ಮತ್ತಾವನು ಜಗತ್ಕಾರಣಭೂತನೋ, ಪ್ರಕೃತಿಮಂಡಲಕ್ಕಿಂತಲೂ ಹೊರಗೆ ಪ್ರಕಾಶಿಸುತ್ತಿರುವ ಅಪಾರತೇಜೋಮಹಿಮಾಶಾಲಿಯಾದ ಆ ಪರಮಪುರುಷನಿಗೆ ನಮಸ್ಕರಿಸುವೆನು.' ಕೇವಲ ಜ್ಞಾನಮಯವೂ ಲೋಕರಕ್ಷಕವೂ ಆದ ಈ ರೂಪವನ್ನು ಶರಣುಹೊಗುವೆನು." ಎಂದು ಧ್ಯಾನಿಸಿ ಪೂಜಿಸುವನು.

ಒಮ್ಮೆ ಆ ರಾಜರ್ಷಿಯು ಬ್ರಾಹ್ಮೀಮುಹೂರ್ತದಲ್ಲಿ ಚಕ್ರತೀರ್ಥದಲ್ಲಿ ಸ್ನಾನವನ್ನಾಚರಿಸಿ, ದಡದ ಕಲ್ಲಮೇಲೆ ಕುಳಿತು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪ್ರಣವಮಂತ್ರ ಜಪದಲ್ಲಿ ತೊಡಗಿದ್ದನು. ಹೀಗೆ ಮೂರು ಮುಹೂರ್ತ ಕಾಲದವರೆಗೆ ಮಂತ್ರ ಜಪವು ನಡೆವ ವೇಳೆಗೆ ಸಂಪೂರ್ಣ ಗರ್ಭವಂತವಾಗಿದ್ದ ಒಂದು ಹೆಣ್ಣು ಜಿಂಕೆಯು, ರಾಜನು ಕೂತಿದ್ದ ಸ್ಥಳಕ್ಕೆ ನೇರವಾಗಿ ಎದರು ದಡಕ್ಕೆ ಬಂದು ನೀರುಕುಡಿಯಲಾರಂಭಿಸಿತು. ಬಹು ಬಾಯಾರಿಕೆಯಿಂದ ಬಂದ ಆ ಜಿಂಕೆಯು ಒಂದು ಗುಟುಕು ನೀರನ್ನು ಕುಡಿಯಿತೆಂಬ ವೇಳೆಗೆ, ಮುಂಗಾರು ಕಾಲದ ಗುಡುಗಿನಂತೆ ಕರ್ಣ ಕಠೋರವಾದ ಒಂದು ಭಯಂಕರ ಶಬ್ದವು ಕೇಳಿಸಿತು. ಭಯಕ್ರಾಂತವಾದ ಆ ಜಿಂಕೆಯು ಒಡನೆ ತಲೆಯೆತ್ತಿ ತತ್ತರಗೊಂಡು ನಾಲ್ಕು ದಿಕ್ಕುಗಳನ್ನೂ ನೋಡಸಾಗಿತು. ಆ ವೇಳೆಗೆ ಮತ್ತೊಂದು ವೇಳೆ ಅದೇ ಬಗೆಯ ಸಿಂಹ ಗರ್ಜನೆಯು ಕಿವಿಯನ್ನು ಕೊರೆದುಕೊಂಡು ಹೋಗುವಂತೆ ಕೇಳಿಸಲು ಜಿಂಕೆಯು ಪ್ರಾಣಭಯದಿಂದ ತಾನು ನಿಂತಿದ್ದ ಸ್ಥಳದಿಂದ ಒಂದೇ ನೆಗೆತಕ್ಕೆ ಹಾರಿ ಎದರು ದಂಡೆಗೆ ಬಿದ್ದಿತು. ಪೂರ್ಣ ಗರ್ಭಿಣಿಯಾಗಿದ್ದುದರಿಂದಲೂ

ನಿಂತಿದ್ದ ಸ್ಥಳದಿಂದ ಏಕಾಯೇಕಿ ಬಲವಂತವಾಗಿ ನೆಗೆದುದರಿಂದಲೂ, ಅದರ ಗರ್ಭವು ಸ್ವಸ್ಥಳದಿಂದ ಕದಲಿ ಹಾರುತ್ತಿದ್ದ ಸಂದರ್ಭದಲ್ಲೇ ಕೆಳಕ್ಕೆ ನೀರಿನೊಳಕ್ಕೆ ಬಿತ್ತು. ಅಷ್ಟರಲ್ಲಿ ಈಚೆಯ ದಡಕ್ಕೆ ಬಿದ್ದಿದ್ದ ಜಿಂಕೆಯೂ ಭಯ ಆಯಾಸಗಳಿಂದ ಕೇವಲ ನಿಶ್ಯಕ್ತವಾಗಿ ನೆಲಕ್ಕೆ ಬಿದ್ದು-ಹಾಗೇ ಒರಗಿ ಪ್ರಾಣಬಿಟ್ಟಿತು. ಇತ್ತ ನೀರಿನೊಳಕ್ಕೆ ಬಿದ್ದ ಆ ಹರಿಣಶಿಶುವು ಮಾತ್ರ ಪ್ರವಾಹದಲ್ಲಿ ತೇಲಿಕೊಂಡು ಬರುತ್ತಾ, ಭರತರಾಜರ್ಷಿಯು ಕುಳಿತಿದ್ದ ಸ್ಥಳಕ್ಕೇ ಬಂದು ಬಿಟ್ಟಿತು. ಕೈಕಾಲುಗಳನ್ನು ಬಡಿಯುತ್ತಾ-ಆಗಾಗ್ಗೆ ನೀರಿನಲ್ಲಿ ಮುಳುಗುತ್ತಾ-ಬಲವಂತವಾಗಿ ಗಂಟಲಿನೊಳಕ್ಕೆ ಹೋದ ನೀರಿನಿಂದ ಆಗಾಗ ಉಸಿರು ಕಟ್ಟಿಕೊಳ್ಳುತ್ತಿರಲು ಕಣ್ಣುಕಣ್ಣು ಬಿಡುತ್ತಾ ಬಹು ಕಷ್ಟಪಡುತ್ತಿದ್ದ- ಆಗತಾನೆ ಜನಿಸಿದ ಆ ಕಂದನನ್ನು ನೋಡಿಯೂ ಅದರ ತಾಯಿಗೆ ಪ್ರಾಪ್ತವಾದ ದುಸ್ಥಿತಿಯನ್ನು ಕುರಿತೂ ರಾಜನ ಮನಸ್ಸು ಕರೆಗಿ ದ್ರವವಾಗಿ ಹೋಯಿತು. -'ಅಕಟಾ ಜನಿಸಿದೊಡನೆಯೇ ಈ ದುರ್ದೈವಿ ಪ್ರಾಣಿಯು ಎಂತಹ ಆಪತ್ತಿಗೆ ಒಳಪಟ್ಟಿತಲ್ಲ' ಎಂದುಕೊಂಡು, ರಾಜನು ತಾನು ಕುಳಿತಿದ್ದ ಸ್ಥಳದಿಂದ ಮುಂದಕ್ಕೆ ಬಾಗಿ, ತನ್ನ ಮುಂದೆಯೇ ಪ್ರವಾಹದಲ್ಲಿ ತೇಲಿಹೋಗುತ್ತಿದ್ದ ಆ ಶಿಶುವನ್ನು ಹಿಡಿದು ಮೇಲಕ್ಕೆತ್ತಿಕೊಂಡನು. ಕನಿಕರದಿಂದ ಅದರ ಮೈ ಕೈ ಕಾಲುಗಳಿಗಂಟಿದ ಗರ್ಭ ಸಂಬಂಧವಾದ ಕೊಳೆಯನ್ನೆಲ್ಲ ತೊಳೆದು ಅದನ್ನೆತ್ತಿಕೊಂಡು ಆಶ್ರಮಕ್ಕೆ ನಡೆದನು. ಹುಟ್ಟಿದೊಡನೆಯೇ ತಾಯಿಯನ್ನು ಕಳೆದುಕೊಂಡು ಪರದೇಶಿಯಾದ ಆ ಮರಿಗೆ ವಿವಿಧ ಫಲಗಳ ರಸವನ್ನೇ ಸ್ತನ್ಯಕ್ಕೆ ಬದಲಾಗಿ ಕುಡಿಸಿದನು. ಕೆಲವು ದಿನಗಳಾಗಿ ಹುಲ್ಲು ತಿನ್ನುವಂತಾದ ಮೇಲೆ, ಮೃದುವಾದ ಗರಿಕೆ ಹುಲ್ಲನ್ನು ಕೊಯ್ದು ನಾಲ್ಕು ನಾಲ್ಕೇ ಹುಲ್ಲಿನ ಎಳೆಗಳನ್ನು ಅದರ ಬಾಯೊಳಗೆ ಇಟ್ಟು ತಿನ್ನಿಸತೊಡಗಿದನು. ಆ ಮರಿಯೂ ಆಶ್ರಮವನ್ನು ಬಿಟ್ಟು ಅತ್ತಿತ್ತ ಕದಲದೆ-ಅಲ್ಲೇ ಕುಣಿದಾಡುತ್ತ ನೆಗೆದಾಡುತ್ತ, ವಿಶಾಲವಾದ ತನ್ನ ನೇತ್ರಗಳಿಂದ ಆತನನ್ನು ನೋಡಿ, ಮೃದುವಾದ ತನ್ನ ನಾಲಿಗೆಯ ತುದಿಯಿಂದ ಆತನ ಮೈ ಕೈಗಳನ್ನು ನೆಕ್ಕುತ್ತ, ಆಡುತ್ತಿರುವುದು. ರಾಜರ್ಷಿಯು ಕ್ರಮಕ್ರಮವಾಗಿ ಅದರ ಆಹಾರ ಪಾನೀಯಗಳು ಆಟಪಾಟಗಳು ಮುಂತಾದುವುಗಳಲ್ಲಿ ತೊಡಗಿ-ಅದಕ್ಕೆ ಲೇಶಮಾತ್ರವೂ ಆಯಾಸವಾಗದಂತೆ ನೋಡಿಕೊ

ಳ್ಳುವುದರಲ್ಲಿ ಆಸಕ್ತನಾದನು. ಅದು ತನ್ನ ಹೊಟ್ಟೆಯಲ್ಲಿ ಹುಟ್ಟಿ ಬಂದುದೋ ಎಂಬಂತಹ ಪ್ರೇಮಾದರಗಳು ದಿನದಿನಕ್ಕೆ ಹೆಚ್ಚು ಹೆಚ್ಚಾಗುತ್ತಿದ್ದುದರಿಂದ ಬರುಬರುತ್ತ ಅದರ ಯೋಗಕ್ಷೇಮವಲ್ಲದೆ ಮಿಕ್ಕ ಎಲ್ಲಾ ವಿಚಾರವೂ ಆತನ ಗಮನದಿಂದ ಅಳಿಸಿ ಹೋಗತೊಡಗಿತು. ಕಾಲಕಾಲಕ್ಕೆ ಆಚರಿಸಿಯೇ ತೀರಬೇಕಾಗಿದ್ದ ಸ್ನಾನಸಂಧ್ಯಾದಿಗಳೂ ಜಪತಪ ಅನುಷ್ಠಾನಾದಿಗಳೂ ಎಲ್ಲವೂ ನಿಂತುವು. ಭಗವತ್ಪೂಜೆಯೂ ಧ್ಯಾನಧಾರಣಾದಿಗಳೂ ಪ್ರಣವ ಮಂತ್ರ ಜಪವೂ ಎಲ್ಲವೂ ಆ ಹರಿಣ ಶಿಶುವಿನ ಪೋಷಣೆಯಲ್ಲೇ ಲಯವಾದುವು.

ಕಾಲವು ಹೀಗೆಯೇ ಕಳೆದು ಹೋಗುತ್ತಿರುವಾಗ ಒಂದೊಂದು ವೇಳೆ ತನ್ನ ಸ್ನಾನ ಜಪ ನಿತ್ಯಕರ್ಮಾದಿಗಳ ವಿಚಾರವು ಎಲ್ಲೋ ಸ್ವಪ್ನದೃಶ್ಯದಂತೆ ಆತನ ಜ್ಞಾಪಕಕ್ಕೆ ಬರುವುದು. ಆಗ ಆತನು- "ಅಯ್ಯೋ ಪಾಪ, ಈ ಮರಿಯು ಹುಟ್ಟಿದೊಡನೆಯೇ ತಾಯಿಯನ್ನೂ ಬಂಧುವರ್ಗವನ್ನೂ ಕಳೆದುಕೊಂಡು ಮಹಾ ವಿಪತ್ತಿಗೆ ಗುರಿಯಾಗಿ, ದೈವ ವಶದಿಂದ ನನ್ನ ಕೈಗೆ ಸಿಕ್ಕಿತಲ್ಲಾ! ಈಗ ಇದಕ್ಕೆ ದಿಕ್ಕಾರು? ಈ ಪರದೇಶಿಯು ನನ್ನನ್ನೇ ತಂದೆಯನ್ನಾಗಿಯೂ ಬಂಧುವನ್ನಾಗಿಯೂ ತಿಳಿದು ನಂಬಿರುವುದು. ಇಂತಹ ಈ ಅನಾಥ ಪ್ರಾಣಿಯನ್ನು ಸರ್ವವಿಧದಿಂದಲೂ ಪೋಷಿಸಿ ಅಭಿವೃದ್ಧಿಪಡಿಸಿ, ಲಾಲಿಸಿ ಸಂತೋಷಗೊಳಿಸಬೇಕಾದುದೇ ನನ್ನ ಕರ್ತವ್ಯವು. ಮೊರೆ ಹೊಕ್ಕವರನ್ನು ಸರ್ವ ಪ್ರಯತ್ನದಿಂದಲೂ ಪೋಷಿಸತಕ್ಕುದೇ ಪ್ರಥಮ ಧರ್ಮವೆಂದು ಆರ್ಯರು ಹೇಳುವರಲ್ಲವೆ! ದೈವಿಕವಾಗಿ-ಆಕಸ್ಮಾತ್ತಾಗಿ ನನ್ನ ಪೋಷಣೆಗೆ ಬಂದಿರುವ ಈ ಅನಾಥ ಪ್ರಾಣಿಯನ್ನು ಕಾಪಾಡದಿದ್ದರೆ ನಾನು ದೋಷಿಯಾಗುವೆನಲ್ಲವೆ?" ಎಂದು ಕೊಳ್ಳುವನು. ತಾನು ಗೆಡ್ಡೆ ಗೆಣಸುಗಳನ್ನು ತರಲು ಹೋಗುವಾಗ ಅದನ್ನೂ ಜೊತೆಗೇ ಕರೆದೊಯ್ಯುವನು. ಮಾರ್ಗದಲ್ಲಿ ಕಲ್ಲು ಮುಳ್ಳುಗಳಲ್ಲಿ ನಡೆಯಲಾರದೆಂದು ಎತ್ತಿಕೊಳ್ಳುವನು. ನಡೆದು ಆಯಾಸಗೊಂಡಿತೆಂದು ಮೈ ಕೈ ಕಾಲುಗಳನ್ನು ಒತ್ತುವನು. ಮುದ್ದಿಡುವನು. ಒಂದು ಕ್ಷಣ ಎಲ್ಲಾದರೂ ಕಣ್ಮರೆಯಾಯಿತೆಂದರೆ, ತೋಳವೋ ಹುಲಿಯೋ, ಸಿಂಹವೋ ತನ್ನ ಕಂದನನ್ನು ಕೊಂದುತಿಂದಿತೆಂದು ಹಲುಬಿಕೊಂಡು ಚಿಂತಿಸುವನು. ದಿನಕ್ಕೊಂದು ವೇಳೆ ಹೇಗೊ ಸ್ನಾನಮಾಡಿ, ಆಚಮನ- ಗಾಯಿತ್ರಿ, ಜಪ ಮುಂತಾದುಗಳನ್ನು ಆತುರದಿಂದ ಮುಗಿಸಿ

ಕೊಂಡು ಅದರೊಡನೆ ಆಟಕ್ಕೆ ಸಿದ್ಧನಾಗುವನು. ತಾನು ಮಲಗುವಾಗ ಅದನ್ನು ತನ್ನ ಮಗ್ಗುಲಲ್ಲೋ-ಎದೆಯ ಮೇಲೆಯೋ ಮಲಗಿಸಿಕೊಳ್ಳುವನು. ಅದರ ಶಿರಸ್ಸನ್ನು ಮೂಸಿನೋಡಿ-ಕೆನ್ನೆಗಳಿಗೆ ಮುತ್ತಿಕ್ಕಿ-'ನನ್ನ ಮುದ್ದು ಮರಿಯೇ, ನಿನಗೆ ಸಮಸ್ತ ಆಪತ್ತುಗಳೂ ಪರಿಹಾರವಾಗಿ, ಸರ್ವಕಾಲ ಸರ್ವಾವಸ್ಥೆಗಳಲ್ಲೂ ಕ್ಷೇಮವೇ ಉಂಟಾಗಲಿ' ಎಂದು ಆಶೀರ್ವದಿಸುವನು.

ಹೀಗಿರುತ್ತಿರಲು ಒಂದು ವೇಳೆ ಆ ಮರಿಯು ಅಕಸ್ಮಾತ್ತಾಗಿ ಎಲ್ಲೋ ಕಾಣಿಸದೆ ಹೊರಟು ಹೋಯಿತು. ರಾಜರ್ಷಿಯು ಮಹಾ ಚಿಂತಿಗೆ ಒಳಗಾಗಿ ಆಶ್ರಮದ ಒಳಗು ಹೊರಗು ಸ್ಥಳಗಳಲ್ಲೂ ಸಮೀಪದ ನದೀತೀರದಲ್ಲೂ ಗುಡ್ಡಗುಹೆಗಳಲ್ಲೂ ಅದನ್ನು ಹುಡುಕಿ ಹಣ್ಣಾದನು. ಹತ್ತಿರದ-ದೂರದ ಅನೇಕ ಸ್ಥಳಗಳಲ್ಲೂ ಅಲೆದು ಆಯಾಸಗೊಂಡನು. -'ಅಯ್ಯೋ, ಹುಲಿ ಸಿಂಹ ತೋಳ ಚಿರತೆ ಮೊದಲಾದ ಯಾವ ದುಷ್ಟ ಮೃಗದ ಬಾಯಿಗೆ ತುತ್ತಾಯಿತೋ-ನನ್ನ ಮರಿಯು ಎಲ್ಲಿ ಪ್ರಾಣವನ್ನು ನೀಗಿತೋ, ಅಕಟಾ, ನನ್ನಾ ಮುದ್ದು ಕಂದಸಿಗೆ ಏನಪಾಯ ಒದಗಿತೋ' ಎಂದು ವಿಲಪಿಸತೊಡಗಿದನು. ಅದು ತನ್ನೊಂದಿಗೆ ಆಡಿದ ಹಲವು ಬಗೆಯ ಆಟಪಾಟಗಳನ್ನು ನೆನೆಸಿಕೊಂಡು ಹಲುಬಿದನು. ಅಲ್ಲಲ್ಲೆ ಆಶ್ರಮ ಪ್ರಾಂತದಲ್ಲಿ ನೆಲದಲ್ಲಿ ಮೂಡಿದ್ದ ಅದರ ಪಾದಚ್ಛಾಯೆಗಳನ್ನು ಕಂಡು, ಪುನಃ ಪುನಃ ಅದರ ಪುಟ್ಟಪುಟ್ಟ ಪಾದಗಳನ್ನೂ, ಅದರ ಎಸಳಾದ ಕಾಲುಗಳನ್ನೂ ಸೂಕ್ಷ್ಮವಾದ ದೇಹವನ್ನೂ, ಚುಕ್ಕೆಚುಕ್ಕೆಯಿಂದ ಮನೋಹರವಾದ ದೇಹ ಕಾಂತಿಯನ್ನೂ ವಿಶಾಲವಾದ ತೇಜಸ್ವಿ ನೇತ್ರಗಳನ್ನೂ ಜ್ಞಾಪಿಸಿಕೊಳ್ಳುವನು. ಅದು ಆಡುತ್ತಿದ್ದ ಓಡುತ್ತಿದ್ದ ಮಲಗುತ್ತಿದ್ದ ಸ್ಥಳಗಳನ್ನು ನೋಡಿನೋಡಿ ಅದನ್ನು ಜ್ಞಾಪಿಸಿಕೊಂಡು- ನವನಿಧಿಗಳನ್ನೂ ಕಳೆದುಕೊಂಡ ಪ್ರಾಪಂಚಿಕನಂತೆ ಹತಾಶನಾಗಿ ಕುಳಿತುಕೊಳ್ಳುವನು. ಹಲವು ಬಾರಿ ನಿಟ್ಟುಸಿರು ಬಿಡುವನು. ಅವಿರಳವಾಗಿ ಕಣ್ಣೀರು ಸುರಿಸುವನು. ತಲೆಯ ಮೇಲೆ ಕೈ ಹೊತ್ತು ಕುಳಿತು ಅಂತರಿಕ್ಷವೇ ಕುಸಿದು ತಲೆಯಮೇಲೆ ಬಿದ್ದಿತೋ ಎಂಬಂತೆ ಅಂತ್ಯಪಾರಗಳನ್ನು ಕಾಣದ ಚಿಂತೆಯಿಂದ ಮುಂದೆ ಮಾಡುವ ಕಾರ್ಯವೇನೆಂದು ತೋರದೆ, ಸ್ತಬ್ಧನಾಗಿ ಕಾಲಯಾಪನೆ ಮಾಡತೊಡಗಿದನು.

ಜಿಂಕೆಯ ಮರಿಯು ಆತನನ್ನು ಬಿಟ್ಟು ಹೋದ ಮೇಲೆಯಾದರೂ

ಭರತರಾಜರ್ಷಿಯ ಸ್ನಾನಸಂಧ್ಯೆ ಜಪತಪ ನಿತ್ಯಕರ್ಮಾದಿಗಳ ಸ್ಥಿತಿಯು ಏನೂ ಸುಧಾರಣೆಗೊಳ್ಳಲಿಲ್ಲ. ಆ ಹರಿಣಶಿಶುವಿನ ಅಗಲಿಕೆಯ ಚಿಂತೆಯು ಆತನ ದೇಹ ಮನೋಬುದ್ಧಿಗಳೆಲ್ಲಕ್ಕೂ ವ್ಯಾಪಿಸಿಬಿಟ್ಟಿತು. ಬರುಬರುತ್ತ ಅದೇ ಒಂದು ಮನೋರೋಗವಾಗಿ ಪರಿಣಮಿಸಿತು. ದೇಹದ ಶಕ್ತಿ ಸಾಮರ್ಥ್ಯಗಳು ಕುಂದಿದುವು. ಏಕಾಂಗಿಯೂ ವ್ಯಾಧಿಪೀಡಿತನೂ ಚಿಂತಾಸಕ್ತನೂ ಆದ ಆತನಿಗೆ ದೇಹಧಾರಣೆಯು ಅಸಾಧ್ಯವಾಯಿತು. ಮೃತ್ಯುವು ಸಮೀಪಿಸಿತು. ಪ್ರಾಣೋತ್ಕ್ರಮಣಾವಸ್ಥೆಯಲ್ಲಿಯೂ, ಆ ರಾಜವರೇಣ್ಯನು ಅದರ ಚಿಂತೆಯನ್ನು ಬಿಟ್ಟಿರಲು ಅಶಕ್ತನಾಗಿ—"ಅಯ್ಯೋ ನನ್ನ ಮುದ್ದು ಮರಿಯೆ, ವಿಶಾಲವಾದ ಕಣ್ಣುಗಳ ನನ್ನ ಜಿಂಕೆಯೇ, ನನ್ನ ಪ್ರಿಯ ಕಂದನೇ, ನಿನ್ನನ್ನು ಎಂದಿಗೆ ಕಂಡೇನು?' ಎಂದು ಹಲುಬಿಕೊಳ್ಳುತ್ತ - ಹೀಗೆ ಆ ಹರಿಣಶಿಶುವಿನಲ್ಲೇ ಇಟ್ಟ ಮನಸ್ಸಿನಿಂದ ಪ್ರಾಣಬಿಟ್ಟನು.



## ಅಧ್ಯಾಯ ೩ "ಬ್ರಾಹ್ಮಣಕುವರ - ಭರತ"

ಕರ್ಮದ ಸಾಮರ್ಥ್ಯವು ಬಹು ಬಲವತ್ತರವಾದುದು. ಕರ್ಮಚಕ್ರದ ಗತಿಯಲ್ಲಿ ಒಂದು ಬಾರಿ ಸಿಕ್ಕಮೇಲೆ ಅದರಿಂದ ಉಂಟಾಗುವ ಫಲವನ್ನು ಉಪಭೋಗಿಸದೆ ಬಿಡಿಸಿಕೊಳ್ಳುವುದು ಸುಲಭವಲ್ಲ. ಜೀವನು ಅವಿನಾಶಿಯಾದುದರಿಂದ ಅವನು ಮಾಡುವ ಕರ್ಮಗಳ ಫಲವಾದರೂ ಅನಂತಕಾಲದವರೆಗೆ ಉಳಿದು, ಆಯಾ ಜೀವಿಯಿಂದಲೇ ಅನುಭವಿಸಲ್ಪಟ್ಟಲ್ಲದೆ ವ್ಯಯವಾಗದು. ಹೀಗೆ ಜನ್ಮಜನ್ಮಗಳಲ್ಲಿ ಶೇಖರಿಸಲ್ಪಟ್ಟಿರುವ ಕರ್ಮರಾಶಿಗೇ ಸಂಚಿತಕರ್ಮವೆಂದು ಹೇಳುವರು. ಈ ಸಂಚಿತಕರ್ಮವೇ ಜೀವನ ಜನನ ಮರಣ ಪ್ರವಾಹದ ಉಗಮಸ್ಥಾನದಂತಿರುವುದು. ಈ ಸಂಚಿತ ಕರ್ಮದಲ್ಲಿನ ಸುಕೃತ ದುಷ್ಕೃತಗಳ ತಾರತಮ್ಯಗಳನ್ನು ತೂಗಿನೋಡಿ, ಗೊತ್ತಾದ ಒಂದು ಜನ್ಮದಲ್ಲಿ ಅನುಭವಿಸಬೇಕಾದಷ್ಟು ಕರ್ಮಫಲವನ್ನು ಪ್ರತ್ಯೇಕವಾಗಿಟ್ಟು, ಅದಕ್ಕನುಸಾರವಾಗಿ ಆ ಜೀವನು ಜನ್ಮವೆತ್ತಬೇಕೆಂದು ಕರ್ಮಾಧಿದೇವತೆಗಳು ನಿರ್ಧರಿಸುವರು. ಇದನ್ನೇ ಹಿರಿಯರು ಪ್ರಾರಬ್ಧಕರ್ಮವೆನ್ನುವರು. ಈ ಪ್ರಾರಬ್ಧಕರ್ಮವೆಂಬುದೇ ನಮ್ಮ ಪ್ರಕೃತ ಇಹಜನ್ಮವೃಕ್ಷಕ್ಕೆ ಬೀಜಸ್ವರೂಪವಾಗುವುದು. ಈ ಬೀಜವಾದರೂ, ಇದಕ್ಕೆ ಹಿಂದಿನ ಜನ್ಮದಲ್ಲಿ, ಜೀವನಲ್ಲಿ ಅತಿಶಯ

ತೀವ್ರ ಸ್ವರೂಪದಿಂದಿದ್ದ ಆಶಯ-ವಾಸನೆಗಳನ್ನನುಸರಿಸಿಯೇ ಏರ್ಪಡು ವುದು. ಆದುದರಿಂದ ಈ ಜನ್ಮದಲ್ಲಿ ಪ್ರಯತ್ನಪೂರ್ವಕ ಅನುಗಾಲವೂ ಸದಾ ಶಯಗಳನ್ನೂ ಸದ್ವಾಸನೆಗಳನ್ನೂ ಅಭ್ಯಸಿಸುತ್ತಿದ್ದ ಆ ಅಭ್ಯಾಸ ಬಲದಿಂದ ಮರಣಕಾಲದಲ್ಲೂ ಆ ಚಿಂತೆಯಿಂದಲೇ ದೇಹಬಿಟ್ಟರೆ, ಬಲವತ್ತರವಾದ ಆ ವಾಸನೆ ಆಶಯಗಳನ್ನನುಸರಿಸಿದ ದೇಹವೇ ಮರುಜನ್ಮದಲ್ಲಿ ಲಭ್ಯವಾಗುವುದು. ಹಾಗಲ್ಲದೆ, ದುರಾಶಯ ಪೂರಿತನಾಗಿದ್ದು, ಮೋಸಕಾಪಟ್ಯಾದಿ ದುರ್ವ್ಯಸನ ಗಳಲ್ಲಿ ಮಗ್ನನಾಗಿದ್ದವನು, ಆ ಅಭ್ಯಾಸಬಲದಿಂದ ಕೊನೆಗಾಲದಲ್ಲೂ ಆ ದು ಶ್ಚಿಂತೆಯಿಂದಲೇ ದೇಹ ಬಿಡುವನಾದುದರಿಂದ, ಅದಕ್ಕೆ ತಕ್ಕಂತೆ ದುರ್ಗುಣ ದುರ್ವ್ಯಾಧಿ, ದುಷ್ಟ ಸಂಕಲ್ಪಗಳಿಂದ ಕೂಡಿದ ಅಜ್ಞಾನಿಗಳಾದ ಮಾತಾ ಪಿತೃಗಳ ಉದರವನ್ನಾಶ್ರಯಿಸಿ ಜನ್ಮವೆತ್ತಿ ದುಷ್ಕಾರ್ಯ ಪರಂಪರೆಗಳಲ್ಲೇ ಜನ್ಮವನ್ನು ವ್ಯಯಗೊಳಿಸುವನು. ಆ ಜನ್ಮದಲ್ಲಿ ದುಷ್ಟಸಂಪರ್ಕದಿಂದ ಮಾ ಡುವ ಹಲವು ಪಾಪಗಳೂ ಆಗಾಮಿಕರ್ಮಗಳೆಂಬ ಹೆಸರಿನಿಂದ ಪೂರ್ವದ ಸಂಚಿತರಾಸಿಗೆ ಸೇರುತ್ತಾ ಹೋಗಿ, ಜೀವಿಗೆ ಅನಂತ ಕಾಲದವರೆಗೆ ಬಿಡುಗ ಡೆಯೇ ಲಭಿಸದೆ, ಜನನಮರಣಪ್ರವಾಹದಲ್ಲೇ ತೇಲಿ ಮುಳುಗುತ್ತಾ-ಸಂ ಸಾರಶರಧಿಯನ್ನು ಉತ್ತರಿಸಿ ಕಡೆಗಾಣುವ ಮಾರ್ಗವೇ ಗೋಚರಿಸದೆ ಎಂ ತೂ ಭ್ರಷ್ಟನಾಗುವನು. ಹಾಗಲ್ಲದೆ ಪ್ರಯತ್ನಪೂರ್ವಕ ಸತ್ಸಂಗವನ್ನು ಸಂ ಪಾದಿಸಿ, ಸದ್ವಾಸನೆಗಳನ್ನುಂಟಾಗಿ, ಸತ್ಕಾರ್ಯಗಳಲ್ಲಿ ತೊಡಗಿದ್ದರೆ, ಅದ ರಿಂದ ಇಹಜನ್ಮದಲ್ಲಿ ಮಾತ್ರವಲ್ಲ - ಪರಂಪರೆಯಾಗಿ ಮರುಜನ್ಮಗಳಲ್ಲೂ ಉನ್ನತಿಯ ಮಾರ್ಗದಲ್ಲೇ ಪ್ರವೇಶವುಂಟಾಗಿ ಕ್ರಮಶಃ ಸಂಸಾರ ಶರಧಿ ಯನ್ನು ಉತ್ತರಿಸಿ ಭಗವಂತನ ಪಾದಾರವಿಂದಗಳನ್ನೈದಲು ಅವಕಾಶವುಂ ಟಾಗುವುದು.

ತನಗೆ ಪರಮ ಪ್ರೀತ್ಯಾಸ್ಪದವಾಗಿದ್ದ ಜಿಂಕೆಯ ಮರಿಯ ಚಿಂತೆಯ ಲ್ಲೇ ಮಗ್ನನಾಗಿದ್ದ ಭರತರಾಜರ್ಷಿಯು ಆ ವಾಸನಾ ಬಲದಿಂದ ಮರುಜ ನ್ಮದಲ್ಲಿ ಜಿಂಕೆಯ ದೇಹವನ್ನೇ ಧರಿಸಿ, ಹುಟ್ಟಿದನು. ಆದರೆ ಆತನು ಅತಿಶಯ ತಪೋನಿಧಿಯೂ ಭಗವದ್ಭಕ್ತನೂ ಆಗಿದ್ದುದರಿಂದ ಆತನಿಗೆ, ತಾನು ಈ ಜಿಂಕೆ ಯ ಜನ್ಮವನ್ನೆತ್ತುವುದಕ್ಕೆ ಕಾರಣವೇನೆಂಬ ವೃತ್ತಾಂತವೂ, ಪೂರ್ವದಲ್ಲಿದ್ದ ತನ್ನ ಸ್ಥಿತಿಯೂ ಸ್ಮೃತಿಗೆ ಬರುತ್ತಿದ್ದುವು. ತನಗೆ ಹಿಂದೆ ಆ ಜಿಂಕೆಯ

ಮರಿಯಲ್ಲಿದ್ದ ಅತೀವ ಮೋಹವೇ ಆ ಮೃಗಜನ್ಮವು ಪ್ರಾಪ್ತವಾದು ದಕ್ಕೆ ಕಾರಣವಾಯಿತೆಂಬ ಸಂಗತಿಯು ಆತನಿಗೆ ಅತಿಶಯ ವ್ಯಥೆಯನ್ನುಂಟು ಮಾಡಿತು. ಆಗ ಜಿಂಕೆಯ ದೇಹದಲ್ಲಿದ್ದ ಆ ಭರತನು–' ಅಯ್ಯೋ ನಾನೆಂತಹ ನಿರ್ಭಾಗ್ಯನು. ರಾಜ್ಯ ಭೋಗಗಳು ಪತ್ನೀ ಪುತ್ರಾದಿಗಳು ಮುಂತಾಗಿ ಎಲ್ಲಾ ಪ್ರಾಪಂಚಿಕ ಬಂಧನಗಳನ್ನೂ ನೀಗಿ ಜ್ಞಾನಿಗಳ ಮಾರ್ಗವನ್ನು ಅವ ಲಂಬಿಸಿದ್ದರೂ ಕೇವಲ ಒಂದು ಜಿಂಕೆಯಲ್ಲಿಟ್ಟ ಮೋಹದ ಫಲ ವಾಗಿ ನನಗೆ ಈ ದುರ್ಗತಿಯು ಪ್ರಾಪ್ತವಾಯಿತಲ್ಲ! ಸ್ನಾನ ಸಂಧ್ಯಾದಿ ನಿತ್ಯ ಕರ್ಮಗಳು, ಧ್ಯಾನ ಧಾರಣಾದಿಗಳು, ಭಗವತ್ಕಥಾ ಶ್ರವಣ ಮನನಾದಿ ಗಳು ಈ ಬಗೆಯ ಸರ್ವವಿಧ ಪ್ರಯತ್ನಗಳಿಂದ ಆಂಕೆಯಲ್ಲಿಟ್ಟಿದ್ದೆನಾದರೂ ನನ್ನ ಈ ದುಷ್ಟ ಮನಸ್ಸು ಬುದ್ಧಿಹೀನನಾದ ಕೋತಿಯಂತೆ ಅಲೆಯ ತೊಡಗಿ ಆದೊಂದು ಜಿಂಕೆಯಲ್ಲ ನೆಲೆಸಿತಾದುದರಿಂದ, ಅಕಟಾ ನನಗೆ ಪುನಃ ಈ ಮೃಗಜನ್ಮವು ಪ್ರಾಪ್ತವಾಯಿತು.'' ಎಂದು ಹಲವು ಬಗೆಯಿಂದ ಮನದಲ್ಲಿ ಪಶ್ಚಾತ್ತಾಪಗೊಳ್ಳುತ್ತ, ಇನ್ನು ಮುಂದಾದರೂ ವ್ಯರ್ಥಕಾಲ ಕ್ಷೇಪ ಮಾಡಲಾಗದೆಂದು ಚಿಂತಿಸಿ, ತನ್ನ ತಾಯಿಯನ್ನೂ ಇತರ ಜಿಂಕೆಗಳ ಹಿಂಡನ್ನೂ ಬಿಟ್ಟು ಪೂರ್ವಜನ್ಮದಲ್ಲಿ ತಾನು ವಾಸಿಸಿದ್ದ ಪುಲಹಾಶ್ರಮದ ಸಾಲಗ್ರಾಮ ಕ್ಷೇತ್ರವನ್ನು ಸೇರಿ, ಅಲ್ಲಿಯ ಮಹರ್ಷಿಗಳ ಸಾನ್ನಿಧ್ಯದಿಂದ ಪರಿಶುದ್ಧವಾಗಿದ್ದ ವಾತಾವರಣದಲ್ಲಿ ಯಾವ ಸಂಬಂಧವನ್ನೂ ಮನಸ್ಸಿಗೆ ತಂದುಕೊಳ್ಳದೆ, ತರಗೆಲೆಗಳನ್ನು ತಿಂದು, ತೊರೆಯ ನೀರನ್ನು ಕುಡಿದು, ಮರಣಕಾಲವನ್ನು ನಿರೀಕ್ಷಿಸುತ್ತ ಕಾಲಯಾಪನೆ ಮಾಡುತ್ತಿದ್ದನು. ಹೀಗಿ ರುವಲ್ಲಿ ಮುಂದೆ ಕೆಲವು ದಿನಗಳಲ್ಲೇ ಪ್ರಾರಬ್ಧ ಕರ್ಮದ ಅವಧಿಯು ತೀರಿ ದೇಹಾವಸಾನಕಾಲವು ಸಮೀಪಿಸಲಾಗಿ, ತನ್ನ ಕಂಠ ಪರಿಯಂತರ ಅರ್ಧ ದೇ ಹವನ್ನು ನದಿಯಲ್ಲಿ ಮುಳುಗಿಸಿಕೊಂಡು ಆ ದೇಹವನ್ನು ತೊರೆದುಬಿಟ್ಟನು. ಇಂತು ಭರತರಾಜರ್ಷಿಯ ಚೇತನವು ಮೃಗದೇಹದಿಂದ ಮುಕ್ತವಾಯಿತು.

ತರುವಾಯ ನಡೆದ ಆತನ ಚರಿತ್ರೆಯು ಮತ್ತೂ ವಿಚಿತ್ರವಾಗಿದೆ. ಅಂಗಿ ರಸ ಗೋತ್ರೋದ್ಭವನಾದ ಒಬ್ಬ ಸುಶೀಲ ಬ್ರಾಹ್ಮಣನು ಆ ಪ್ರಾಂತದ ಒಂದು ಅಗ್ರಹಾರದಲ್ಲಿ ವಾಸವಾಗಿದ್ದನು. ಆತನು ಶಮ ದಮ, ತಪಸ್ಸು, ವೇದಾಧ್ಯಯನ, ಶಿಷ್ಯರಿಗೆ ವೇದಪಾಠವನ್ನು ಹೇಳುವುದು, ದೈವಾಧೀನವಾಗಿ

ದೊರೆತುದರಲ್ಲೇ ತೃಪ್ತಿಪಡುವಿಕೆ, ತಾಳ್ಮೆ ವಿನಯ ಔದಾರ್ಯ, ಶಾಸ್ತ್ರ ಜ್ಞಾನ, ಅಸೂಯೆಯಿಲ್ಲದಿರುವಿಕೆ, ಭಕ್ತಿ ಮುಂತಾದುವುಗಳಿಂದ ಕೂಡಿ ಸಕಲರಿಂದಲೂ ಗೌರವಿಸಲ್ಪಡುತ್ತ ಸುಖವಾಗಿದ್ದನು. ಆತನಿಗೆ ಇಬ್ಬರು ಹೆಂಡಿರು. ಹಿರಿಯ ಹೆಂಡತಿಯಲ್ಲಿ ಒಂಬತ್ತು ಮಂದಿ ಮಕ್ಕಳು ಜನಿಸಿ, ಎಲ್ಲರೂ ತಂದೆಯಂತೆಯೇ ವೇದ ಶಾಸ್ತ್ರಾದಿಗಳಲ್ಲಿ ನಿಪುಣರಾಗಿದ್ದರು. ರೂಪವಂತರೂ ಆಚಾರಪರರೂ ಆಗಿ-ವಿವಾಹಾದಿಗಳನ್ನು ಮಾಡಿಕೊಂಡು ಸಕಲ ವಿಧದಿಂದಲೂ ಕುಟುಂಬದ ಅಭಿವೃದ್ಧಿಗೆ ಸಹಾಯಕರಾಗಿದ್ದರು. ಆ ಬ್ರಾಹ್ಮಣನ ಕಿರಿಯ ಹೆಂಡತಿಯೊಬ್ಬಳಿದ್ದಳಲ್ಲವೆ! ಆಕೆಯ ಉದರದಲ್ಲಿ ಒಂದು ಹೆಣ್ಣು ಒಂದು ಗಂಡು ಹೀಗೆ ಇಬ್ಬರು ಮಕ್ಕಳಾದರು. ಮೃಗ ದೇಹವನ್ನು ನೀಗಿದ್ದ ಭರತರಾಜರ್ಷಿಯೇ ಪ್ರಾರಬ್ಧ ಕರ್ಮವಶದಿಂದ ಆ ಗಂಡುಮಗನಾಗಿ ಪುನಃ ಜನ್ಮವೆತ್ತಿದನು. ಮಹಾ ಭಗವದ್ಭಕ್ತನಾದ ಆತನಿಗೆ ಅದೇ ಕೊನೆಯ ಜನ್ಮವೆಂದು ಜ್ಞಾನಿಗಳು ಹೇಳುವರು. ಆ ಪುಣ್ಯಶಾಲಿಗೆ ಸುಕೃತ ಪರಿಪಾಕದಿಂದ ಆ ಜನ್ಮದಲ್ಲೂ ತನ್ನ ಪೂರ್ವಜನ್ಮಗಳ ಸ್ಮರಣೆಯು ಉಂಟಾಗಿದ್ದಿತು. ಆದುದರಿಂದ ಹಿಂದೆ ಜಿಂಕೆಯ ಸಂಬಂಧದಿಂದ ಪ್ರಾಪ್ತವಾಗಿದ್ದ ದುಃಖರಾಸಿಗಳನ್ನು ಯೋಚಿಸಿ ಆ ಜನ್ಮದಲ್ಲೂ ಯಾವ ಸಂಬಂಧವೂ ತನಗೆ ಅಂಟದಂತೆ ಬೇರೆಯಾಗಿರಲು ನಿರ್ಧರಿಸಿದನು. ಯಾರೊಂದಿಗೂ ಮಾತನಾಡದೆ, ಹುಚ್ಚನಂತೆಯೂ ಕುರುಡನಂತೆಯೂ ಹುಟ್ಟುಕಿವುಡನಂತೆಯೂ ನಟಿಸುತ್ತಿದ್ದನು. ಆದರೂ ಏಕಾಂತವಾಗಿ ಪ್ರಾರಬ್ಧ ಕರ್ಮಗಳನ್ನು ನೀಗಿಸುವುದಕ್ಕಾಗಿ ಭಗವಂತನ ದಿವ್ಯನಾಮಗಳನ್ನು ಸ್ಮರಿಸುವುದು, ಭಗವದ್ಗುಣಗಳನ್ನು ಕೀರ್ತಿಸುವುದು, ಆತನ ಪವಿತ್ರ ಚರಿತ್ರೆಗಳನ್ನು ಕೇಳುವುದು ಮತ್ತು ಆತನ ಪರಮ ಮಂಗಳ ಸ್ವರೂಪವನ್ನು ಧ್ಯಾನಿಸುವುದು ಇವುಗಳಲ್ಲೇ ಸದಾನಿರತನಾಗಿರುವನು. ಆತನ ಅಂತರ್ಯವೆಂಥಾದ್ದೆಂಬ ವಿಚಾರವು ಯಾರಿಗೂ ತಿಳಿಯದಿರಲು ಎಲ್ಲರೂ ಅವನನ್ನು ಶುದ್ಧಮೂಢನೆಂದು ಭಾವಿಸಿಬಿಟ್ಟರು. ಆದರೆ ಆತನು ಹುಚ್ಚನಂತಿದ್ದರೂ ಮೂಢನಂತಿದ್ದರೂ ತಂದೆಯು ಮಾತ್ರ ಪುತ್ರವಾತ್ಸಲ್ಯದಿಂದ ಸುಮ್ಮನೆ ಬಿಟ್ಟಿರಲಾರದೆ ಅವನಿಗೂ ಯೋಗ್ಯತಾನುಸಾರ ವಿದ್ಯೆಯನ್ನು ಕಲಿಸಬೇಕೆಂದು ಪ್ರಯತ್ನಪಟ್ಟನು. ಬ್ರಾಹ್ಮಣ ದೇಹದಿಂದ ಹುಟ್ಟಿದವನಿಗೆ ಮುಖ್ಯ ಕರ್ಮವಾದ

ಉಪನಯನವನ್ನು ಮಾಡಿಸಿ, ಗಾಯಿತ್ರೀ ಮಂತ್ರೋಪದೇಶ ಮಾಡಿದನು. ನಾಲ್ಕು ತಿಂಗಳ ಕಾಲ ತ್ರಿಸಂಧ್ಯೆಗಳಲ್ಲೂ ತಪ್ಪದೆ ಹೇಳಿಕೊಡುತ್ತ ಬಂದನಾದರೂ, ಆ ಪವಿತ್ರ ಗಾಯಿತ್ರೀ ಮಂತ್ರದ ಒಂದಕ್ಷರವನ್ನಾದರೂ ಭರತನು ಸ್ವರ ಪೂರ್ವಕವಾಗಿ-ಸರಿಯಾಗಿ ಉಚ್ಚರಿಸಲಿಲ್ಲ. ಒಂದು ದಿನವೂ ಇಷ್ಟಪಟ್ಟು ತಂದೆಯ ಬಳಿಯಲ್ಲಿ ಕುಳಿತು, ಒಂದಕ್ಷರವನ್ನೂ ಬರೆಯಲಿಲ್ಲ. ಹೇಳಿಕೊಟ್ಟ ಒಂದು ಶಬ್ದವನ್ನು ಸಮಂಜಸವಾಗಿ ಹೇಳಿ ತಂದೆಯ ಮನಸ್ಸಿಗೆ ಸಂತೋಷವನ್ನುಂಟುಮಾಡಲಿಲ್ಲ. ಹೇಗಾದರೂ ತಂದೆಯ ಆ ಕಾಟದಿಂದ ತಪ್ಪಿಸಿಕೊಳ್ಳಬೇಕೆಂದೇ ಪ್ರಯತ್ನಿಸುತ್ತ, ತಾನು ಶುದ್ಧ ಅಪ್ರಯೋಜಕನೆಂದು ತಂದೆಯ ಮನಸ್ಸಿಗೆ ತೋರುವಂತೆ ಸದಾ ಆತನ ಇಷ್ಟಕ್ಕೆ ವಿರುದ್ಧವಾಗಿಯೇ ನಡೆಯುತ್ತಿದ್ದನು. ತನ್ನ ಇತರ ಮಕ್ಕಳಂತೆಯೇ ಅವನನ್ನೂ ಬುದ್ಧಿವಂತನನ್ನಾಗಿ ಮಾಡಬೇಕೆಂದು, ಹಲವು ಬಗೆಯಿಂದ ಪ್ರಯತ್ನಿಸಿ ವಿಫಲ ಮನೋರಥನಾಗಿ ಆ ಬ್ರಾಹ್ಮಣನು ಅದೇ ಮನೋವ್ಯಥೆಯಿಂದಲೇ ದೇಹವನ್ನು ನೀಗಿದನು.

ತಂದೆಯು ಸತ್ತನಂತರ, ಭರತನ ಮಿಕ್ಕ ಒಂಬತ್ತುಮಂದಿ ಅಣ್ಣಂದಿರೂ ಅವನ ಸ್ಥಿತಿಯನ್ನೂ ಮೊದ್ದು ಸ್ವಭಾವವನ್ನೂ ನೋಡಿ ಯಾವ ಕೆಲಸಕ್ಕೂ ಉಪಯೋಗವಿಲ್ಲದ ಪ್ರಾಣಿಯೆಂದು ಭಾವಿಸಿ ಭರತನನ್ನು ಸ್ವೇಚ್ಛೆಯಾಗಿ ಬಿಟ್ಟುಬಿಟ್ಟರು. ತಂದೆಯೊಂದಿಗೇ ಅವನ ತಾಯಿಯೂ ಸಹಗಮನ ಮಾಡಿ ಮೃತಳಾದ್ದರಿಂದ, ಭರತನಿಗೆ ಮನೆಯಲ್ಲಿ ಹೇಳಿ ಕೇಳುವವರಿಲ್ಲದಂತಾಗಲು ಅವನು ಯಥೇಚ್ಛವಾಗಿ ಎಲ್ಲೆಂದರಲ್ಲಿ ತಿರುಗಿಕೊಂಡು, ಹಸಿ-ಬಿಸಿ, ಆರಿದುದು, ಹಳಸಿದುದು ಉಪ್ಪು ಖಾರ ಎಂಬ ವಿವೇಚನೆಯನ್ನೇ ಮಾಡದೆ ದೇಹಧಾರಣೆಗಾಗಿ ದೊರೆತ ಆಹಾರವನ್ನು ತಿಂದು, ಚಳಿ ಗಾಳಿ ಮಳೆ ಬಿಸಿಲುಗಳ ಲಕ್ಷ್ಯವೇ ಇಲ್ಲದೆ, ಬರಿಯ ನೆಲದಮೇಲೋ ಕಲ್ಲಿನಮೇಲೋ ಮಲಗಿ ಕಾಲಕಳೆಯುತ್ತ, ಅಂತರ್ಯದಲ್ಲಿ ಸದಾ ಭಗವನ್ನಾಮ ಜಪ ಭಗವದ್ರೂಪಧ್ಯಾನ ಮುಂತಾದುವುಗಳನ್ನು ಮರೆಯದೆ ಪ್ರಪಂಚಕ್ಕೆ ಮಾತ್ರ ದೊಡ್ಡಹುಚ್ಚನಂತೆಯೂ ಮೂಢನಂತೆಯೂ ತೋರ್ಪಡಿಸಿಕೊಳ್ಳುತ್ತಿದ್ದನು. ಯುಕ್ತಾಹಾರಗಳಾಗಲೀ, ಚಳಿ ಗಾಳಿಗಳಿಂದ ರಕ್ಷಿಸುವುದಕ್ಕಾಗಿ ಯೋಗ್ಯ ವಸ್ತ್ರಾಚ್ಛಾದನವಾಗಲಿ ಇಲ್ಲದಿದ್ದರೂ, ಆ ಮಹಾನುಭಾವನ ದೇ

ಹವು ಲೇಶಮಾತ್ರವೂ ಕಂದದೆ ಕುಂದದೆ, ಕೊಬ್ಬಿದ ಗೂಳಿಯಂತೆ ಒಂದೊಂದು ಅವಯವವೂ ಬಲಗೊಂಡು ಮಾಂಸುಲವಾಗಿ, ಎಲುಬು ಕಾಣಿಸದಂತೆ ಪುಷ್ಟನಾಗಿ ಒಪ್ಪುತ್ತಿದ್ದಿತು. ದೇಹವೆಲ್ಲವೂ ಸ್ನಾನಾದಿಗಳಿಲ್ಲದೆ ಮಲಿನವಾಗಿದ್ದುದರಿಂದ ಆತನ ಅತಿಶಯ ಬ್ರಹ್ಮತೇಜಸ್ಸು-ಹರಕು ಬಟ್ಟೆಯಲ್ಲಿ ಕಟ್ಟಲ್ಪಟ್ಟ ಮಹಾರತ್ನದಂತೆ ಹೊರಕ್ಕೆ ತಿಳಿಯದೆ ಗೋಪ್ಯವಾಗಿತ್ತು. ಮೋಣಗಮಟಿನ, ಒಂದು ಹರಕು ವಸ್ತ್ರವನ್ನು ಸೊಂಟಕ್ಕೆ ಸುತ್ತಿ, ಕೊಳಹಿಡಿದು ಕಪ್ಪಾಗಿದ್ದ ಒಂದು ಯಜ್ಞೋಪವೀತದ ಮೂರೆಳೆಯನ್ನು ಕತ್ತಿನಲ್ಲಿ ಜೋತಾಡಿಸಿಕೊಳ್ಳುತ್ತ ಕೇವಲ ಶ್ವಪಚವೇಷದಿಂದ ತೋರುತ್ತಿದ್ದ ಆತನನ್ನು ಸಮಸ್ತರೂ ಬ್ರಾಹ್ಮಣಾಧಮನೆಂದು ದೂಷಿಸಸಾಗಿದರು. ಆತನಾದರೋ ಯಾರ ದೂಷಣೆ ಭೂಷಣೆ ತಿರಸ್ಕಾರಗಳನ್ನೂ ಗಮನಕ್ಕೆ ತಂದುಕೊಳ್ಳದೆ, ಸದಾ ತೃಪ್ತನಾಗಿ ಶಾಂತನಾಗಿ ನಿಶ್ಚಿಂತನಾಗಿ, ತನಗಾಗಿ ಮಾಡಬೇಕಾದ ಯಾವ ಕೆಲಸವೂ ಇಲ್ಲದಿದ್ದರೂ, ಯಾರು ಕರೆದು ಏನು ಕೆಲಸ ಹೇಳಿದರೂ ಜಿಗುಪ್ಸೆಯಿಲ್ಲದೆ ಮಾಡುತ್ತ, ದೊರೆತಷ್ಟನ್ನು ತೆಗೆದುಕೊಳ್ಳುತ್ತ, ಆ ದ್ರವ್ಯವನ್ನು ಕೇಳಿದವರಿಗೆ ಕೊಡುತ್ತ, ನನ್ನದು-ನನಗೆ ಎಂಬ ವಿಚಾರವನ್ನೇ ಅರಿಯದೆ ಇದ್ದನು. ಇದನ್ನು ತಿಳಿದ ಅವನ ಅಣ್ಣಂದರು, ಆಳಿನ ಆಕಾರ ಪ್ರಮಾಣಗಳಿಗಾದರೂ ಇರಲೆಂದು ತಮ್ಮ ಹೊಲಗದ್ದೆಗಳನ್ನು ಕಾದುಕೊಂಡಿರಲಿಕ್ಕಾಗಿ ಅವನನ್ನು ಹಿಡಿತಂದು ಹೊಲದ ಒಂದು ಬದಿಯಲ್ಲಿ ಕೂರಿಸಿದರು. ಅಲ್ಲದೆ, ಹೊಲ ಗದ್ದೆ ತೋಟಗಳಲ್ಲಿ ಅಗೆಯುವ-ಹೆಂಡೆಗಳನ್ನೊಡೆಯುವ ಕೆಲಸಗಳನ್ನೂ ನಿಯಮಿಸಿದ್ದರು. ಭರತನು ಹಳ್ಳ ತಿಟ್ಟುಗಳಿಂದೂ ಹೆಚ್ಚು ಕಡಮೆಗಳಿಂದೂ ಗಮನಿಸದೆ, ಹಸಿವು ಬಾಯಾರಿಕೆಗಳನ್ನರಿಯದೆ ಕೆಲಸಮಾಡುತ್ತ, ಕೂಲಿಗಾಗಿ ತನ್ನ ಅಣ್ಣಂದಿರು ತಂದುಕೊಟ್ಟ ಅಕ್ಕಿಯನುಚ್ಚನ್ನಾಗಲೀ, ಹಿಂಡಿ, ತವುಡು, ಹುರುಳಿ, ಅನ್ನದ ಕೆರಕಲು ಮುಂತಾದ ಯಾವ ಪದಾರ್ಥವನ್ನಾಗಲೀ ಬೇಕು-ಬೇಡವೆನ್ನದೆ ತೆಗೆದುಕೊಂಡು ತಿಂದು, ಚಳಿ ಬಿಸಿಲುಗಳೆನ್ನದೆ ಅಲ್ಲೇ ಬಿದ್ದಿದ್ದು ಪೈರನ್ನು ಕಾದುಕೊಂಡಿರುತ್ತಾ, ಹೀಗೆ ಕೇವಲ ಅಸ್ವತಂತ್ರನಂತೆ ಕಾಲಯಾಪನೆ ಮಾಡುತ್ತಿದ್ದನು.

ಮುಂದೆ ಕೆಲವು ದಿನಗಳು ಸಾಗಲು, ಅತಿಶಯ ಪ್ರಮಾದಕರವಾದ ಒಂದು ಪ್ರಸಂಗವು ಪ್ರಾಪ್ತವಾಯಿತು. ಆ ಪ್ರಾಂತದ ಗುಡ್ಡ ಕಾಡುಗಳಲ್ಲಿ

ವಾಸಿಸುತ್ತಿದ್ದ ಕಳ್ಳರ ಯಜಮಾನನಾದ ಶೂದ್ರನೊಬ್ಬನು, ತನಗೆ ಪುತ್ರಸಂತಾನವಾದರೆ ತಮ್ಮ ಕುಲದೇವತೆಯಾದ ಭದ್ರಕಾಳಿಗೆ ಒಂದು ನರಬಲಿಯನ್ನು ಕೊಡುತ್ತೇನೆಂದು ಹರಕೆ ಹೊತ್ತಿದ್ದನು. ಕರ್ಮ ಧರ್ಮ ಸಂಯೋಗದಿಂದ ಅವನಿಗೆ ಒಬ್ಬ ಗಂಡು ಮಗನೂ ಹುಟ್ಟಿದನು. ಆದಕ್ಕಾಗಿ ಪರಮಾನಂದ ಭರಿತನಾದ ಆ ಚೋರಾಗ್ರೇಸರನು, ನರಬಲಿಗೆ ಯೋಗ್ಯನಾದ ಒಬ್ಬ ಮನುಷ್ಯನನ್ನು ಹುಡುಕಿ ಹಿಡಿದು ತನ್ನಿರೆಂದು ತನ್ನ ಅನುಚರರನ್ನು ಕಳುಹಿಸಿದನು. ಅವರು ಅಲ್ಲಲ್ಲಿ ಹುಡುಕುತ್ತ ನಮ್ಮ ಜಡಭರತನು ಕುಳಿತಿದ್ದ ಹೊಲದ ಸಮೀಪಕ್ಕೆ ಬಂದರು. ಅಲ್ಲಿ ನಡುರಾತ್ರಿಯಲ್ಲಿ ವೀರಮಂಡಿಯನ್ನು ಹಾಕಿ ಕುಳಿತು, ಕಾಡುಮೃಗಗಳಿಂದ ಹೊಲಗದ್ದೆಗಳ ಪೈರುಗಳಿಗೆ ಬಾಧೆಯುಂಟಾಗದಂತೆ ಮೈಯೆಲ್ಲಾ ಕಣ್ಣಾಗಿ ಕಾವಲು ಕುಳಿತಿದ್ದ ಆ ಆಜಾನುಬಾಹು ವ್ಯಕ್ತಿಯನ್ನೂ - ಶುದ್ಧ ಮೊದ್ದಿನಂತೆ ಬೋಧೆಯಾಗುತ್ತಿದ್ದ ಆತನ ಬಾಹ್ಯ ವೇಷವನ್ನೂ ಕಂಡು, ತಮ್ಮ ಕೆಲಸಕ್ಕೆ ತಕ್ಕವನೆಂದು ಪರಮಹರ್ಷಿತರಾಗಿ ಅವನನ್ನು ಹಿಡಿದು ತಮ್ಮ ಗುಡಿಸಲುಗಳ ಬಳಿಗೆ ಕರೆತಂದರು. ಕಳ್ಳರ ಯಜಮಾನನಾದರೂ, ಯಾವ ಅಂಗವೂ ಲೋಪವಿಲ್ಲದೆ, ಧೃಷ್ಟಪುಷ್ಟನಾಗಿದ್ದ ಆ ವ್ಯಕ್ತಿಯನ್ನು ನೋಡಿ ಬಹು ಸಂತೋಷದಿಂದ ಅವನನ್ನು ಕಾಳಿಕಾಂಬೆಗೆ ಬಲಿಕೊಟ್ಟು ತನ್ನ ಹರಕೆಯನ್ನು ಪೂರೈಸಿಕೊಳ್ಳಬೇಕೆಂದು ನಿಶ್ಚೈಸಿದನು. ಮುಂದೆ ಆ ಕಾರ್ಯವನ್ನು ಸಾವಕಾಶ ಮಾಡಲು ಸಾಧ್ಯವಿಲ್ಲದೆ, ಎಲ್ಲರೂ ಆ ವಿಷಯದಲ್ಲಿ ಆತುರಗೊಳ್ಳತೊಡಗಿದರು. ಕೆಲವರು ಹೊಂಗೆ ಬೇವುಗಳ ಹಸುರೆಲೆಗಳನ್ನು ತಂದು ದೇವಿಯ ಗುಡಿಯ ಮುಂಭಾಗದಲ್ಲಿ ಚಪ್ಪರವನ್ನು ಹಾಕಿ, ವಿವಿಧವರ್ಣ ರಂಜಿತ ಪುಷ್ಪಗಳನ್ನು ತಂದು ಬಗೆಬಗೆಯಿಂದ ಅಲಂಕರಿಸಿದರು. ಕೆಲವರು ಹಲವು ಕುಂಡಗಳಲ್ಲಿ ನದೀ ಜಲವನ್ನು ತಂದು ಜಡಭರತನ ಮೈಮೇಲೆ ಸುರಿದು ಸ್ನಾನ ಮಾಡಿಸಿದರು. ಮತ್ತೆ ಕೆಲವರು, ಹೊಸ ಬಟ್ಟೆಯನ್ನು ತಂದು ಸುತ್ತಿದರು. ಕೆಲವರು ಕೆಂಪುಗಂಧವನ್ನು ಮೈಗೆ ಬಳಿದು, ಕಾಡು ಹೂ ಸೊಪ್ಪುಸದೆಗಳಿಂದ ಅವನನ್ನು ಬಲಿಕಾಲಕ್ಕೆ ತಕ್ಕಂತೆ ಸಿಂಗರಿಸಿದರು. ಮತ್ತೆ ಕೆಲವರು ಕಣಗಿಲೆ ದಾಸಾಳ ಮುಂತಾದ ಕೆಂಪು ಹೂಗಳಿಂದ ಒಂದು ದಂಡೆಯನ್ನು ಕಟ್ಟಿ ಅವನ ಕೊರಳಲ್ಲಿ ಹಾಕಿದರು. ಬೇರೆ ಕೆಲವರು ಮುಖಕ್ಕೆ

ಕೆಂಪು ತಿಲಕವನ್ನಿಟ್ಟರು. ಕೆಲವರು ಅವನಿಗೆ ಹಲವು ಬಗೆಯ ಭಕ್ಷ್ಯ ಭೋಜ್ಯಗಳಿಂದ ಕಂಠಪೂರ್ತಿ ಊಟಮಾಡಿಸಿದರು. ಜಡಭರತನಾದರೋ ಏಕೆ-ಹೀಗೆ ಮಾಡುತ್ತೀರೆಂದೂ-ಇದಕ್ಕೆಲ್ಲ ಅರ್ಥವೇನೆಂದೂ ಅವರನ್ನು ಪ್ರಶ್ನಿಸಲಿಲ್ಲ. ಈ ಕೆಲಸವು ತನಗೆ ಇಷ್ಟವೆಂದು ಅಪೇಕ್ಷಿಸಲಿಲ್ಲ-ಅನಿಷ್ಟವೆಂದು ನಿಷೇಧಿಸಲಿಲ್ಲ. ಅವರು ಮಾಡಿದಂತೆಲ್ಲ ಮಾಡಲಿತ್ತು, ಭಗವದಿಷ್ಟದಲ್ಲಿದ್ದಂತೆ ನಡೆಯಲೆಂದು, ಕೇವಲ ಅಸ್ವತಂತ್ರನಂತೆ ಇದ್ದುಬಿಟ್ಟನು.

ಭದ್ರಕಾಳಿಯ ಬಲಿಗೆ ಅರ್ಹವಾದ ನರಪಶುವನ್ನು ಹೀಗೆ ಸಿದ್ಧಗೊಳಿಸಿದ ತರುವಾಯ, ಆ ಚೋರರು ತಮ್ಮ ಶಾಸ್ತ್ರಕ್ಕನುಸರಿಸಿ, ಧೂಪದೀಪಗಳನ್ನೂ, ನೈವೇದ್ಯಗಳನ್ನೂ ಪುಷ್ಪಮಾಲಿಕೆ ಅರಳು ಅಕ್ಷತೆ ಚಿಗುರು ಹಣ್ಣು ಕಾಯಿಗಳನ್ನೂ ತೆಗೆದುಕೊಂಡು ಭೇರಿ ಮೃದಂಗಗಳಿಂದ ಮಹಾ ಘೋಷ ಮಾಡಿಕೊಳ್ಳುತ್ತ, ಕೇಕೆ ಹಾಕುತ್ತ, ಅಸಾಧ್ಯ ಕೋಲಾಹಲದಿಂದ ಅವನನ್ನು ನೆಳೆದುತಂದು ಕರಾಳರೂಪಿನ ಕಾಳಿಕಾವಿಗ್ರಹದೆದುರಿಗೆ ಕುಳ್ಳಿರಿಸಿದರು. ಅವನ ಕಂಠರಕ್ತದಿಂದ ಆ ಮಹಂಕಾಳಿಯನ್ನು ಅಭಿಷೇಕಿಸಬೇಕೆಂದು, ಅವರಲ್ಲೇ ಪೂಜಾರಿಯಾದವನೊಬ್ಬನು ತೀಕ್ಷ್ಣವಾದ ಅಲುಗಿನಿಂದ ಭಯಂಕರವಾಗಿದ್ದ ಒಂದು ಕತ್ತಿಯನ್ನು ಗಂಧಪುಷ್ಪಾಕ್ಷತೆಗಳಿಂದ ಪೂಜಿಸಿ ದೇವಿಯ ಎದುರಿನಲ್ಲಿಟ್ಟನು. ಎಲ್ಲವೂ ಸಿದ್ಧವಾಯಿತು. ಅವರಲ್ಲಿ ಒಬ್ಬೊಬ್ಬನ ದೃಷ್ಟಿಯೂ-ಬಲಿಗೆ ಸಿದ್ಧನಾಗಿದ್ದರೂ ವ್ಯಸನವನ್ನಾಗಲೀ, ಭಯವನ್ನಾಗಲೀ ಲೇಶಾಂಶವೂ ಸೂಚಿಸದೆ ಎಂದಿನಂತೆಯೇ ನಿಶ್ಚಿಂತನಾಗಿ ಕುಳಿತಿದ್ದ ಆ ಅಪೂರ್ವವ್ಯಕ್ತಿಯ ಮೇಲೆ ಬಿದ್ದಿದ್ದಿತು. ಎಲ್ಲರೂ ಆಶ್ಚರ್ಯಮಗ್ನರಾಗಿದ್ದರು. ಆದರೂ ಪರದೇಶಿಯಂತೆ ತಮ್ಮ ಕೈಗೆ ದೊರೆತು ಬಲಿಗೀಡಾಗಿದ್ದರೂ-ತಮ್ಮಂತೆ ಮನುಷ್ಯನೇ ಆಗಿದ್ದ ಅವನ ವಿಚಾರವು ಯಾರಿಗೂ ಕನಿಕರವನ್ನುಂಟುಮಾಡಲಿಲ್ಲ. ಪಾಷಾಣ ಹೃದಯರಾದ ಆ ಘಾತುಕರಿಗೆ ಕನಿಕರವೆಂದರೇನು? ಅವನ ಕೊರಳಿನಲ್ಲಿದ್ದ ಯಜ್ಞೋಪವೀತವನ್ನು ನೋಡಿ, ಅವನು ಬ್ರಾಹ್ಮಣನೆಂಬ ಭಾವನೆಯಾದರೂ ಯಾರಿಗೂ ಉಂಟಾಗಲಿಲ್ಲ. ಕೇವಲ ಸತ್ವಮಯ ಶರೀರಿಯೂ, ಬ್ರಹ್ಮಜ್ಞಾನಿಯೂ, ಬ್ರಹ್ಮಸಾಯುಜ್ಯಕ್ಕೆ ಪಾತ್ರನೂ ಆಗಿದ್ದ ಆ ಲೋಕೋತ್ತರ ಪುರುಷನ ಅಪೂರ್ವ ತೇಜಸ್ಸನ್ನು, ರಾಜಸತಾಮಸಾಹಂಕಾರಗಳಲ್ಲಿ ಮುಳುಗೇಳುತ್ತ ರಕ್ತಪಾನಾಭಿಲಾಷಿಗಳಾದ ಸಿಂಹ ವ್ಯಾಘ್ರಾದಿ ಹಿಂಸ್ರ

ಮೃಗಗಳಂತೆ ದುಷ್ಕರ್ಮನಿರತರಾಗಿದ್ದ ಆ ನೀಚರು ತಿಳಿವ ಬಗೆಯಾದರೂ ಹೇಗೆ? ಮರುಭೂಮಿಗೆ ಸದೃಶವಾಗಿದ್ದ ಅವರ ಹೃದಯಗಳಲ್ಲಿ ದಯೆ ಮಮತೆಗಳ ಮೊಳಕೆ ಏಳುವುದಾದರೂ ಸಾಧ್ಯವೆ?

ಆ ವೇಳೆಗೆ ಕಳ್ಳರ ಯಜಮಾನನೂ ಬಂದನು. ಎಲ್ಲವೂ ಸಿದ್ಧವಾಯಿತು. ಅವರಲ್ಲೊಬ್ಬನು ಆಯುಧವನ್ನು ಕೈಗೆತ್ತಿಕೊಂಡು— 'ಜಯ ಮಹಂಕಾಳಿ' ಎಂದು ನುಡಿದು, ಆ ನರಪಶುವನ್ನು ವಧಿಸಲುದ್ಯುಕ್ತನಾದನು. ಮತ್ತೊಬ್ಬನು ಮುಂದಕ್ಕೆ ಬಂದು ನೆಟ್ಟಗೆ ಎತ್ತಿದ್ದ ಜಡಭರತನ ತಲೆಯನ್ನು ಮುಂದಕ್ಕೆ ಬಗ್ಗಿಸಿ, ಕತ್ತಿಯ ಪೆಟ್ಟಿಗೆ ಅವನ ಕುತ್ತಿಗೆಯನ್ನು ಅಣಿಮಾಡಿಟ್ಟನು. ಅಂತಹ ವಿಷಮವೇಳೆಯು ಪ್ರಾಪ್ತವಾದಾಗಲೂ ಜಡಭರತನು ಯಾವ ಬಗೆಯಿಂದಲೂ ಆತಂಕಗೊಳ್ಳಲಿಲ್ಲ. ಬೆದರಲಿಲ್ಲ. ಪ್ರಾಣಭಯ ಪೀಡಿತನಾಗಿ ದುಃಖಿಸಲಿಲ್ಲ. ಬ್ರಹ್ಮಜ್ಞಾನಿಯೂ, ಅಹಂಕಾರ ಮಮಕಾರಾದಿಗಳನ್ನು ಹುಟ್ಟಡಗಿಸಿ, ಹೃದಯಗ್ರಂಥಿಯನ್ನು ಶೋಧಿಸಿ ಪರಿಶುದ್ಧಗೊಳಿಸಿದ್ದವನೂ ಆದ ಆ ಮಹಾನುಭಾವನಿಗೆ ಪ್ರಾಪಂಚಿಕವಾದ ಯಾವ ಚಿಂತೆಯು ತಾನೆ ಬಾಧಿಸಲು ಶಕ್ತವಾದೀತು. !

ಆ ಬ್ರಹ್ಮಜ್ಞಾನಿಯ ಅಂತರ್ಯಜ್ಯೋತಿಯ ಪ್ರಭೆಯನ್ನು ಅರಿಯಲು ಅಜ್ಞಾನಿಗಳಾದ ಆ ಘಾತುಕರಿಗೆ ಶಕ್ತಿಸಾಲದಿದ್ದರೂ ಆತನ ಅಲೌಕಿಕ ತೇಜಸ್ಸನ್ನು ಸಹಿಸಿಕೊಳ್ಳುವುದು ಆ ಭದ್ರಕಾಳಿಗೆ ಅಸಾಧ್ಯವೆನ್ನಿಸಿತು. ಆತನ ಬ್ರಹ್ಮತೇಜಸ್ಸಿನ ತೀಕ್ಷ್ಣತೆಯನ್ನು ಸಹಿಸಲಾರದೆ, ಅಲ್ಲಿ ಕೇವಲ ಶಿಲಾರೂಪವಾಗಿದ್ದ ಕಾಳಿಕಾವಿಗ್ರಹವು ಸಿಡಿದು, ಅದರೊಳಗಿನಿಂದ ಕಾಳಿಕಾದೇವಿಯು ನಿಜಸ್ವರೂಪದಿಂದ ಎದ್ದುಬಂದಳು. ಭದ್ರಕಾಳಿಯ, ಆ ಭಯಂಕರರೂಪನ್ನೂ, ಕೋಪಶಿಖಿಯಿಂದ ಉರಿಯುತ್ತಿದ್ದ ಆಕೆಯ ತಿರುಗುತ್ತಿದ್ದ ಕಣ್ಣುಗಳನ್ನೂ, ಚಾಚಿದ ಕೆಂಪಾದ ನಾಲಗೆಯನ್ನೂ ಕೋರೆ ಹಲ್ಲುಗಳನ್ನೂ ವಿವಿಧಾಯುಧಗಳನ್ನು ಧರಿಸಿದ ಎಂಟು ಕೈಗಳನ್ನೂ, ನೋಡಿದೊಡನೆಯೇ, ಆ ಘಾತುಕಸಮೂಹವು, ಕೈಕಾಲುಗಳಲ್ಲಿನ ಸತ್ವವುಡುಗಿ ಬಾಯಲ್ಲಿನ ದ್ರವವಾರಿ. ಕೂಗಿಕೊಳ್ಳಲು ಬಾಯಿಬಾರದೆ ಚಿತ್ರಪ್ರತಿಮೆಗಳಂತೆ ನಿಂತರು. ಒಡನೆ ಆಕೆಯು ಆ ಕೊಲೆಗಡಿಗನ ಕೈಯಲ್ಲಿನ ಕತ್ತಿಯನ್ನೇ ತೆಗೆದುಕೊಂಡು ಅಲ್ಲಿ ನೆರೆದಿದ್ದ ಆ ದುರುಳರೆಲ್ಲರ ತಲೆಗಳನ್ನೂ ಹಾರಿಸಿ, ಅವರ ದೇಹಗಳಿಂದ

ಚಿಲುಮೆಯಿಂದ ಹೊರಟ ಜಲದಂತೆ ಚಿಲ್ಲನೆ ಹೊರಟ-ಬಿಸಿಬಿಸಿ ರಕ್ತಧಾರೆಯನ್ನು, ತಾನೂ ತನ್ನ ಅನುಚರರಾದ ಭೂತಗಳೂ ಯಥೇಚ್ಛವಾಗಿ ಕುಡಿದು ರಕ್ತಪಾನದಿಂದ ಮೈಮರೆದು, ಬಹಳ ಹೊತ್ತಿನವರೆಗೆ ಹಾರುತ್ತ ಕುಣಿಯುತ್ತ ತಲೆಬುರುಡೆಗಳಿಂದ ಚಂಡಾಡುತ್ತಾ ಇದ್ದು, ತರುವಾಯ ಅದೃಶ್ಯಳಾಗಿ ಹೋಗಿಬಿಟ್ಟಳು. ಆಹಾ! ಮೃತ್ಯುವೇ ಸಿದ್ಧವಾಗಿ ಎದುರಿಗೆ ನಿಂತಿದ್ದಾಗಲೂ, ಲೇಶಮಾತ್ರವೂ ವಿಕಲವಾಗದ ಚಿತ್ತವೃತ್ತಿಯಿಂದ ಇದ್ದ ಆ ಮಹಾನುಭಾವನ ಅಲೌಕಿಕ ಮಹಿಮೆಯನ್ನು ಏನೆಂದು ವರ್ಣಿಸಬಹುದು! ಬ್ರಹ್ಮಜ್ಞಾನಿಗಳ ಪರಿಯೇ ಅಲೌಕಿಕವಾದುದಲ್ಲವೆ? ಅವರಿಗೆ ಯಾರಮೇಲೂ ದ್ವೇಷವಿರದು. ಯಾವ ವಿಧದ ಭಯಶೋಕ ಸುಖದ ಃಖಗಳ ಸೋಂಕೂ ಅವರನ್ನಂಟದು. ಪರಮಹಂಸಾಶ್ರಮದಲ್ಲಿರುವ ಅಂತಹ ಭಗವದ್ಭಕ್ತರನ್ನು ಸರ್ವದಾ ಕಣ್ಣನ್ನು ರೆಪ್ಪೆಯು ಹೇಗೋ ಹಾಗೆ ಭಗವಂತನೇ ರಕ್ಷಿಸುವನು. ಹೀಗೆ ಆ ಜಡಭರತನು ದುರಂತ ಪ್ರಾಣಾಪಾಯವನ್ನೂ ನೀಗಿ ಆ ಕಾಳಿಯ ಗುಡಿಯಿಂದ ಹೊರಟು ಯಥೇಚ್ಛವಾಗಿ ಸಂಚರಿಸುತ್ತಾ ಪ್ರಾರಬ್ಧಕರ್ಮದ ಪರಿಸಮಾಪ್ತಿಯನ್ನು ನಿರೀಕ್ಷಿಸುತ್ತ ಕಾಲಯಾಪನೆ ಮಾಡುತ್ತಿದ್ದನು.



## ಅಧ್ಯಾಯ ೪. "ತತ್ತ್ವೋಪದೇಶ"

ಭಗವದ್ಭಕ್ತರಿಗೆ ಪ್ರಾಪ್ತವಾಗುವ ದುರಂತ ಸಂಕಟಗಳು ಮೇಲ್ಕಂಡಂತೆ ದಯಾಮಯನಾದ ಭಗವಂತನ ಕೃಪಾಕಟಾಕ್ಷದಿಂದ ನಿವೃತ್ತವಾಗುವುವೆಂಬುದನ್ನು ತಿಳಿಸುವ ಹಲವು ಉದಾಹರಣೆಗಳಿದ್ದರೂ, ಮನುಷ್ಯನು ಭಗವಂತನಲ್ಲಿ ನಂಬಿಕೆಗೊಳ್ಳನೇಕೆ? ಭಕ್ತ ಜನರನ್ನು ಹಿಂದಿಟ್ಟುಕೊಂಡು ಕಾಪಾಡುವ ದಯಾಪರಮೂರ್ತಿಯು, ಆರ್ತರಾಗಿ ತನ್ನನ್ನು ಕರೆದವರಲ್ಲಿಗೆ ಬಂದು ರಕ್ಷಿಸುವನೆಂಬುದನ್ನು ಹಲವು ಮಂದಿ ಭಕ್ತಶ್ರೇಷ್ಠರ ಚರಿತ್ರೆಗಳ ಮೂಲಕ ಕೇಳಿರುವೆವಾದರೂ ಧೈರ್ಯಗೊಳ್ಳೆವೇಕೆ? ನಮ್ಮ ಮೇಲೆ ಆತನ ಕೃಪಾಕಟಾಕ್ಷವು ಬೀಳದಿರುವುದಕ್ಕೆ ಕಾರಣವೇನು? ಆತನ ಕರುಣಾರಸ ಪ್ರವಾಹವು ನಮ್ಮ ಕಡೆಗೆ ಹರಿಯಲೊಲ್ಲದೇಕೆ? ಆ ದೇವರದೇವನು ಈಚೆಗೆ ನಿಷ್ಕರುಣಿಯಾದನೇನು? ಅಥವ ಬೇಸರಗೊಂಡು ಭಕ್ತರಕ್ಷಣಾಪೇಕ್ಷೆಯನ್ನು ತೊರೆದು ಕಲುಹೃದಯನಾದನೇನು?

ನಮ್ಮ ಚಂಚಲ ಮನಸ್ಸಿನ, ಹುಲುಹೃದಯದ, ಅರ್ಥಾಕಾಂಕ್ಷಿಯಾದ ಒಯಲು ಪ್ರಾರ್ಥನೆಗೆ ಮೆಚ್ಚಿ ನಮಗೆ ಪ್ರತ್ಯಕ್ಷನಾಗದಿರುವುದಕ್ಕಾಗಿ - ಆ ಸರ್ವೇಶ್ವರನಲ್ಲಿ ನಮಗೆ ಹೀಗೆ ಅಪನಂಬಿಕೆಯು ಹುಟ್ಟುತ್ತಿರುವುದು ಅತಿಶಯ ವಲ್ಲ. ಆದರೆ, ನಮ್ಮಲ್ಲಿ ಅಪನಂಬಿಕೆಯು ಹುಟ್ಟಿ-ಹೆಚ್ಚಿದಷ್ಟೂ ಆತನೂ ನಮ್ಮಿಂದ ದೂರದೂರನಾಗುತ್ತಿರುವನೆಂಬುದನ್ನು ನಾವು ಅರಿಯೆವು. ಆತನು ನಮಗೆ ಒಲಿಯಲಿಲ್ಲವೆಂಬುದಕ್ಕೆ ಮೊದಲು ಆತನನ್ನು ಒಲಿಸಿಕೊಳ್ಳಲು ನಾವು ಎಷ್ಟುಮಾತ್ರ ಸಿದ್ಧರಾಗಿದ್ದೇವೆಂಬುದನ್ನು ಯೋಚಿಸುವುದಿಲ್ಲ. ನಮ್ಮಲ್ಲಿ, ನಮ್ಮ ಕಥಾನಾಯಕನಲ್ಲಿ ಕಂಡು ಬಂದಂತಹ ಸ್ಥಿರಮನಸ್ಕತೆ, ಶೀತೋಷ್ಣಾದಿ ದ್ವಂದ್ವಗಳನ್ನು ಲಕ್ಷಿಸದ ಸಮಭಾವನೆ, ಶತ್ರುಮಿತ್ರರಂಬ ಭೇದಭಾವವನ್ನು ಮನಸ್ಸಿಗೆ ತಾರದ ಸರ್ವಸಮದೃಷ್ಟಿ, ಎಂತಹ ಆಪತ್ಕಾಲ ಪ್ರಾಪ್ತವಾದರೂ ಆಪದ್ಬಾಂಧವನಾದ ಶ್ರೀವರನ ಚರಣ ಕಮಲಗಳಲ್ಲಿ ನಿಶ್ಚಲಭಕ್ತಿ, ನಿರ್ಭೀತಿ-ನಿಸ್ವಾರ್ಥತೆ, ಮುಂತಾದ ಸುಗುಣಗಳು ನೆಲೆಗೊಂಡವೆಂದರೆ, ಆಮೇಲೆ ಭಗವಂತನೇನು-ಕರೆದಾಗ ಬಾರನೆ, ನೆನೆದಲ್ಲಿ ಒಂದೊದಗನೇ, ಅಪೇಕ್ಷಿಸಿದುದನ್ನು ಒದಗಿಸನೆ? ಭಗವಂತನ ಕರುಣಾಮೃತವರ್ಷವೆಂಬುದು ಅನಂತ ಕಾಲದಿಂದಲೂ ಮುಂದೆ ಅನಂತಕಾಲದ ವರೆಗೂ ಸುರಿಯುತ್ತಲೇ ಇರುವುದು. ಯಾವ ಯಾವ ಪಾತ್ರೆಗಳ ಮುಚ್ಚಳಗಳು ತೆರೆದು ಸಿದ್ಧವಾಗಿವೆಯೋ ಅವು ಕ್ಷಣಮಾತ್ರದಲ್ಲಿ ತುಂಬಿಕೊಳ್ಳುವುವು. ಮುಖ್ಯ ನಮ್ಮನಮ್ಮ ಹೃದಯಪಾತ್ರೆಗಳನ್ನು ಸರ್ವ ವಿಧದಿಂದಲೂ ತೊಳೆದು ಶುದ್ಧಿಗೊಳಿಸತಕ್ಕುದು ಮಾತ್ರ ನಮ್ಮ ಪ್ರಥಮ ಕರ್ತವ್ಯ! ಅದೊಂದು ಪೂರ್ವ ಸಿದ್ಧತೆಯಾಯಿತೆಂದೊಡನೆಯೇ, ಭಗವಂತನು ಒಳಗೇ ಇರುವನು; ಒಡನೆಯೇ ಪ್ರಕಟವಾಗುವನು! ಇದರಲ್ಲಿ ಸಂಶಯವಿಲ್ಲ:—

ಪ್ರಪಂಚಕ್ಕೆ ಗೋಚರವಾಗುವಂತೆ, ಆ ಕಾದದ ಆಕಾರವು ಹೇಗಿರುತ್ತದೆಂಬುದನ್ನು ಕಲಿತವನಲ್ಲವಾದರೂ, ಬಾಹ್ಯಕ್ಕೆ ಸ್ನಾನ-ಶೌಚಾದಿಗಳಿಲ್ಲದ ಶುದ್ಧಸ್ವಭಾವನಂತಿದ್ದರೂ ನಮ್ಮ ಕಥಾನಾಯಕನಲ್ಲಿ ಎಂತಹ ಅಮೌಲ್ಯ ಜ್ಞಾನಸತ್ವವು ಅಡಗಿದ್ದಿತೆಂಬುದನ್ನು ಪ್ರಕಟಿಸಲು ಒಂದು ಪ್ರಸಂಗ ಒದಗಿತು. ಭದ್ರಕಾಳಿಯ ಬಲಿಯ ಮಹಾಪಾಯದಿಂದ ತಪ್ಪಿ ಬದುಕಿದನಂತರ ಜಡಭರತನು, ಸ್ವೇಚ್ಛೆಯಾಗಿ ತಿರುಗುತ್ತ ಇಕ್ಷುಮತೀ ಎಂಬೊಂದು ನದೀ

ತೀರದಲ್ಲಿ ಕುಳಿತು, ಧ್ಯಾನಮಗ್ನನಾಗಿರುತ್ತಿದ್ದನು. ಹೀಗೆ ಕೆಲವು ದಿನಗಳು ಕಳೆದ ವೇಳೆಗೆ, ಮುಂದೊಂದು ದಿನ, ಸಿಂಧು ಸೌವೀರ ದೇಶಗಳನ್ನು ಪಾಲಿಸುತ್ತಿದ್ದ ರಹೂಗಣನೆಂಬ ರಾಜನು ಕಪಿಲ ಮಹಾಮುನೀಶ್ವರನಿಂದ ತತ್ವೋಪದೇಶವನ್ನು ಪಡೆಯಲಿಚ್ಛೆಗೊಂಡು ಪಲ್ಲಕ್ಕಿಯನ್ನೇರಿ ಆ ಮಾರ್ಗವಾಗಿಯೇ ಪ್ರಯಾಣಮಾಡುತ್ತಿದ್ದನು. ರಾಜನು ತನ್ನ ಗಮ್ಯಸ್ಥಾನವನ್ನು ಶೀಘ್ರವಾಗಿ ಸೇರಬೇಕೆಂಬ ಆತುರದಿಂದ ಬೇಗಬೇಗ ನಡೆಯುವಂತೆ ಪಲ್ಲಕ್ಕಿಯನ್ನು ಹೊತ್ತವರನ್ನು ತ್ವರೆಪಡಿಸುತ್ತಿದ್ದನು. ಪಲ್ಲಕ್ಕಿಯನ್ನು ಹೊರುತ್ತಿದ್ದ ಬೋಯಿಗಳ ಸಂಖ್ಯೆಯು ಕಡಮೆಯಿದ್ದುದರಿಂದಲೂ, ದೃಢವಾದ ಆ ವಾಹನವು ಬಹು ಭಾರವಾಗಿದ್ದುದರಿಂದಲೂ, ಅದನ್ನು ಹೊರುವುದಕ್ಕೆ ಮತ್ತಾರಾದರೂ ಸಿಕ್ಕುವರೋ ಎಂದು, ಆ ವಾಹಕರ ಮುಖ್ಯಸ್ಥನು ಅಲ್ಲಲ್ಲಿ ಹುಡುಕತೊಡಗಿದನು. ಸ್ವಲ್ಪ ಹೊತ್ತಿನಲ್ಲೇ ದೂರದ ನದೀತೀರದ ಕಲ್ಲಮೇಲೆ ಕುಳಿತಿದ್ದ ಜಡಭರತನು ಅವನ ದೃಷ್ಟಿಗೋಚರನಾಗಲು, ಒಡನೆ ಆತನನ್ನು ಬಲವಂತದಿಂದ ಹಿಡಿತರಿಸಿ, ಹೊರುವವರೊಂದಿಗೆ ಅವನನ್ನೂ ಸೇರಿಸಿ, ಅವನ ಹೆಗಲಮೇಲೂ ಬೊಂಬನ್ನಿಟ್ಟರು. ಜಡಭರತನು ಆಕಸ್ಮಿಕವಾಗಿ ತನಗೆ ಪ್ರಾಪ್ತವಾದ ಆ ಅಪೂರ್ವ ಕಾರ್ಯವನ್ನು ಕುರಿತು, ತನ್ನ ಸ್ವಾಭಾವಿಕ ಚಿತ್ತವೃತ್ತಿಯಿಂದ, ಅದೂ ಭಗವದಿಷ್ಟದಂತೆ ಪ್ರಾಪ್ತವಾದ ಒಂದು ಅನುಭವವೆಂದು ತಿಳಿದು ಆ ಕಾರ್ಯಕ್ಕೂ ಸಿದ್ಧನಾದನಲ್ಲದೆ, ಬ್ರಾಹ್ಮಣನಾದ ನಾನು ಆ ಕೆಲಸ ಮಾಡತಕ್ಕವನಲ್ಲನೆಂದು ಹೇಳಲಿಲ್ಲ. ವಿಧಿವಶವಾಗಿ ಪ್ರಾಪ್ತವಾದ ಆ ಕರ್ಮಕ್ಕೆ ಹಿಂದೆಗೆದು ಓಡಲಿಲ್ಲ. ರಾಜನು ಕುಳಿತಿದ್ದ ಆ ಪಲ್ಲಕ್ಕಿಗೆ ಆ ಒಡ್ಡರ ಬೋವಿಗಳೊಂದಿಗೆ ಮಹಾಬ್ರಹ್ಮಜ್ಞಾನಿಯಾದ ಜಡಭರತನು ಭುಜವನ್ನು ಕೊಟ್ಟು ನಡೆಯುತ್ತಿದ್ದಾನೆ. ಆದರೆ, ಆತನ ಆ ಕೆಲಸದಲ್ಲಿ ಒಂದು ಲೋಪವಿತ್ತು. ಮೊದಲನೆಯದಾಗಿ, ಆ ಕೆಲಸವನ್ನು ಆತನು ಎಂದೂ ಮಾಡಿದ್ದವನಲ್ಲವಷ್ಟೆ! ಅದರಿಂದಲೂ, ಮತ್ತು ಮಾರ್ಗದಲ್ಲಿ ನಡೆವಾಗ ಗೊದ್ದ ಇರುವೆ ಗೆದ್ದಲು ಇತರ ಕ್ರಿಮಿಕೀಟಗಳು ಮುಂತಾದ ಪ್ರಾಣಿಗಳು ತನ್ನ ಹೆಜ್ಜೆಗೆ ಸಿಕ್ಕು ಸತ್ತಾವೆಂಬ ಕನಿಕರದಿಂದಲೂ ಮಹಾಭಗವದ್ಭಕ್ತನೂ ಭೂತದಯಾಪರನೂ ಆದ ಆ ಮಹಾನುಭಾವನು, ಗೇಣಿಗೊಂದು ಮೊಳಕ್ಕೊಂದು ಮಾರಿಗೊಂದು ಕಾಲನ್ನು ಇಡುತ್ತಾ ನಡೆ

ಯುತ್ತಿದ್ದನು. ವಾಹಕರೆಲ್ಲರೂ ಒಂದೇ ಸಮನಾಗಿ ಹೆಜ್ಜೆಗಳನ್ನಿಕ್ಕುತ್ತಾ- ನಡೆಯುತ್ತಿದ್ದರಲ್ಲವೆ ಒಳಗೆ ಕುಳಿತಿರುವವನಿಗೆ ಸುಖವಿದ್ದೀತು! ಹಾಗಲ್ಲದೆ, ಹೊತ್ತಿರುವವರಲ್ಲಿ ಈ ಒಬ್ಬಾತನು ಹೀಗೆ ನಡೆಯುತ್ತಿದ್ದುದರಿಂದ ಒಳಗೆ ಕುಳಿತಿದ್ದ ರಾಜನಿಗೆ ಕುಲುಕಾಟ ಬಲವಾಯಿತು. ಒಡನೆ ರಾಜನು ಹಾಗಾಗಲು ಕಾರಣವೇನೆಂದು, ತನ್ನ ಕಡೆಯುವರನ್ನು ಆಕ್ಷೇಪಿಸಿದನು. ಅದಕ್ಕೆ ಅವರು-" ಮಹಾಸ್ವಾಮಿ ನಾವೆಲ್ಲರೂ ಸರಿಯಾಗಿ ನಡೆಯುತ್ತಿದ್ದೇವೆ. ಈ ಹೊಸದಾಗಿ ಬಂದಿರುವ ಒಬ್ಬ ಮನುಷ್ಯನು ಮಾತ್ರ, ಮೊಳಕ್ಕೊಂದು ಮಾರಿಗೊಂದು ಕಾಲು ಹಾಕುತ್ತಿರುವುದರಿಂದ ಹೀಗಾಗುತ್ತಿದೆ. ನಮ್ಮಿಂದ ತಪ್ಪಿಲ್ಲ-ಕ್ಷಮಿಸಬೇಕು" ಎಂದು ಹೇಳಿಕೊಂಡರು. ಸ್ವಲ್ಪ ಹೊತ್ತು ರಾಜನೂ ಸುಮ್ಮನೆ ಕುಳಿತನು. ಆದರೂ ಜಡಭರತನ ನಡಿಗೆಯು ಸರಿಗೊಳ್ಳಲಿಲ್ಲ. ಪಲ್ಲಕ್ಕಿಯಲ್ಲಿ ಕುಳಿತಿದ್ದ ರಾಜನಿಗೆ ಒಂದೊಂದುವೇಳೆ ಎತ್ತಿ ಕುಕ್ಕಿದಂತಾಗುತ್ತಿದ್ದಿತು. ಮುಂದಕ್ಕೆ ಮುಗ್ಗುರಿಸಿ ಬೀಳುವಂತಾಗುತ್ತಿದ್ದಿತು. ಇದನ್ನು ಕಂಡು ರಾಜನಿಗೆ ಬಹು ಕೋಪಬಂದು, -'ಎಲೈ ಸೇವಕರೇ, ಇದೇನಿದು' ಕ್ರಮವಾಗಿ ಕಾಲಿಟ್ಟು ನಡೆಯಬಾರದೆ? ಇದೇನು ವಕ್ರವಕ್ರವಾಗಿ ಹೀಗೇಕೆ ನಡೆಯುತ್ತಿರುವಿರಿ?' ಎಂದು ಗರ್ಜಿಸಿದನು. ಅದನ್ನು ಕೇಳಿ ಭೀತರಾದ ಸೇವಕರು-'ಪ್ರಭೋ, ಈ ಹೊಸದಾಗಿ ಬಂದಿರುವ ಮನುಷ್ಯನು ಇನ್ನೂ ಈಗತಾನೇ ಹೆಗಲು ಕೊಟ್ಟಿದ್ದರೂ, ಆಗಲೇ ಬೇಕುಬೇಕೆಂದು ಅತಿಶಯ ಬಳಲಿದವನಂತೆ ತಪ್ಪು ಹೆಜ್ಜೆ ಹಾಕುತ್ತಿರುವನು. ಈತನೊಂದಿಗೆ ನಡೆವುದರಿಂದ ನಮ್ಮ ಹೆಜ್ಜೆಗಳೂ ವಕ್ರವಾಗುತ್ತಿವೆ. ಇನ್ನು ಮುಂದೆ ಇವನೊಂದಿಗೆ ಹೊರುವುದು ಸಾಧ್ಯವಿಲ್ಲ-ಮನ್ನಿಸಬೇಕು' ಎಂದರು. ಇಷ್ಟಾದರೂ ಜಡಭರತನ ಹೆಜ್ಜೆಗಳು ತಮ್ಮ ವಕ್ರಗತಿಯನ್ನು ಬಿಡಲೇ ಇಲ್ಲ. ಆಗ ರಾಜನು ತನ್ನ ಕೋಪವನ್ನೂ ಲಕ್ಷ್ಯಮಾಡದ ಆ ಜೊಸಬನು ಯಾರಾಗಿರಬಹುದೆಂದು ಹೊರಕ್ಕೆ ಬಗ್ಗಿನೋಡಿದನು. ತನ್ನ ಸೇವಕರೆಲ್ಲರಿಗಿಂತಲೂ ಎತ್ತರವಾದ ಆಜಾನುಬಾಹು ದೇಹ, ಧೃಷ್ಟಪುಷ್ಟವಾದ ಕೈಕಾಲುಗಳು, ಎಲುಬು ಕಾಣಿಸದಂತೆ ಕೊಬ್ಬಿ ಬಲಿತು ತುಂಬಿದ್ದ ದೇಹದ ಅಂಗಾಂಗಗಳು. ಆದರೂ ಹೊಲಸಾದ ಮೈ. ನೊಂಟದಲ್ಲಿ ಒಂದು ತುಂಡು ಬಟ್ಟೆ. ಕೊರಳಲ್ಲೊಂದು ಕಪ್ಪಾಗಿ ಗಮಟು ಹಿಡಿದಿದ್ದ ಒಂದು ಮೂರೆ

ಳಿಯು ಜನಿವಾರ, ಇಂತಹ ಒಂದು ವ್ಯಕ್ತಿಯು ಕಾಣಿಸಿತು. ಆ ವ್ಯಕ್ತಿಯನ್ನು ನೋಡಿದ ಒಡನೆಯೇ, ರಾಜನಿಗೆ ಕೋಪವು ಹೋಗಿ ನಗುಬಂತು. ಆಗ ಆ ರಾಜನೂ - ತನ್ನ ಬ್ರಹ್ಮ ತೇಜಸ್ಸನ್ನು ಹೊರಕ್ಕೆ ತೋರ್ಗೊಡದೆ, ಬೂದಿಮುಚ್ಚಿದ ಕೆಂಡದಂತಿದ್ದ ಆ ಬ್ರಹ್ಮಜ್ಞಾನಿಯನ್ನು ಕಂಡು, ಆತನ ಮಹಿಮೆಯನ್ನು ತಿಳಿಯಲಾರದೆ ಪರಿಹಾಸ ವಚನದಿಂದ-'ಅಪ್ಪಾ, ಅಣ್ಣಯ್ಯಾ ಅಯ್ಯೋ ಪಾಪ, ಈ ಪಲ್ಲಕ್ಕಿಯನ್ನು ಬಹು ದೂರದಿಂದ ಹೊತ್ತು ತಂದು ಬಹು ಬಳಲಿದೆಯಲ್ಲವೆ? ನಿನಗೆ ದೇಹಪುಷ್ಟಿಯೂ ಇಲ್ಲ, ಪಾಪ, ಕೇವಲ ಎಲುಬು ಚರ್ಮಗಳ ಬೊಂಬೆಯಾಗಿರುವೆ. ಸಾಲದುದಕ್ಕೆ ಪಾಪ, ನೀನು ಮುದುಕ ಬೇರೆ! ಕೈಯಲ್ಲಾಗದು ಹೇಗೆ ಹೊತ್ತೀಯೆ!' ಎಂದು ಅಪಹಾಸ್ಯ ಮಾಡಿದನು.

ಕೇವಲ ಅಪಮಾನಕರವಾದ ಈ ಮಾತುಗಳು ಕಿವಿಗೆ ಬೀಳುತ್ತಿದ್ದರೂ, ಆತ್ಮಾಭಿಮಾನರಹಿತನಾಗಿದ್ದ ಜಡಭರತಮಹರ್ಷಿಯು, ಆ ಮಾತುಗಳನ್ನು ಮನಸ್ಸಿಗೇ ತಂದುಕೊಳ್ಳದೆ ತನಗೆ ಬಂದಂತೆ ಮೊದಲಿನ ಹಾಗೆಯೇ ನಡೆಯುತ್ತಿದ್ದನು. ಎರಡು ಮೂರು ಸಾರಿ, ಒತ್ತಿಯೊತ್ತಿ ಹೇಳಿದಾಗ್ಗೂ ರಾಜನಾದ ತನ್ನ ಮಾತಿಗೆ ಲೇಶಮಾತ್ರವೂ ಬೆಲೆ ಸಿಕ್ಕದಿದ್ದುದು, ಆತನಿಗೆ ಅತಿಶಯ ಕೋಪೋದ್ರೇಕವನ್ನುಂಟುಮಾಡಿತು. ಒಡನೆ ರಹೂಗಣರಾಜನು ಹುಬ್ಬುಗಂಟು ಕಟ್ಟಿಕೊಂಡು, ಹೊರಕ್ಕೆ ನೋಡುತ್ತ-'ಏನೆಲಾ, ಯಾರೆಂದು ತಿಳಿದೆ? ರಾಜನಾದ ನನ್ನ ಮಾತೆಂದರೆ ನಿನಗೆ ಲೇಶಮಾತ್ರವೂ ಲಕ್ಷ್ಯವಿಲ್ಲವೋ! ಬಿಟ್ಟಿಯ ಕೂಳನ್ನು ತಿಂದುತಿಂದು ಊರಗೂಳಿಯಂತೆ ಕೊಬ್ಬಿ ಬೆಳೆದಿದ್ದರೂ, ಕೈಯಲ್ಲಾಗದವನಂತೆ-ಜೀವಚ್ಛವವೋ ಎಂಬಂತೆ ಕೆಲಸಕ್ಕೆ ಹಿಂದೆಗೆಯುತ್ತಿರುವೆಯಾ? ನಿನ್ನ ಕೊಬ್ಬನ್ನು ಮುರಿಯಬೇಕಾಗಿದೆ; ನೋಡು, ನೋಡು-ದಂಡಪಾಣಿಯಾದ ಯಮನು ಪ್ರಾಣಿಗಳನ್ನು ಶಿಕ್ಷಿಸಿ ಮಾರ್ಗಕ್ಕೆ ತರುವಂತೆ, ನಿನ್ನನ್ನಾದರೂ ದಂಡಿಸಿ ಬುದ್ಧಿಗಲಿಸುವೆನು. ನೋಡು' ಎಂದು ಗರ್ಜಿಸಿದನು. ಹೀಗೆ ರಜಸ್ತಮೋಗುಣಗಳ ಆಧಿಕ್ಯತೆಯಿಂದ ಮದಾಂಧನಾಗಿ ಮುಂತಿಳಿಯದೆ, ಕೂಗಿಕೊಳ್ಳುತ್ತಿದ್ದ ರಾಜನ ಮಾತುಗಳನ್ನು ಕೇಳಿದಾಗಲೂ ಜಡಭರತನಿಗೆ ಯಾವ ಬಗೆಯ ಮನೋವಿಕಾರವೂ ಉಂಟಾಗಲಿಲ್ಲ. ಸಾಕ್ಷಾದ್ಬ್ರಹ್ಮಸ್ವರೂಪವನ್ನು ತಿಳಿದವನೂ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಸುಟ್ಟು

ಬೂದಿ ಮಾಡಿದವನೂ ಆದ ಆ ಮಹರ್ಷಿಯು ತತ್ವವಿಚಾರವನ್ನರಿಯದೆ ಕೇವಲ ಅಜ್ಞಾನಿ ಬಾಲಕನಂತೆ ಅರಚಿಕೊಳ್ಳುತ್ತಿದ್ದ ಆತನ ಮಾತುಗಳಿಗಾಗಿ ಕೋಪಗೊಳ್ಳದೆ, ಆದರೆ ಕೆಲಹೊತ್ತಿನಮೇಲೆ ಆತನ ಅಜ್ಞಾತೆಗಾಗಿ ಮರುಕಗೊಂಡು ಹೀಗೆಂದು ಹೇಳತೊಡಗಿದನು.– 'ಎಲೈ ರಾಜನೇ, ಪ್ರಾಪಂಚಿಕ ದೃಷ್ಟಿಯಿಂದ ನೋಡುವುದಾದರೆ, ಈಗ ನೀನು ಹೇಳಿದ ಮಾತುಗಳು ನಿಜವೆಂದು ಒಪ್ಪಬೇಕಾಗುತ್ತದೆ. ಆದರೆ ತಾತ್ವಿಕದೃಷ್ಟಿಯಿಂದ – ನೀನು ಹೇಳುವ ಮಾತುಗಳಲ್ಲಿ ಏನೂ ಹುರುಳಿಲ್ಲ. ನೀನು ಹೇಳುವ ಈ ಮಾತುಗಳಿಗೆ ಕೇವಲ ನಿನ್ನ ಭ್ರಾಂತಿಯೇ ಕಾರಣವಲ್ಲದೆ ಮತ್ತೆ ಬೇರೆಯಿಲ್ಲ. ನೀನು ರಾಜನೆಂದೂ, ನಾನು ನಿನಗೆ ಸೇವೆ ಮಾಡತಕ್ಕವನೆಂದೂ ತಿಳಿದಿರುವೆಯಲ್ಲವೆ! ಈ ಸೇವ್ಯ ಸೇವಕ ಭಾವವು ಶಾಶ್ವತವಾದುದಲ್ಲ. ಏಕೆಂಬೆಯಾ— ಇಂದು ರಾಜನಂತಿರುವ ನೀನು, ನಾಳೆ ಬಡತನ ಬಂದು ಬಿಟ್ಟಿಯ ಆಳಾದರೆ, ಆಗ ಈ ಸೇವ್ಯ ಭಾವವು ನಿಲ್ಲಲಿಲ್ಲವಷ್ಟೆ! ನಿಶ್ಚಯವಾದ ಸ್ವಾಮಿ ಭೃತ್ಯತ್ವವೆಂದರೆ, ಪರಮಾತ್ಮನಿಗೂ ಜೀವಾತ್ಮನಿಗೂ ಇರುವುದಲ್ಲದೆ ಅನ್ಯಥಾ ಇಲ್ಲ. ಇದರ ತತ್ವವನ್ನು ತಿಳಿವನಾಗು. 'ಕೊಬ್ಬಿ ಬೆಳೆದಿರುವೆ'ಯೆಂದು ಹೇಳಿದೆಯಲ್ಲವೆ! ಅದೂ ನಿಶ್ಚಯವಾದುದಲ್ಲ. ಏಕೆಂದರೆ, ಆ ಸಂಬಂಧದಲ್ಲಿ ನೀನು ಹೇಳಿದುದು ಯಾರನ್ನು ಕುರಿತು! ನನಗೆ ಎಂದು ನೀನು ತಿಳಿದಿರುವೆ! ಆದರೆ, ನಾನೆಂದರೆ ಈ ದೇಹವೇ? ಅಲ್ಲ! ಬೆಳೆಯುವುದೂ ಕುಗ್ಗುವುದೂ, ಸ್ಥೂಲವಾಗುವುದೂ, ಕೃಶವಾಗುವುದೂ, ಬಾಲ್ಯ ಯೌವನ ತಾರುಣ್ಯ ವಾರ್ಧಿಕ್ಯ ಮೃತ್ಯು ಈ ಅವಸ್ಥೆಗಳನ್ನು ಹೊಂದುವುದೂ, ಈ ದೇಹವಲ್ಲದೆ ನಾನಲ್ಲ: ಜನನ ಮರಣ ಜರಾವ್ಯಾಧಿಗಳ ವಿಕಾರಗಳನ್ನರಿಯದ ನನ್ನ ಆತ್ಮಕ್ಕೂ ಈ ದೇಹಕ್ಕೂ ಸಂಬಂಧವಿಲ್ಲ. ನನ್ನನ್ನು ದಂಡಿಸಿ ಬುದ್ಧಿಗಲಿಸಬೇಕೆಂದೆಯಲ್ಲವೆ? ಆದರೆ ಅದೂ ಕೂಡ ನಿನ್ನ ಭ್ರಾಂತಿಯೇ ಹೊರತು ಬೇರಲ್ಲ.—ಏಕೆಂಬೆಯೋ ಪರಬ್ರಹ್ಮಸ್ವರೂಪವಾದ ಆತ್ಮಾನಂದವನ್ನು ಅನುಭವಿಸುವುದರಲ್ಲೇ ಸ್ಥಿರನಾಗಿ ನಿಂತು, ಲೋಕಕ್ಕೆ ಹುಚ್ಚನಂತೆಯೂ, ಅಂಧನಂತೆಯೂ, ಕಿವುಡ-ಮೂಗನಂತೆಯೂ ತೋರುತ್ತಿರುವ ನನ್ನನ್ನು ಈವರೆಗೇ ಲೋಕದಲ್ಲಿ ಎಷ್ಟೋಮಂದಿ ವಿವಿಧರೀತಿಯಿಂದ ತಿರಸ್ಕರಿಸಿರುತ್ತಾರೆ- ಹಿಂಸಿಸಿದ್ದಾರೆ- ಇದರಿಂದಲೆಲ್ಲ ನನಗೆ ಯಾವ ವಿಧವಾದ ಹೆಚ್ಚು ಕುಂದುಗಳೂ ಉಂಟಾಗಲಿಲ್ಲ. ದೂಷಣೆ ಭೂಷಣೆ ತಿರ

ಸ್ಕಾರ ಪ್ರಹಾರ ಮುಂತಾದ ಸಮಸ್ತವನ್ನೂ ಆ ಜಗಜ್ಜನಕನ ಪರಮಪ್ರಸಾದವೆಂದೇ ತಿಳಿದು ಪ್ರೀತಿಪೂರ್ವಕವಾಗಿ ಸ್ವೀಕರಿಸುತ್ತಿದ್ದೇನಾದ್ದರಿಂದ ಇವುಗಳಿಂದಲೆಲ್ಲಾ ನನ್ನಲ್ಲಿ ಯಾವ ಹೆಚ್ಚು ಕಡಮೆಯೂ ಉಂಟಾಗಲಾರದೆಂದು ತಿಳಿ. ಅಲ್ಲದೆ ನನ್ನ ಆತ್ಮವನ್ನು ನೀನು ಹೊಡೆಯಲಾರೆ ಎಂಬುದಂತೂ ಸ್ವತಸ್ಸಿದ್ಧ ವಿಚಾರವು. ಇನ್ನು ದೇಹಾಭಿಮಾನವನ್ನೇ ಬಿಟ್ಟಿರುವ ನನ್ನನ್ನು ಹೊಡೆದಾದರೂ ನೀನು ಮಾಡುವುದೇನು?'' ಎಂದು ನುಡಿಯುತ್ತಾ, ಪಲ್ಲಕ್ಕಿಯನ್ನು ಹೊತ್ತುಕೊಂಡೇ ಮುಂದೆ ಸಾಗುತ್ತಿದ್ದನು.

ಹೀಗೆ - ಒಣಗಿ ಮೇಲಿನ ಸಿಪ್ಪೆಯಿಂದ ಅಂಟದಿರುವ ಅಡಕೆಯಂತೆ - ದೇಹಾಭಿಮಾನವನ್ನು ಸಂಪೂರ್ಣವಾಗಿ ತ್ಯಜಿಸಿ, ಸಾಕ್ಷೀಭೂತ ಸ್ವರೂಪನಾಗಿ ಪ್ರತ್ಯೇಕವಾಗಿ ನಿಂತ ಆ ಜೀವನ್ಮುಕ್ತ ವ್ಯಕ್ತಿಯನ್ನು ನೋಡಿ, ಆತನಾಡುತ್ತಿದ್ದ ಅಮೌಲ್ಯವಾಕ್ಯಗಳ ಅಮೋಘಾರ್ಥಗಳನ್ನು ಕೇಳಿದೊಡನೆಯೇ ರಹೂಗಣ ರಾಜನು, ಭಯಾಕ್ರಾಂತನಾಗಿ ತಟ್ಟನೆ ಪಲ್ಲಕ್ಕಿಯಿಂದ ಧುಮುಕಿ, ತಾನು ರಾಜನೆಂಬ ಗರ್ವವು ಹೆಸರಿಲ್ಲದೆ ಓಡಿಹೋಗಲು, ಇನ್ನೂ ಪಾಲಕಿಯನ್ನು ಹೊತ್ತೇನಿಂತಿದ್ದ ಆ ಭರತನ ಪಾದಗಳೆರಡಕ್ಕೂ ತನ್ನ ಹಣೆಯನ್ನು ನೀಡಿ ಸಾಷ್ಟಾಂಗ ಪ್ರಣಾಮಮಾಡಿ - 'ಮಹಾತ್ಮರಾದ ನೀವು ಯಾರು? ಜ್ವಲಿಸುತ್ತಿರುವ ಅಗ್ನಿಯಂತೆ ದೃಷ್ಟಿಸಲಶಕ್ಯವಾದ ಬ್ರಹ್ಮತೇಜಸ್ಸನ್ನು ಗುಪ್ತವಾಗಿಟ್ಟುಕೊಂಡು, ಲೋಕಕ್ಕೆ ಹುಚ್ಚರಂತೆ ತೋರುತ್ತಾ ಸಂಚರಿಸುತ್ತಿರುವ ಮಹಾಮಹಿಮರಾದ ನೀವು ಯಾರೆಂಬುದು ತಿಳಿಯದೆ, ಅಜ್ಞಾನಿಯಾಗಿ ತಮ್ಮ ವಿಷಯದಲ್ಲಿ ಆಚರಿಸಿದ ಮಹಾಪರಾಧವನ್ನು ದಯಮಾಡಿ ಕ್ಷಮಿಸಿರಿ. ತುಚ್ಛನಾದ ನನ್ನನ್ನು ಕರುಣಿಸಿ ಬುದ್ಧಿಕಲಿಸಲು ಬಂದ ಕಪಿಲ ಮಹರ್ಷಿಗಳೋ ಪನು? ಮಹಾತ್ಮಾ ತಾವು ಯಾರು? ಅಗಾಧವಾದ ಅಗ್ನಿಜ್ವಾಲೆಯಿಂದ ತುಂಬಿದ್ದರೂ ಮೇಲೆ ನೋಡುವವರಿಗೆ ಮಾತ್ರ ಶಾಂತವಾಗಿರುವಂತೆ ತೋರುವ ಜ್ವಾಲಾಮುಖಿಯಂತೆ, ಮಹಾ ತಪಸ್ಸಂಪನ್ನರಾದ ತಾವು, ಲೋಕದೂಷ್ಯವಾಗಿರುವ ಈ ಹೀನವೇಷದಿಂದ ಇರುವ ಕಾರಣವೇನು? ಓ ಯೋಗಿವರ್ಯಾ, ನಾನು ಇಂದ್ರನ ವಜ್ರಾಯುಧಕ್ಕಾಗಲಿ, ರುದ್ರನ ಶೂಲಕ್ಕಾಗಲಿ, ಯಮನ ದಂಡಕ್ಕಾಗಲಿ, ಮೃತ್ಯುವಿನ ಪಾಶಕ್ಕಾಗಲೀ ಬೆದರುವನಲ್ಲವಾದರೂ ಬ್ರಾಹ್ಮಣತಿರಸ್ಕಾರವೆಂಬ ಮಹಾಸ್ತ್ರವೊಂದಕ್ಕೆ ಮಾತ್ರ ಅಂಜುವೆನು. ತಮ್ಮ

ಬಾಯಿಂದ ಹೊರಡುವ ಒಂದೊಂದು ಮಾತೂ ಅಮೃತಸಮಾನವಾಗಿದೆ. ಯೋಗಿವರ್ಯರಾದ ತಮ್ಮ ಮಾತುಗಳ ಅಂತರಾರ್ಥವೇನೆಂಬುದು ಎಷ್ಟು ಯೋಚಿಸಿದರೂ ನನಗೆ ಹೊಳೆಯುಲೊಲ್ಲದು. ನೀವು ಹೇಳುವಂತೆ ಜೀವಾತ್ಮವು ದೇಹದಿಂದ ಪ್ರತ್ಯೇಕವಾಗಿದ್ದು, ವಿಲಕ್ಷಣವಾಗಿದ್ದರೂ ದೇಹದೊಂದಿಗಿದ್ದು ಕಾರ್ಯ ನಡೆಸುತ್ತಿರುವಾಗ ಅದಕ್ಕೆ ಶ್ರಮವು ತೋರುವುದು ಸಹಜವಲ್ಲವೆ! ಹೀಗಿರುವಾಗ ನನ್ನ ಶಿಕ್ಷಿಸುವಿಕೆಯಿಂದ ನಿಮಗೆ ಹಿಂಸೆಯಾಗುವುದಿಲ್ಲವೆಂಬುದು ಹೇಗೆ? ಅಲ್ಲದೆ, ಒಲೆಯ ಮೇಲಿಟ್ಟ ಪಾತ್ರೆಯು ಬೆಂಕಿಯ ಶಾಖದಿಂದ ಕಾಯ್ದಂತೆಲ್ಲಾ, ಒಳಗಿದ್ದ-ನೀರೂ, ತನ್ಮೂಲಕ ಅದರೊಳಗಿನ ಅಕ್ಕಿಯೂ ಕಾಯ್ದು ಅನ್ನವಾಗುವುದಲ್ಲವೆ! ಹಾಗೆಯೇ, ಜೀವನಿಗೆ ದೇಹ, ಇಂದ್ರಿಯಗಳು, ಪ್ರಾಣ, ಕರ್ಮವಾಸನೆ, ಮನಸ್ಸು ಇವುಗಳು ಅಂಟಿರುವಾಗ, ಶುದ್ಧಸ್ವರೂಪನಾದ ಆ ಜೀವಾತ್ಮನಿಗಾದರೂ ಈ ಲೌಕಿಕ ಸಂಬಂಧದಿಂದ ಸುಖದುಃಖಗಳು ಉಂಟಾಗದೆ ಇರುವುದು ಹೇಗೆ ಸಾಧ್ಯ? ಅಲ್ಲದೆ, ಗುರುವರ್ಯಾ, ಕರ್ಮವಶದಿಂದ ರಾಜನಾಗಿ ಹುಟ್ಟಿದ ನಾನು, ಭಗವದಾರಾಧನರೂಪವಾಗಿ ನನ್ನ ವರ್ಣಧರ್ಮವಾದ ಕ್ಷತ್ರಿಯ ಧರ್ಮದಲ್ಲಿ ನಡೆವುದು ದೋಷಕಾರಿಯೇ? ಮಹಾನುಭಾವ, ಅಜ್ಞನಾಗಿದ್ದೇನೆ! ರಾಜನೆಂಬ ಮದದಿಂದ ನಾನು ತಮ್ಮ ಪಾದದಲ್ಲಿ ಮಾಡಿದ ಅಪರಾಧ ತಿರಸ್ಕಾರಗಳನ್ನು ಗಣಿಸದೆ ನನ್ನಮೇಲೆ ಕೃಪೆಯಿಟ್ಟು ಈ ಸಂದೇಹಾಸ್ಪದ ವಿಚಾರಗಳನ್ನು ವಿವರಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಬೇಕು'' ಎಂದು ಬೇಡಿಕೊಂಡನು.



**ಅಧ್ಯಾಯ ೫.** **"ಪುನಃ-ತತ್ತ್ವೋಪದೇಶ"**

ರಾಜನ ಆ ಮಾತುಗಳನ್ನು ಕೇಳಿ, ಭರತಮಹರ್ಷಿಯು, ಮುಖದಲ್ಲಿ ಮಂದಹಾಸವು ತೋರುತ್ತಿರಲು- 'ರಾಜಾ, ಜೀವಾತ್ಮ ಪರಮಾತ್ಮರ ಸ್ವರೂಪವೇನೆಂಬುದನ್ನು ಅರಿಯದ ನೀನು ಬಲ್ಲವನಂತೆ ಆಕ್ಷೇಪಿಸುತ್ತಿರುವುದು ಸಮಂಜಸವಲ್ಲ. ಜ್ಞಾನಿಗಳಾದವರು ಈ ಬಗೆಯ ಲೌಕಿಕ ಉದಾಹರಣೆಗಳಿಂದ ಆತ್ಮವಿಚಾರಗಳನ್ನು ನಿರ್ಧರಿಸಲು ಯತ್ನಿಸುವುದಿಲ್ಲ. ಪ್ರಕೃತಿ ಪುರುಷ ಪರಮಾತ್ಮ ಎಂಬ ಈ ತತ್ವ ತ್ರಯಗಳ ವಿಚಾರವನ್ನು, ಕೇವಲ ಯಜ್ಞಯಾಗಾದಿ ಕರ್ಮ ವಿಚಾರವನ್ನೇ ವಿಸ್ತಾರವಾಗಿ ವರ್ಣಿಸುತ್ತಿರುವ, ವೇದಗ-

ಪೂರ್ವಭಾಗವು, ತಿಳಿಸಲಾರದು. ಆ ಬಗೆಯ ಕರ್ಮಮಾರ್ಗದಲ್ಲಿ ಅಭಿಲಾಷೆ ವುಳ್ಳವರಿಗೆ ಜ್ಞಾನಮಾರ್ಗದಲ್ಲಿ ರುಚಿಯೂ ಹುಟ್ಟಲಾರದು. ಮೋಕ್ಷವೊಂದಲ್ಲದೆ, ಮಿಕ್ಕ ಇಹಲೋಕ ಪರಲೋಕಗಳ ಸುಖಗಳೆಲ್ಲವೂ ಸ್ವಪ್ನಸುಖದಂತೆ ಕ್ಷಣಿಕಗಳೆಂಬ ಪರಿಜ್ಞಾನವು ಆ ಕರ್ಮಮಾರ್ಗಾನುವರ್ತಿಗಳಿಗೆ ಇರಬಹುದಾದರೂ, ಅದು ನಿಶ್ಚಯ ತತ್ವಜ್ಞಾನವನ್ನು ಹುಟ್ಟಿಸಲಾರದು. ಕರ್ಮಮಾರ್ಗವು ಜ್ಞಾನಸಾಧನೆಗೆ ಪೂರ್ವಸಿದ್ಧತೆಯಾದರೂ ವಿರಕ್ತಿಯಿಲ್ಲದೆ ಎಷ್ಟು ಕರ್ಮ ಮಾಡಿದರೂ ಅದರಿಂದ ಜ್ಞಾನಸಿದ್ಧಿಯಾಗದು. ಜೀವನ ಮನಸ್ಸು, ಸಾತ್ವಿಕ ರಾಜಸ ಮತ್ತು ತಾಮಸವೆಂಬ ಈ ಮೂರು ಗುಣಗಳ ವಶವಾಗಿರುವವರೆಗೆ, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಅಧಿಕಾರಕ್ಕೆ ಒಳಪಟ್ಟಿದ್ದಾಗಿ ಅನೇಕ ವಿಧವಾದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳನ್ನು ಮಾಡುತ್ತಲೇ ಇರುವುದು. ರಾಜಾ, – "ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂದು ದೊಡ್ಡವರು ಹೇಳುವರಲ್ಲವೆ! ಈ ಮನಸ್ಸೇ ಜನನ ಮರಣಗಳಿಗೂ ಬಂಧಮೋಕ್ಷಗಳಿಗೂ ಹೇಗೆ ಕಾರಣವಾಗುವುದೆಂಬುದನ್ನು ಸೂಕ್ಷ್ಮವಾಗಿ ಹೇಳುವೆನು ಕೇಳು! ಮನಸ್ಸಿನಲ್ಲಿ ಮೊದಲು ಜೀವನ ಕರ್ಮ ಸಂಬಂಧದಿಂದ ವಿಷಯವಾಸನೆಯು ಉತ್ಪನ್ನವಾಗುವುದು. ಆಮೇಲೆ ಅದು ಸುಖದಲ್ಲಿ ಆಸಕ್ತಿಗೊಳ್ಳುವುದು. ಆಮೇಲೆ ಅದಕ್ಕೆ ಸತ್ವರಜಾದಿಗುಣಗಳ ಪ್ರವೇಶವಾಗುವುದು. ಒಡನೆ ಕಾಮ ಕ್ರೋಧ ಮುಂತಾದ ಷಡ್ವೈರಿಗಳು ಪ್ರವೇಶಿಸಿ ಬಲಗೊಳ್ಳುವುವು. ತರುವಾಯ ಕರ್ಮೇಂದ್ರಿಯಜ್ಞಾನೇಂದ್ರಿಯಗಳ ಸಂಪರ್ಕವಾಗಿ ಅದು ಹಲವು ಬಗೆಯ ಕರ್ಮಗಳಲ್ಲಿ ಪ್ರವೃತ್ತವಾಗುವುದು. ಶರೀರವನ್ನು ತನ್ನದೆಂದು ಭ್ರಾಂತಿ ಪಡುವುದು. ತಾನು ಸ್ಫುರದ್ರೂಪಿ, ತರುಣ, ರಾಜ, ಪೌರುಷಶಾಲಿ ಎಂದು ಮುಂತಾಗಿ ಹೆಮ್ಮೆ ಪಡುವುದೂ ಸಹ, ಮನಸ್ಸಿನ ಅಹಂಕಾರ ಮಮಕಾರಗಳ ಫಲವೇ! ಮುಖ್ಯ ಇವುಗಳೆಲ್ಲಕ್ಕೂ ಕಾರಣವಾದ ಕರ್ಮ ಸಂಬಂಧಕ್ಕೂ ತನ್ಮೂಲಕವಾಗಿ ಮನಸ್ಸಿನಿಂದ ನಡೆಯಿಸಲ್ಪಡತಕ್ಕ ಸಮಸ್ತ ಕಾರ್ಯಗಳಿಗೂ ಸೂತ್ರಧಾರಕನಾದವನು ಪರಮಾತ್ಮನು. ಆತನೇ ಸಮಸ್ತಕ್ಕೂ ಆದಿಕಾರಣನು. ಸ್ವಯಂಪ್ರಕಾಶವುಳ್ಳವನು. ಸರ್ವತಂತ್ರ ಸ್ವತಂತ್ರನು. ಬ್ರಹ್ಮಾದಿಗಳಿಗೂ ನಿಯಾಮಕನು. ನಾರಾಯಣ ವಾಸುದೇವ ಮುಂತಾದ ಅನಂತ ನಾಮಗಳಿಂದ ಹೊ

ಗಳೆಲ್ಲವುಡತಕ್ಕವನು ಈತನೇ! ಆತನು, ವಾಯುವು ಚರಾಚರಾತ್ಮಕವಾದ ಸಮಸ್ತ ಪ್ರಪಂಚವನ್ನೂ ವ್ಯಾಪಿಸಿರುವಂತೆ ಸಮಸ್ತವನ್ನೂ ವ್ಯಾಪಿಸಿ ಅಂತರ್ಯಾಮಿಯಾಗಿರುತ್ತಿರುವನು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿ ನಿಶ್ಚಯಗೊಳಿಸಿ, ಅದರಿಂದ ಅಹಂಕಾರ ಮಮಕಾರಗಳನ್ನೂ, ದೇಹಾಭಿಮಾನಾದಿಗಳನ್ನೂ, ಕಾಮಕ್ರೋಧಾದಿ ಆರು ಮಂದಿ ಶತ್ರುಗಳನ್ನೂ ನೀಗಿಸಿ, ಅದನ್ನು ಶುದ್ಧಿಗೊಳಿಸಿದೊಡನೆಯೇ ಅದು ಸಂಸಾರ ಚಕ್ರದಲ್ಲಿ ಸುತ್ತುವ ಈ ವ್ಯರ್ಥ ಕಾರ್ಯವನ್ನು ತ್ಯಜಿಸಿ ಭಗವತ್ಪರವಾಗುವುದು. ಹಾಗಾದ ಒಡನೆಯೇ, ರಾಜನೇ ನೀನು ಪ್ರಾರಂಭದಲ್ಲಿ ಕೇಳಿದ ಪ್ರಶ್ನೆಗಳೆಲ್ಲಕ್ಕೂ ಪ್ರತ್ಯುತ್ತರವು ದೊರೆವುದು. ಅಪ್ಪಾಗದಿರುವವರೆಗೆ, ಮನಸ್ಸೆಂಬುದು ಜೀವಾತ್ಮನಿಗೆ ಶತ್ರುವಾಗಿರುವುದೆಂಬುದನ್ನು ಮರೆಯಬೇಡ. ಆ ಮನಸ್ಸನ್ನು, ಭಗವಂತನ ಪಾದಾಶ್ರಯವೆಂಬ ಶಸ್ತ್ರದಿಂದ ವಧಿಸಿದಲ್ಲದೆ, ಜೀವನಿಗೆ ಬೇರೆ ಉಪಾಯವೇ ಇಲ್ಲವೆಂದು ತಿಳಿ'' ಎಂದು ಬೋಧಿಸಿದನು.

ಜಡಭರತಮಹರ್ಷಿಯ - ಆತ್ಮೋನ್ನತಿಕರವಾದ ಈ ಬೋಧನೆಯನ್ನು ಕೇಳಿ, ರಹೂಗಣರಾಜನು, ಪುನಃ ಆತನ ಪಾದಗಳಿಗೆ ನಮಸ್ಕರಿಸಿ – 'ಮಹಾತ್ಮಾ, ನಿಮ್ಮ ಕೃಪೆಯು ಅಪಾರವಾದುದು. ಲೋಕಕ್ಷೇಮವನ್ನೇ ಮುಖ್ಯಾಶಯವನ್ನಾಗಿ ಇಟ್ಟುಕೊಂಡಿರುವ ನೀವು, ಆತ್ಮಜ್ಞಾನದಿಂದ ಯಾವ ಪ್ರಾಣಿಯಲ್ಲೂ ವಿರೋಧ ಬುದ್ಧಿಯಿಲ್ಲದೆ ಸಮಸ್ತ ಭೂತಗಳನ್ನೂ ಸಮಬುದ್ಧಿಯಿಂದ ಕಾಣುತ್ತಿರುವಿರಿ. ಹಾಗಲ್ಲದಿದ್ದರೆ ಮಹಾಪರಾಧಿಯಾದ ನನ್ನ ವಿಷಯದಲ್ಲಿ ಇಷ್ಟುಮಟ್ಟಿನ ದಯೆಯನ್ನು ತೋರಿಸುತ್ತಿದ್ದಿರಾ! ಅತಿಶಯ ದೇಹಾಭಿಮಾನದಿಂದಲೂ, ಅಹಂಕಾರ ಮಮಕಾರಗಳಿಂದಲೂ ಕೂಡಿ ವಿವೇಕಹೀನನಾದ ನನಗೆ – ರೋಗಪೀಡಿತನಿಗೆ ದೊರೆತ ಮಹೌಷಧದಂತೆ, ತಮ್ಮ ಬೋಧನೆಯು ಅಮೃತ ತುಲ್ಯವಾಗಿರುವುದು. ಮಹಾತ್ಮಾ, ಕೇವಲ ಅಧ್ಯಾತ್ಮ ತತ್ವಗಳನ್ನೊಳಕೊಂಡಿರುವ ತಮ್ಮ ಈ ಬೋಧನೆಗಳು, ಕೇವಲ ಅಜ್ಞನಾಗಿರುವ ನನಗೆ ಸರಿಯಾಗಿ ಅರ್ಥವಾಗುತ್ತಿಲ್ಲ. ಆದುದರಿಂದ ಪುನಃ ಪ್ರಶ್ನಿಸಬೇಕಾಗಿದೆ. ನಾವು ಕಾರ್ಯಮಾಡಿ ಶ್ರಮಪಟ್ಟಲ್ಲಿ ಉಂಟಾಗುವ ಬೆವರು - ನಿಟ್ಟುಸಿರು ಮುಂತಾದುವುಗಳನ್ನು ಕಾಣುತ್ತೇವಲ್ಲವೆ ! ಪ್ರತ್ಯಕ್ಷದೃಷ್ಟಿ ಗೋಚರವಾಗುವ ಈ ಬಗೆಯ ಆಯಾಸವು ಕೇವಲ ದೇಹಕ್ಕೆ ಮಾತ್ರವೇ ಪ್ರಾಪ್ತವಾದುದೇ.

ಅಥವಾ ಈ ಶ್ರಮಾನುಭವವು ಜೀವನಿಗೂ ಉಂಟೇ? ಈ ವಿಷಯದಲ್ಲಿ ನನಗಿರುವ ಸಂದೇಹವನ್ನು ಹೋಗಲಾಡಿಸಬೇಕು, ಎಂದು ಪ್ರಾರ್ಥಿಸಿದನು.

ಅದನ್ನು ಕೇಳಿದ ಜಡಭರತನು—'ರಾಜಾ' ಏನು ಮಹದ್ವಿಚಾರವೆಂದು ಈ ಚಿಂತೆಯನ್ನು ಹಚ್ಚಿಕೊಂಡಿರುವೆ? ಇವೆಲ್ಲವೂ ಪಂಚಭೂತಗಳಿಂದ ಉಂಟಾದ ವಿಕಾರವೇ ಅಲ್ಲದೆ ಇದರಲ್ಲಿ ಬೇರೇನಿದೆ? ಜೀವನ ಕರ್ಮ ವಿಶೇಷದಿಂದ ಪಂಚಭೂತಗಳ ಸಂಬಂಧವಾಗಿ, ಚರ ಅಥವ ಅಚರ ಸ್ವರೂಪದಲ್ಲಿ ಅವನಿಗೆ ಜನ್ಮವಾಗುವುದು. ಆಗ ಅದಕ್ಕೆ ಮನುಷ್ಯ ಮರ ಮೃಗ ಪಕ್ಷಿ ಎಂಬೊಂದು ಬಗೆಯ ರೂಪವೇರ್ಪಡುವುದು. ಆ ಆಕಾರವಾದರೂ ಪಂಚಭೂತಗಳ ವಿಕಾರದಿಂದ ಉಂಟಾದ ಸ್ವರೂಪವೇ ಹೊರತು ಬೇರೇನೂ ಅಲ್ಲವೆಂದು ತಿಳಿ. ಆ ಸ್ವರೂಪವನ್ನೇ ಅಭಿಮಾನಿಯಾದ ಜೀವನು 'ನಾನು-ನನ್ನದು' ಎಂದು ಭಾವಿಸಿ ಅಹಂಕಾರಗೊಳ್ಳುವನು. ಈಗ ನೋಡು. ನೆಲದ ಮೇಲೆ ಈ ಪಾದಗಳಿವೆ. ಅದರ ಮೇಲೆ ತೊಡೆ. ತರುವಾಯ ನಡು. ಅದಕ್ಕೆ ಮೇಲೆ ಎದೆ-ತೋಳುಗಳು ಇವೆ. ತರುವಾಯ ಹೆಗಲು ಇದೆ. ಆ ಹೆಗಲಿನ ಮೇಲೆ ಪಲ್ಲಕ್ಕಿಯ ಬೊಂಬು ಇದೆ. ಅದಕ್ಕೆ ಮೇಲೆ ಪಲ್ಲಕ್ಕಿ. ಅದರಲ್ಲಿ ಸೌವೀರ ದೇಶಕ್ಕೆ ಅರಸನೆಂದು ಕರೆಯಲ್ಪಡುತ್ತಿರುವ ಒಂದು ವ್ಯಕ್ತಿ. ಹೀಗೆ ಇವೆಯಲ್ಲವೆ! ವ್ಯವಹಾರದಲ್ಲಿ ನೋಡು. ಪಾದದಿಂದ ಹಿಡಿದು ಹೆಗಲಿನವರೆಗೂ ಒಂದೇ ಬಗೆಯ ಮಾಂಸಖಂಡಗಳೇ ಇದ್ದರೂ ಒಂದೊಂದಕ್ಕೆ ಒಂದೊಂದು ಹೆಸರಿರುವಂತೆಯೇ, ಪಲ್ಲಕ್ಕಿಯಲ್ಲಿ ಕುಳಿತಿರುವ ಮಾಂಸದ ಮುದ್ದೆಗೂ ರಾಜನೆಂಬ ಒಂದು ಹೆಸರು ಬಂದಿದೆ. ಆದರೆ ಆ ಮಾಂಸದ ಮುದ್ದೆಯಾದ ನೀನು – 'ನಾನು ಸಿಂಧು ಸೌವೀರದೇಶಗಳಿಗೆ ರಾಜನು' ಎಂಬ ಮದಾಂಧತೆಯನ್ನು ನಿನ್ನಲ್ಲಿ ಆರೋಪಿಸಿಕೊಂಡಿರುವೆ. ನಿಜವಾದ ತತ್ವವನ್ನು ವಿಚಾರಿಸಿ ನೋಡು. ನಿನ್ನ ಕೈಯೋ ಕಾಲೋ ತಲೆಯೋ-ರಾಜನೆಂದು ಬಿರ್‍ರಿ ಬೀಗುತ್ತಿರುವುದಾವುದು? ಇವೆಲ್ಲವೂ ಸೇರಿದ ಸಮಷ್ಟಿ ಎಂಬೆಯಲ್ಲವೆ! ಅದೊಂದು ಮಾಂಸದ ಮುದ್ದೆ. ಅದಕ್ಕೆ ಈ ಅಹಂಕಾರವು ಬರಲು ಕಾರಣವೇನು? ಯೋಚಿಸಿ ನೋಡು. ರಾಜಾ! ಇದು ಮನಸ್ಸಿನ ಚೇಷ್ಟೆಯು. ರಜಸ್ತಮೋಗುಣಗಳಿಗೆ ವಶವಾಗಿ ಮನಸ್ಸು ಮಾಡುವ ಅನರ್ಥಕಾರ್ಯಗಳನ್ನು ಕೇಳು. ಈ ಬಗೆಯ ಅಭಿಮಾನದಿಂದ ತಲೆ ತಿರುಗಿದ ನೀನು ಈ ಬಡಜನಗಳನ್ನು ಬಿಟ್ಟಿ ಹಿಡಿದು ಅವರ ವಿಷಯದಲ್ಲಿ ಎಷ್ಟು ಮಟ್ಟಿನ ದಯಾಶೂನ್ಯತೆಯಿಂದ ವರ್ತಿಸುತ್ತಿರುವೆ

ಎಂಬುದನ್ನು ಯೋಚಿಸು. ಸಾಲದುದಕ್ಕೆ 'ಈ ಜನಗಳನ್ನು ನಾನೇ ಪಾಲಿಸುತ್ತಿರುವವನು' ಎಂಬ ಅಹಂಕಾರವೂ ನಿನಗುಂಟು. ರಾಜಾ - ಈ ಅಹಂಕಾರದ ಫಲವಾಗಿ ಆಗುವ ಪರಿಣಾಮಗಳನ್ನು ತಿಳಿದೆಯಲ್ಲವೆ! ಲೋಕದಲ್ಲಿ 'ನಾನು ರಾಜನು, ನಾನು ಅಧಿಕಾರಿಯು, ನಾನು ಸುಂದರನು, ನಾನು ಧೀರನು, ನಾನು ಯಜಮಾನನು' ಎಂಬ ಮುಂತಾದ ಅಹಂಕಾರಗಳು ಹುಟ್ಟದಿದ್ದರೆ, ಅವುಗಳಿಂದ ಉಂಟಾಗುವ ಪರಿಣಾಮಗಳೂ ಉಂಟಾಗಲಾರವು. ಈ ಅಹಂಕಾರ ಮಮಕಾರಗಳೂ ದೇಹಾತ್ಮಾಭಿಮಾನಿಗಳೂ ಉಂಟಾಗುವುದಕ್ಕೆ ಆತ್ಮತತ್ವವನ್ನು ತಿಳಿಯದಿರತಕ್ಕುದೇ ಮುಖ್ಯಕಾರಣವು. ಬಗೆಬಗೆಯ ಆಕಾರ ವಿಕಾರಗಳನ್ನು ಹೊಂದಿದ ಇಂತಹ ಅಸಂಖ್ಯ ದೇಹಗಳು ದಿನವೂ ಲಯಹೊಂದುತ್ತಿರುವುದನ್ನು ನಾವು ನೋಡುತ್ತಿದ್ದೇವೆಯಲ್ಲದೆ! ಇದು ಸ್ವಾಭಾವಿಕವಾದುದು. ಏಕೆಂದರೆ ಪಂಚಭೂತಗಳಿಂದ ಹುಟ್ಟಿದ ಅವು ಪಂಚಭೂತಗಳಿಗೇ ಅಲ್ಲದೆ ಮತ್ತೆಲ್ಲಿಗೆ ಹೋದಾವು! ಆದರೆ, ಆತ್ಮವಸ್ತುವೆಂಥದೆನ್ನುವೆಯೋ! ಕೇಳು; ಅದು ಈ ಬಗೆಯ ವಿಕಾರಗಳಿಗೆ ಒಳಪಟ್ಟುದಲ್ಲ. ಸಣ್ಣದು ದೊಡ್ಡದು, ಸ್ಥೂಲ ಸೂಕ್ಷ್ಮ, ಎಂಬ ಭೇದಗಳು ಅದಕ್ಕಿಲ್ಲ. ಅದು ಕೇವಲ ಜ್ಞಾನಸ್ವರೂಪವಾದುದೆಂದು ಆತ್ಮಸ್ವರೂಪವನ್ನು ಬಲ್ಲ ಮಹಾಮಹಿಮರು ಹೇಳುವರು. ಸ್ವಜಸ್ಥಿತಿಯಲ್ಲಿ, ಅದು ಶುದ್ಧವಾಗಿ, ಸ್ವಯಂಪ್ರಕಾಶಿತವಾಗಿ, ಏಕಾಕಾರವಾಗಿ, ನಿರ್ವಿಕಾರವಾಗಿ, ಸತ್ಯವೆನಿಸಿಕೊಂಡಿರುವುದು. ಕರ್ಮಸಂಬಂಧವಾದಾಗ ಮಾತ್ರ ಇದು ನಾಮರೂಪಗುಣ ಮುಂತಾದ ಅವಸ್ಥೆಗಳಿಗೆ ಒಳಪಡುವುದು. ಅದಕ್ಕೆ ಅದರ ನೈಜಸ್ಥಿತಿಯಲ್ಲಿ ಹಸಿವು ಬಾಯಾರಿಕೆ ಜರೆ ಮೋಹ ಮುಪ್ಪು ಮರಣ ಮುಂತಾದುವುಗಳಾವುವೂ ಉಂಟಾಗುವುದಿಲ್ಲ. ಹೀಗೆ ಸತ್ಯರೂಪವೂ ಸ್ವತಂತ್ರವೂ ನಿತ್ಯವೂ ಆದ ಆ ಆತ್ಮನಿಗೆ ಪಂಚಭೂತ ಸಂಬಂಧವಾದರೂ ಏಕೆ ಪ್ರಾಪ್ತವಾಯಿತೆಂಬೆಯೋ! ಕೇಳು, ಅದು ಸರ್ವವಿಧದಿಂದಲೂ ಮಿಕ್ಕ ವಿಚಾರಗಳಲ್ಲಿ ಸ್ವತಂತ್ರವಾದುದೇ ಆದರೂ ಭಗವಂತನಾದ ಶ್ರೀಮನ್ನಾರಾಯಣನಿಗೆ ಮಾತ್ರ ಅಧೀನವಾದುದೆಂದು ತಿಳಿ. ರಾಜಾ, ಈ ಆತ್ಮತತ್ವ ವಿವೇಕವು ಯಜ್ಞ ಯಾಗಾದಿ ಕರ್ಮಗಳಿಂದಲಾಗಲೀ, ವರ್ಣಾಶ್ರಮಾದಿ ಧರ್ಮಪರಿಪಾಲನೆಯಿಂದಲಾಗಲಿ ಲಭಿಸತಕ್ಕುದಲ್ಲ. ಭಗವದ್ಭಕ್ತರಾದ ಮಹನೀಯರ ಆಶ್ರಯದಿಂದಲಲ್ಲದೆ ಇದನ್ನು ಪಡೆಯಲು ಬೇರೆ ಮಾರ್ಗವಿಲ್ಲ" ಎಂದು ಹೇಳಿ, ಆ ಭರತಮಹರ್ಷಿಯು, ತಾನು ಯಾರೆಂಬ

ವಿಚಾರವನ್ನು ಆತನಿಗೆ ತಿಳಿಸುವುದಕ್ಕಾಗಿ ತಾನು ಭರತರಾಜನಾಗಿ ಆಸೇತು ಶೀತಾಚಲವಾಗಿ ಈ ಖಂಡವನ್ನು ಆಳುತ್ತಿದ್ದಾಗಿನಿಂದ ಆವರೆಗೆ ನಡೆದ ಚರಿತ್ರೆಯನ್ನೆಲ್ಲ ಸೂಕ್ಷ್ಮವಾಗಿ ತಿಳಿಸಿದನು.

ಭರತಮಹರ್ಷಿಯು ಆ ಮಾತುಗಳನ್ನು ಕೇಳಿ ಮಹದಾನಂದ ಮಗ್ನನಾಗಿ, ಆ ಮಹಾತ್ಮನನ್ನು ಹೇಗೆ ವಂದಿಸಬೇಕೆಂದು ತೋರದೆ ನಿಂತಿದ್ದ ಆ ರಹೂಗಣರಾಜನನ್ನು ಕುರಿತು, ಪರೋಪಕಾರಶೀಲನಾದ ಆ ಮಹರ್ಷಿಯು-- ಪುನಃ ಹೇಳತೊಡಗಿದನು.- "ರಾಜೇಂದ್ರಾ ಕೇಳು, ಜೀವಾತ್ಮನು ಪಂಚಭೂತಗಳಿಂದ ಸ್ವತಂತ್ರನಾಗಿದ್ದರೂ ಭಗವಂತನಿಗೆ ಅಧೀನವಾದವನೆಂದು ಹೇಳಿದೆನಲ್ಲವೆ? ಭಗವದಧೀನವಾದ ಪ್ರಕೃತಿಯೇ ಜೀವನನ್ನು ಕರ್ಮ ಮಾರ್ಗದಲ್ಲಿ ತಳ್ಳುವುದು. ಸತ್ವರಜಸ್ತಮೋಗುಣಗಳಿಗೆ ವಶನಾಗಿ ಆ ಕರ್ಮಮಾರ್ಗದಲ್ಲಿ ಪ್ರವೇಶಿಸಿದ ಜೀವನು ಭಗವದನುಗ್ರಹವಿಲ್ಲದೆ ಸುರಕ್ಷಿತವಾಗಿ ಪ್ರಯಾಣವನ್ನು ಸಾಗಿಸಿ ಗಮ್ಯಸ್ಥಾನವನ್ನು ಸೇರಲಾರನು. ಏಕೆಂಬೆಯೋ ಈ ಕರ್ಮಮಾರ್ಗವೆಂಬುದು ಭಯಂಕರವಾದ ಅಡವಿಯಂತೆ ಬಹು ಗಹನವಾದುದು. ದೇಹಧಾರಿಯಾಗಿ ಬಂದ ಜೀವನು ತ್ರಿಗುಣಾಧೀನನಾಗಿ ಸತ್ಕರ್ಮ ದುಷ್ಕರ್ಮಗಳೆಂಬ ಅನೇಕ ಬಗೆಯ ಕರ್ಮಗಳನ್ನು ಮಾಡಬೇಕಾಗಿ ಬರುವುದು. ಇವುಗಳ ಫಲವಾಗಿ ವಿವಿಧ ದೇಹಗಳನ್ನು ಎತ್ತುತ್ತ-ಸಾಯುತ್ತ, ವಿವಿಧ ಅನುಭವಗಳನ್ನು ಪಡೆಯುತ್ತ ಸ್ಮಶಾನದಂತೆ ಭಯಂಕರವಾದ ಮಾರ್ಗದಲ್ಲಿ ಪ್ರವೇಶಿಸುವುದೂ ತಪ್ಪದು. ಸತ್ಕರ್ಮಗಳ ಫಲವಾಗಿ ಅಲ್ಪಸ್ವಲ್ಪ ಲಭ್ಯವಾಗಿದ್ದ ಪುಣ್ಯವಾದರೂ-ಹೆಚ್ಚು ಹಣವನ್ನು ಸಂಪಾದಿಸಬೇಕೆಂದು ಹೊರಟ ವ್ಯಾಪಾರಿಯು ಕಾಡುಮಾರ್ಗದಲ್ಲಿ ಕಳ್ಳರಕೈಗೆ ಸಿಕ್ಕಿಬಿದ್ದು ಇದ್ದುದು ಬದ್ದುದನೆಲ್ಲ ಕಳೆದುಕೊಳ್ಳುವಂತೆ-ಇಂದ್ರಿಯಗಳಿಗೂ, ಕಾಮಕ್ರೋಧಾದಿ ಷಡ್ರಿಪುಗಳಿಗೂ ವಶವಾಗಿ ನಷ್ಟವಾಗುವುದು. ಕಾಡಿನಲ್ಲಿ ಅನಾಥವಾಗಿ ಸಿಕ್ಕ ಕುರಿಮರಿಯನ್ನು ತೋಳಗಳೂ ಚಿರತೆಗಳೂ ಹೇಗೆ ಕಿತ್ತು ತಿನ್ನುವುವೋ, ಹಾಗೆಯೇ ಲೇಶಮಾತ್ರ ಸತ್ಪಥದಲ್ಲಿ ನಡೆಯಬೇಕೆಂದು ಯತ್ನಿಸಿತೊಡಗುವ ಜೀವನ ದುರ್ಬಲವಾದ ಮನಸ್ಸನ್ನಾದರೂ ಹೆಂಡಿರೂ ಮಕ್ಕಳೂ ನಂಟರಿಷ್ಟರೂ ಹಿಡಿದು ಪೀಡಿಸಿ ಗೋಳಾಡಿಸುತ್ತಿರುವರು. ಅಜ್ಞಾನಿಯಾದ ಜೀವನಾದರೋ ಮಾಯಾಮೋಹಿತನಾಗಿ, ಆ ಹೆಂಡಿರುಮಕ್ಕಳನ್ನೇ ತನ್ನ ಹಿತಚಿಂತಕರೆಂದು ಭಾವಿಸುವನು. ಅವರ ಸಂತೋಷಕ್ಕೆಂದು ದ್ರವ್ಯಾದಿಗಳನ್ನು ಸಂಪಾದಿಸುವುದಕ್ಕಾಗಿ

ಅವನು ಮಾಡತೊಡಗುವ ಘೋರ ಪಾಪಗಳಿಗೆ ಕೊನೆ ಮೊದಲಿಲ್ಲ. ಕಾಲ ದುದಕ್ಕೆ ಅವನಿಗೆ ಈ ಭವಾಟವಿಯಲ್ಲಿ ದುರ್ಜನರೆಂಬ ಕಾಡುನೊಣ ಜೇನು ನೊಳ್ಳೆಗಳ ಕಾಟವೂ ಸಂಭವಿಸುವುದು. ಅವನು ಮಧ್ಯೆಮಧ್ಯೆ ತರುಣಸ್ತ್ರೀ ಯರ ಮೋಹಬಲೆ ಎಂಬ ಕಗ್ಗತ್ತಲೆಯಲ್ಲಿ ಸಿಕ್ಕು ಮಾರ್ಗತಿಳಿಯದೆ ಸಂಕ ಟಪಡತೊಡಗುವನು. ವಿಷಯಾಭಿಲಾಷೆಯೆಂಬ ಅಂಧಕೂಪದಲ್ಲಿ ಬಿದ್ದು ಅವನು ಮಾಡತೊಡಗುವ ಅತ್ಯಾಚಾರಗಳೋ ಒಂದೆರಡಲ್ಲ. ಈ ವಿಷಯಾ ದಿಗಳು ಬಿಸಿಲ್ಗುದುರೆಗಳಂತೆ ಅವನಿಗೆ ಮೇಲೆ ಮೇಲೆ ಭ್ರಾಂತಿಯನ್ನು ಹುಟ್ಟಿ ಸುತ್ತ ಅಲೆದಾಡಿಸುತ್ತಿರುವುವು. ದ್ರವ್ಯಭ್ರಾಂತಿಯಿಂದ ಅವನು ಮಿತಿಯಿ ಲ್ಲದೆ ಪಾಪಕಾರ್ಯಗಳಲ್ಲಿ ಪ್ರವೇಶಿಸಿ ಬಳಲುವನು. ಫಲಾಪೇಕ್ಷಿಯಾಗಿ ಈ ಜಾಲು, ಜಾಲಿ ಮೊದಲಾದ ಪಾಪಿವೃಕ್ಷಗಳನ್ನು ಆಶ್ರಯಿಸುವ ದಾರಿಗನಂತೆ ಅವನು ದ್ರವ್ಯಾಭಿಲಾಷೆಯಿಂದ ಹಲವುಮಂದಿ ಪಾಪಿಗಳಾದ ಧನವಂತರನ್ನು ಆಶ್ರಯಿಸಿ ವೃಥಾ ಸಂಕಟಪಡುವನು. ದಾರಿದ್ರ್ಯವೆಂಬ ಮರುಭೂಮಿ ಯಲ್ಲಿ ಪ್ರವೇಶಿಸಿದಾಗಲಂತೂ ಅವನು ಕೊನೆಮೊದಲಿಲ್ಲದ ನರಕಬಾಧೆಗಳಿಗೆ ತೌರುಮನೆಯಾಗಿ, ಸಕಲ ವಿಧವಾದ ದುಃಖಗಳಿಗೂ ಆಶ್ರಯಸ್ಥಾನವಾಗಿ, ಸಂ ಕಟಪಡತೊಡಗುವನು. ಆದರೂ ಭಗವನ್ಮಾಯಾಮೋಹಿತನಾದ ಆ ಕ್ಷುದ್ರ ಪ್ರಾಣಿಯು ಅವುಗಳ ಬಂಧನಗಳನ್ನು ಕಿತ್ತೊಗೆಯಲು ಇಷ್ಟಪಡದೆ, ಅವುಗ ಳನ್ನೇ ಸ್ವರ್ಗಸುಖವೆಂದೂ, ವೈಕುಂಠಪದವಿಯೋ ಎಂದೂ ಭಾವಿಸಿಕೊಂಡು ಅವುಗಳಲ್ಲೇ ಬಿದ್ದು ಹಿಗ್ಗುತ್ತಾ, ಬಿಸುಸುಯ್ಯುತ್ತಾ, ನಗುತ್ತಾ ಅಳುತ್ತಾ, ಸಂತೋಷಿಸುತ್ತಾ ದುಃಖಿಸುತ್ತಾ ಹೀಗೆ ಏಳುತ್ತಾ ಬೀಳುತ್ತಾ ಹಲವು ಜನ್ಮ ಗಳನ್ನೆತ್ತಿ ಮೇಲಮೇಲೆ ಗರ್ಭವಾಸ ದುಃಖಕ್ಕೆ ಪಾತ್ರನಾಗುತ್ತ ಸಾಗುತ್ತಿರು ವನು. ಪುಣ್ಯಕರ್ಮಾಧಿಕ್ಯತೆಯಿಂದ ಸ್ವರ್ಗವನ್ನು ಪಡೆದು ಕೆಲಕಾಲ ಸುಖ ಪಡಬಹುದು. ಆದರೂ ಇದರಿಂದ ಜನನ ಮರಣರೂಪವಾದ ಈ ಸಂಸಾರ ಪರಿಭ್ರಮಣವೂ - ಭವಾಟವಿಯಲ್ಲಿ ಪಡುವ ಅಸಹ್ಯ ವೇದನೆಗಳೂ ತಪ್ಪಲಾ ರವು. ಅವುಗಳಿಂದ ತಪ್ಪಿಸಿಕೊಂಡು ಸುಖಿಸಬೇಕೆಂಬುವನಿಗೆ ಒಂದೇ ಮಾ ರ್ಗವುಂಟು. ಭಗವಂತನ ಚರಣಕಮಲಗಳ ಆಶ್ರಯಕ್ಕಿಂತಲೂ ಸಂಸಾರ ಬದ್ಧನಾದ ಜೀವಿಗೆ ಬೇರೊಂದು ಉಪಾಯವಿಲ್ಲ. ರಾಜಾ, ಆಯುಸ್ಸಿನ ಬಹುಭಾಗವು ಕಳೆದುಹೋಯಿತು. ಇನ್ನಾದರೂ ಅಹಂಕಾರ ಮಮಕಾರ ಗಳನ್ನು ಛೇದಿಸು. ಪಂಚೇಂದ್ರಿಯಗಳ ಉಲ್ಬಣವನ್ನು ನಿಲ್ಲಿಸು. ಸಮಸ್ತ

ಭೂತಗಳಲ್ಲೂ ಸ್ನೇಹಪ್ರೇಮಗಳನ್ನು ಅಭ್ಯಸಿಸಿ ಸತ್ಸಹವಾಸದಿಂದ ಸದ್ಗತಿಯನ್ನು ಸಾಧಿಸು'' ಎಂದು ನುಡಿದನು.

ಮಹರ್ಷಿಯ ಆ ಮಾತುಗಳನ್ನು ಕೇಳಿದ ಆ ರಹೂಗಣರಾಜನು - ಕಣ್ಣುಗಳಿಂದ ಹರ್ಷಾಶ್ರುಗಳನ್ನು ಸುರಿಸುತ್ತ, ಪುನಃ ಪುನಃ ನಮಸ್ಕರಿಸುತ್ತ- 'ಮಹಾತ್ಮಾ ನನ್ನ ಜನ್ಮವು ಸಾರ್ಥಕವಾಯಿತು. ಸೃಷ್ಟಿಯಲ್ಲಿ ಶ್ರೇಷ್ಠವಾದ ಮನುಷ್ಯಜನ್ಮವನ್ನು ಎತ್ತಿಯೂ ಕಾಮಕ್ರೋಧಾದಿಗಳಿಗೂ- ದುರ್ಮೋಹಾದಿಗಳಿಗೂ ಒಳಗಾಗಿ ಭವಾಂಧ ಕೂಪದಲ್ಲಿ ಬೀಳುತ್ತಿದ್ದ ನನಗೆ, ಅಪ್ರಾರ್ಥಿತರಾಗಿ ಒದಗಿ ಸದ್ಬೋಧೆಯಿಂದ ಜ್ಞಾನನೇತ್ರಗಳನ್ನು ಕರುಣಿಸಿದ ದಯಾಮಯರಾದ ತಮ್ಮನ್ನು ನಾನು ಏನೆಂದು ಸಂಬೋಧಿಸಲಿ. ಆಪದ್ಬಾಂಧವರಾದ ತಮಗೆ ಅಲ್ಪನೂ ಅಶಕ್ತನೂ ಅಜ್ಞನೂ ಆದ ನಾನು ಏನು ಪ್ರತ್ಯುಪಕಾರವನ್ನು ಮಾಡಬಲ್ಲೆನು ಪ್ರಭೋ! ತಮ್ಮಂತೆ ಲೋಕರಕ್ಷಣೆಗಾಗಿ ರೂಪವನ್ನು ಮರೆಸಿಕೊಂಡು ಸಂಚರಿಸುತ್ತಿರುವವರು, ಪ್ರಾಯಸ್ಥರಾಗಲೀ ವಟುಗಳಾಗಲೀ, ವೃದ್ಧರಾಗಲೀ, ಬಾಲಕರಾಗಲಿ, ಎಲ್ಲರಿಗೂ ಇದೋ ದೀರ್ಘದಂಡವತ್ ಪ್ರಣಾಮ ಮಾಡುವೆನು. ತಮ್ಮಂತೆ ಬ್ರಹ್ಮತೇಜೋವಿರಾಜಮಾನರಾಗಿ ಅವಧೂತ ವೇಷದಿಂದ ಲೋಕದಲ್ಲಿ ಸಂಚರಿಸುತ್ತಿರುವ ಸಮಸ್ತ ಬ್ರಾಹ್ಮಣರಿಗೂ ಇದೋ ನಮಸ್ಕರಿಸುವೆನು, ತಮ್ಮಂತಹ ಬ್ರಾಹ್ಮಣರು ಸದಾಕಾಲದಲ್ಲಿಯೂ, ದುರ್ಮದಾಂಧತೆಯಿಂದ ಕಣ್ಣುಕಾಣದೆ ನಡೆಯುತ್ತಿರುವ ನಮ್ಮೀ ಕ್ಷತ್ರಿಯ ಕುಲವನ್ನೂ, ಪೃಥ್ವಿಯ ಅಜ್ಞ ಸಮುದಾಯವನ್ನೂ, ತಮ್ಮ ಬೋಧನೆಗಳೆಂಬ ಅಮೃತವರ್ಷವನ್ನು ಸುರಿಸಿ ರಕ್ಷಿಸುತ್ತಿರಬೇಕು'' ಎಂದು ನುಡಿದು ಆ ಮಹರ್ಷಿಯನ್ನು ವಿಧ್ಯುಕ್ತವಾಗಿ - ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಆತನಿಂದ ಅಪ್ಪಣೆಯನ್ನು ಪಡೆದು, ತನ್ನ ರಾಜ್ಯಾಭಿಮುಖವಾಗಿ ಪ್ರಯಾಣ ಮಾಡಿದನು. ಮತ್ತು ಆ ಮಹಾಮುನಿಯಿಂದ ತಾನು ಕೇಳಿದ ಸಮಸ್ತ ತತ್ತ್ವೋಪದೇಶಗಳನ್ನೂ ಮೇಲೆ ಮೇಲೆ ಮನನ ಮಾಡುತ್ತಾ ಕ್ರಮಕ್ರಮವಾಗಿ ಪಂಚೇಂದ್ರಿಯಗಳನ್ನು ಜಯಿಸಿ ವಶಪಡಿಸಿಕೊಂಡು, ಕಾಮಕ್ರೋಧಾದಿ ಷಡೂರ್ಮಿಗಳನ್ನೂ ನಿಗ್ರಹಿಸಿ, ಭಗವಂತನಾದ ಶ್ರೀಮನ್ನಾರಾಯಣನ ಪಾದಕಮಲಗಳಲ್ಲಿ ಚಿತ್ತವನ್ನು ನೆಲೆಗೊಳಿಸಿ - ದೇಹಾವಸಾನಕಾಲದಲ್ಲಿ ಸದ್ಗತಿಯನ್ನೇ ಹೊಂದಿದನು.



# ಉ ಪ ಸಂ ಹಾ ರ

ರಹೂಗಣರಾಜನು ಹೋದಮೇಲೆ ಜಡಭರತಮಹರ್ಷಿಯು ಎಂದಿನಂತೆಯೇ ಯಥೇಚ್ಛವಾಗಿ ಹೊರಟನು. ಜಲಪೂರ್ಣವಾದ ಮಹಾ ಸಮುದ್ರದಂತೆ ಶಾಂತನೂ ನಿರ್ಮಮನೂ ನಿರ್ಭೀತನೂ ಆದ ಆ ಮಹಾನುಭಾವನು, ರಹೂಗಣರಾಜನಂತೆಯೇ ಭವಾರಣ್ಯದಲ್ಲಿ ತೊಳಲುತ್ತ ದುರ್ಮಾರ್ಗದಲ್ಲಿ ಪ್ರವೇಶಿಸುತ್ತಿದ್ದ ಹಲವರನ್ನು ತನ್ನ ಸದ್ಬೋಧೆಯಿಂದ ಸನ್ಮಾರ್ಗದಲ್ಲಿ ಬಿಟ್ಟು ಪೋಷಿಸುತ್ತಾ ಇದ್ದು- ಪ್ರಾರಬ್ಧಕರ್ಮವು ಸವೆಯುವವರೆಗೆ ದೇಹವನ್ನು ಧರಿಸಿದ್ದು ತರುವಾಯ, ಕರ್ಮಸಂಚಯವು ನಷ್ಟವಾದುದರಿಂದ ಪಾಂಚಭೌತಿಕ ದೇಹವನ್ನು ವಿಸರ್ಜಿಸಿ ಬ್ರಹ್ಮ ಸಾಯುಜ್ಯವನ್ನು ಹೊಂದಿದನು.

ಜಡಭರತಮಹರ್ಷಿಯಂತೆ ಅಹಂಕಾರ ಮಮಕಾರಾದಿಗಳನ್ನು ನಿಶ್ಶೇಷವಾಗಿ ನೀಗಿ ಪ್ರಪಂಚದಲ್ಲಿ ವಾಸಿಸುವುದು, ಆತನಂತಹ ಮಹಾನುಭಾವರುಗಳಲ್ಲದೆ ಅನ್ಯರಿಗೆ ಸಿದ್ಧಿಸದೆಂಬುದು ವಾಸ್ತವವಾದರೂ, ಪ್ರಾಪಂಚಿಕರಾದ ನಾವು ಆತನ ಆಚರಣೆಯಿಂದ ನಮ್ಮ ಸ್ಥಿತಿಗತಿಗಳನ್ನು ಕೆಲಮಟ್ಟಿಗಾದರೂ ರೂಪಿಸಿಕೊಳ್ಳಲು ಬಾಧಕವಿಲ್ಲವಲ್ಲವೆ! ಪಾಶ್ಚಾತ್ಯ ನಾಗರಿಕತೆಯ ಮೋಹಕ್ಕೊಳಗಾಗಿ ವಿಷಯಾಭಿಲಾಷೆಯಿಂದ-ಕಣ್ಣು ಕಟ್ಟಿಕೊಂಡು ಓಡತೊಡಗಿದವನು ಹಾಳು ಭಾವಿಗೆ ಬಿದ್ದಂತೆ-ಬೀಳದೆ, ಸಾಧ್ಯವಾದ ಮಟ್ಟಿಗೂ ಎಚ್ಚರದಿಂದ ನಡೆಯಬಹುದಲ್ಲವೆ! ಲೌಕಿಕವನ್ನು ಸಾಗಿಸಬೇಕಾಗಿದ್ದರೂ ಇಂದ್ರಿಯ ವಶರಾಗಿ ಮೋಸಹೋಗದೆ ಇರಬಹುದಲ್ಲವೆ! ಸಂಸಾರದಲ್ಲಿ ಪತ್ನೀಪುತ್ರಾದಿಗಳಿಂದ ಯುಕ್ತರಾಗಿದ್ದರೂ ಜನ್ಮದಾತನಾದ ಜಗಜ್ಜನಕನಾದ ಸರ್ವೇಶ್ವರನನ್ನು ಮರೆಯದೆ, ಧ್ಯಾನಿಸುತ್ತಿದ್ದು ಸದ್ಗತಿಯನ್ನು ಸಾಧಿಸಿಕೊಳ್ಳಬಹುದಲ್ಲವೆ! ಅಂತಲ್ಲವೆ, ಕರ್ಮಧರ್ಮ ಸಂಯೋಗದಿಂದ ತಮ್ಮ ಸನಾತನ ಧ್ಯೇಯಗಳನ್ನು ಮರೆತು ದಾರಿತಪ್ಪುತ್ತಿರುವ ಭಾರತೀಯರು ಲೌಕಿಕ ಧ್ಯೇಯಸಾಧನೆಯಲ್ಲಿ ಪಾರತ್ರಿಕ ಗತಿಯನ್ನು ಮರೆಯದೆ ವರ್ತಿಸಲಿ. ಸರ್ವಶಕ್ತಿಮಾನ್ ಲೋಕನಾಯಕನು ಅಂತಹ ಸದ್ಬುದ್ಧಿ ಸಚ್ಚರಿತ್ರೆಗಳನ್ನು ಅವರಿಗೆ ಕರುಣಿಸಿ ರಕ್ಷಿಸಲಿ-

ತಥಾಸ್ತು.

—⁘ ಶ್ರೀ ರಾಮ ಸಹಾಯಂ ⁘—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಪ್ರಸ್ತುತ ಚರಿತ್ರೆಯು, ಮಹಾತ್ಮಾ ಏಸುಕ್ರಿಸ್ತನ ಪವಿತ್ರ ಜೀವಿತವನ್ನು ಕುರಿತು ಬರೆಯಲ್ಪಡುವುದು. ಧರ್ಮರಕ್ಷಣೆಗಾಗಿಯೂ, ಮಾನವ ಲೋಕದ ಉದ್ಧಾರಕ್ಕಾಗಿಯೂ, ಪ್ರಪಂಚದಲ್ಲಿ ಜನ್ಮವೆತ್ತಿದ ಮಹಾನ್ ವ್ಯಕ್ತಿಗಳಲ್ಲಿ ಮಹಾತ್ಮಾ ಏಸುಕ್ರಿಸ್ತನೂ ಒಬ್ಬಾತನು. ಆತನ ಸಾಧು ಚರಿತ್ರೆಯೂ, ಅದ್ವಿತೀಯ ವೈರಾಗ್ಯವೂ, ನಿಷ್ಕಪಟ ಮನೋಭಾವವೂ, ನಿಷ್ಕಲ್ಮಷ ಜೀವಿತವೂ ಇಂದು ಆತನನ್ನು ಭೂಲೋಕದ ಹಲವು ಕೋಟಿ ಮಾನವ ಸಮೂಹಕ್ಕೆ ಗುರುಸ್ಥಾನದಲ್ಲಿ ಇರಿಸಿರುವುವು- ಮಾತ್ರವಲ್ಲ ; ಆದ್ಯಂತ ಮಾನವ ಕುಲವೂ, ಆತನ ಪವಿತ್ರ ಜೀವಿತದಿಂದ ಕಲಿತು, ತಮ್ಮ ನಿತ್ಯ ಜೀವಿತದಲ್ಲಿ ಅನುಸರಿಸಿ ನಡೆಯಬೇಕಾದ ಹಲವು ವಿಚಾರಗಳು ಆ ಮಹಾತ್ಮನ ಜೀವನ ಚರಿತ್ರೆಯಲ್ಲಿ ಅಡಗಿವೆ. ಲೋಕದಲ್ಲಿ ಬಂಗಾರ, ರತ್ನ, ಕಮಲಪುಷ್ಪ, ಕಸ್ತೂರಿ ಮುಂತಾದ ಶ್ರೇಷ್ಠ ವಸ್ತುಗಳನ್ನು ಅವುಗಳು ಉದ್ಭವಿಸಿದ ಸ್ಥಳಗಳ ಹೆಚ್ಚು ಕುಂದುಗಳನ್ನು ಗಮನಿಸದೆ ಸಕಲರೂ ಪರಿಗ್ರಹಿಸಿ ಸಂತೋಷಿಸುವರಲ್ಲವೆ? ಹಾಗಿರುವಲ್ಲಿ, ಅಲೌಕಿಕ ಸದ್ಗುಣಗಳ ಮೂರ್ತಿಯೂ, ಸತ್ಯ ಧರ್ಮ ನೀತಿ ನ್ಯಾಯಗಳ ಸ್ವರ್ಗಸಾಮ್ರಾಜ್ಯವನ್ನು ಲೋಕದಲ್ಲಿ ಸ್ಥಾಪಿಸುವ ಮಹತ್ಕಾರ್ಯ ಸಾಧನೆಗಾಗಿಯೇ ತನ್ನ ಭೌತಿಕ ದೇಹವನ್ನು ಬಲಿದಾನವಾಗಿ ಅರ್ಪಿಸಿದ ಅದ್ವಿತೀಯ ಸ್ವಾರ್ಥತ್ಯಾಗಿಯೂ, ಆದ ಪರಮ ಸಾಧು ಏಸುಕ್ರಿಸ್ತನ ದಿವ್ಯ ಜೀವಿತವನ್ನೂ, ಆತನ ಪವಿತ್ರ ಆಚರಣೆಗಳನ್ನೂ ತಿಳಿದು, ಆ ಅಮೂಲ್ಯ ಸದ್ಗುಣಗಳಲ್ಲಿ ನಮಗೆ ಸಾಧ್ಯವಿದ್ದಷ್ಟನ್ನಾದರೂ ಆಚರಣೆಗೆ ತಂದು, ನಮ್ಮ ಲೌಕಿಕ ಜೀವಿತಗಳನ್ನು ಸುಖಮಯವನ್ನಾಗಿಸಿಕೊಳ್ಳುವುದು ಅವಶ್ಯಕವೆಂಬುದರಲ್ಲಿ ಆಕ್ಷೇಪಣೆಯೇನು?

ಲೋಕದಲ್ಲಿ ಧರ್ಮವು ನಾಶವಾಗಿ ಅಧರ್ಮ ಅಸತ್ಯ ಮೋಸ ಕಾಪಟ್ಯಾದಿಗಳು ಅಭಿವೃದ್ಧಿಯಾದಾಗ, ಅವುಗಳನ್ನು ನಾಶಗೊಳಿಸಿ ಸತ್ಯ ಧರ್ಮ ನ್ಯಾಯ ನೀತಿಗಳನ್ನು ಸ್ಥಾಪಿಸುವುದಕ್ಕಾಗಿ, ಮಹಾಪುರುಷರಾಗಲೀ ಭಗವದ್ವಿಭೂತಿ

ಗಳಾಗಲೀ ಜನ್ಮವೆತ್ತುವುದು ಅನಾದಿಯಿಂದ ನಡೆದುಬಂದ ಪದ್ಧತಿಯು. ಹೀಗೆ ಧರ್ಮಸಂಸ್ಥಾಪನೆಗಾಗಿ ಬರುವವರು ಎರಡು ಬಗೆಯ ಮಾರ್ಗಗಳಿಂದ ಆ ಮಹತ್ಕಾರ್ಯವನ್ನು ಸಾಧಿಸಲು ಯತ್ನಿಸುವುದು ಸಾಮಾನ್ಯವಾಗಿ ಕಂಡು ಬಂದಿದೆ. ಅಧರ್ಮ ಅಸತ್ಯ ಮೋಸ ಪ್ರಾಣಿಹಿಂಸೆ ಮುಂತಾದ ದುಷ್ಕಾರ್ಯಗಳಲ್ಲಿ ಪ್ರವೇಶಿಸಿ, ಐಶ್ವರ್ಯ ಬಲಗರ್ವಿತರಾಗಿ, ಸದಾ ತಮ್ಮ ಸಹಜೀವಿಗಳಿಗೆ ಉಪದ್ರವಕಾರಿಗಳಾಗಿರುವ ದುಷ್ಟರನ್ನು ನಿಗ್ರಹಿಸಿ, ಸತ್ಯ ಧರ್ಮ ನ್ಯಾಯ ನಿಷ್ಠೆಗಳನ್ನು ಅನುಸರಿಸುತ್ತಿರುವ ಸಾಧು ಸಂತರನ್ನು ಅನುಗ್ರಹಿಸಿ ರಕ್ಷಿಸುತ್ತ ತನ್ಮೂಲಕ ಧರ್ಮಸ್ಥಾಪನೆ ಮಾಡಲು ಒಂದು ವರ್ಗದವರು ಯತ್ನಿಸುವರು. ಮತ್ತೊಂದು ವರ್ಗದವರು ದುಷ್ಟನಿಗ್ರಹ ಶಿಷ್ಟಪರಿಪಾಲನಗಳ ಕಾರ್ಯಕ್ಕೆ ಕೈಹಾಕದೆ, ಕೇವಲ ಸತ್ಯ ಧರ್ಮ ನೀತಿಗಳ ಅಮೌಲ್ಯ ಬೋಧನೆಗಳನ್ನು ಮಾತ್ರ ಜನಸಮಾಜದಲ್ಲಿ ಹರಹಿ, ಜನಮನವನ್ನು ಸುಧಾರಿಸಿ, ತನ್ಮೂಲಕ ಧರ್ಮಸ್ಥಾಪನೆ ಮಾಡಲು ಪ್ರಯತ್ನಿಸುವರು. ಹೀಗೆ ಇಬ್ಬರೂ ಬೇರೆಬೇರೆ ಮಾರ್ಗಗಳನ್ನು ಅವಲಂಬಿಸಿ ಕೆಲಸಮಾಡತೊಡಗುವರಾದರೂ ಎರಡು ವರ್ಗದವರ ಕಾರ್ಯಪರಿಣಾಮವು ಒಂದೇ ಆಗುವುದು. ಮೊದಲನೆಯ ವರ್ಗದವರು ತಮ್ಮ ಕಾರ್ಯಕ್ಕೆ ಬಂಗೈಯಿಂದ ಪ್ರಯತ್ನಿಸುವಂತಿಲ್ಲ. ದುಷ್ಟರು ಐಶ್ವರ್ಯ ಸಂಪನ್ನರಾಗಿ, ಬಲಗರ್ವಿತರಾಗಿ, ಸೈನ್ಯಸಹಾಯ ಸಂಪತ್ತುಗಳನ್ನು ಗಳಿಸಿಕೊಂಡು ಮಹಾ ಪ್ರಬಲರಾಗಿರುವಾಗ, ಅವರಿಗೆ ಒಳ್ಳೆಯ ಮಾತುಗಳು ರುಚಿಸಲಾರವು. ಸಾಮೋಪಾಯ ದಾನೋಪಾಯಗಳು ಅವರಲ್ಲಿ ನಡೆಯುವು. ನಯವಿನಯಗಳಿಂದ ಹೇಳುವ ನೀತಿನ್ಯಾಯಗಳ ಧರ್ಮಶಾಸ್ತ್ರವಚನಗಳನ್ನು ಸಾವಧಾನದಿಂದ ಆಲಿಸಿ, ಅವುಗಳಂತೆ ನಡೆಯುವಷ್ಟು ಸಮಾಧಾನವಾಗಲೀ ಸೌಜನ್ಯವಾಗಲೀ ಅವರಲ್ಲಿರುವುದಿಲ್ಲ. ಹಾಗೆ ಮದಾಂಧರಾಗಿ ಕೊಬ್ಬಿದ ಅವರಿಗೆ ದೇವರು ಗುರುಹಿರಿಯರು ಮಾತಾಪಿತೃಗಳು ಮುಂತಾದ ಯಾರೂ ಲಕ್ಷ್ಯಕ್ಕೆ ಬಾರರು. ಅವರ ಹಟಮಾರಿತನ ಮೂರ್ಖತೆಗಳಿಗೆ ಎದುರೇ ಇರುವುದಿಲ್ಲ. ಹೀಗೆ ಐಶ್ವರ್ಯ-ಬಲಗರ್ವಿತರಾದ ಅವರ ಹಾವಳಿಯಾದರೂ ಲೋಕಕ್ಕೆ ಸಹಿಸಲಸಾಧ್ಯವಾಗಿರುವುದು. ಆ ಸಂದರ್ಭದಲ್ಲಿ ದುಷ್ಟ ಶಿಕ್ಷಣೆಯಾಗಲೀ ಶಿಷ್ಟರಕ್ಷಣೆಯಾಗಲೀ ಧರ್ಮಸ್ಥಾಪನೆಯಾಗಲೀ ಆಗುವಂತೆಯೇ ಇರುವುದಿಲ್ಲ. - ಧರ್ಮಸ್ಥಾಪನೆಯಂತಿರಲಿ-ಅವರ

ಬಾಧೆಯಿಂದ ಸಾಧುಜನರಿಗೆ ನಿತ್ಯಜೀವಿತವು ಸಹ ಎಷ್ಟೋ ಕಷ್ಟಮಯವಾಗಿ ಪರಿಣಮಿಸುವುದು. ಹಿಂದೆ, ಪುರಾಣಕಾಲಗಳಲ್ಲಿದ್ದ ಹಿರಣ್ಯಕಶಿಪು, ರಾವಣ, ಕಂಸ, ದುರ್ಯೋಧನ, ಮುಂತಾದವರು ಈ ತರಗತಿಗೆ ಸೇರಿದ ದುರುಳರು. ಅವರನ್ನು ಯಾವ ಬಗೆಯ ಸಾಮೋಪಾಯವೂ ನೀತಿನ್ಯಾಯಗಳೂ ಮಾರ್ಗಕ್ಕೆ ತರಲಾಗಲಿಲ್ಲವೆಂಬುದು ತಿಳಿದಿದೆಯಲ್ಲವೆ! ಹಾಗೆ ಸರ್ವವಿಧ ಸಾಮಮಾರ್ಗಗಳಿಂದಲೂ ಪ್ರಯತ್ನಿಸಿ ವಿಫಲರಾದ ತರುವಾಯವೇ, ಆಯಾ ಕಾಲಗಳಲ್ಲಿ ಧರ್ಮಸ್ಥಾಪನೆಗಾಗಿ ಬದ್ಧಾಧರರಾಗಿ ಪ್ರಯತ್ನಿಸಿದ ಶ್ರೀರಾಮ-ಶ್ರೀಕೃಷ್ಣಾದಿ ಪೌರಾಣಿಕ ಮಹಾಪುರುಷರು, ಅವರಂತೆಯೇ ಸೈನ್ಯಗಳನ್ನು ಸಂಚಿಸಿಕೊಂಡು, ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿ, ಭಯಂಕರ ಯುದ್ಧಗಳನ್ನು ಮಾಡಿ. ರಕ್ತಪ್ರವಾಹಗಳನ್ನು ಹರಿಸಿ ಅವರನ್ನೂ ಅವರ ಅನುಯಾಯಿಗಳನ್ನೂ ಹಣಿದು, ತರುವಾಯ ಶಿಷ್ಟರಕ್ಷಣೆ ಧರ್ಮ ಸ್ಥಾಪನೆಗಳನ್ನು ಮಾಡಬೇಕಾಯಿತು. ಪಶುಬಲವನ್ನು ವೃದ್ಧಿಪಡಿಸಿಕೊಂಡು ಮದಾಂಧರಾಗಿರುವ ಉಪದ್ರವಕಾರಿಗಳನ್ನು ಜಯಿಸಿ, ಧರ್ಮಸ್ಥಾಪನೆ ಮಾಡಬೇಕಾಗಿರುವ ಸಂದರ್ಭದಲ್ಲೆಲ್ಲ, ಅವರಂತೆಯೇ ಸಿದ್ಧರಾಗಿ - ಯುದ್ಧರಂಗದಲ್ಲಿ ಪ್ರತಿದ್ವಂದ್ವಿಗಳಾಗಿ ನಿಂತು ಹೋರಾಡಿ, ಅವರ ರುಂಡಗಳನ್ನು ಮುಂಡಗಳಿಂದ ಪ್ರತ್ಯೇಕಿಸಿದಲ್ಲದೆ ಅನ್ಯಥಾಮಾರ್ಗವೇ ಇಲ್ಲವೆಂದು, ಅನುಭವದಿಂದ ಸಾಗಿಬಂದ ಪ್ರಪಂಚ ಚರಿತ್ರೆಯು ಹೇಳುತ್ತಿದೆ.

ಆದರೆ, ಇನ್ನೊಂದು ಮಾರ್ಗದಿಂದ ಧರ್ಮಸ್ಥಾಪನೆಗಾಗಿ ಯತ್ನಿಸುವವರ ರೀತಿಯೇ ಬೇರೆ. ಅವರೂ ಮೇಲ್ಕಂಡವರಂತೆಯೇ ಸತ್ಯ ಸಾಮ್ರಾಜ್ಯವನ್ನು ಭೂಲೋಕದಲ್ಲಿ ಸ್ಥಾಪಿಸಬೇಕೆಂಬ ಮಹತ್ಕಾರ್ಯದಲ್ಲೇ ಪ್ರವೃತ್ತರಾಗಿರುವರು. ಆದರೆ, ಅವರಲ್ಲಿ ಸೈನ್ಯ ಸರಂಜಾಮುಗಳಾಗಲೀ, ಆಳು ಕುದುರೆಗಳಾಗಲಿ, ದ್ರವ್ಯಭಾಂಡಾರವಾಗಲೀ ಇರುವುದಿಲ್ಲ. ಅವರಲ್ಲಿರುವುದೊಂದು ಆತ್ಮಶಕ್ತಿ. ಈ ಆತ್ಮಶಕ್ತಿಯ ತೇಜಸ್ಸಿನಿಂದಲೇ ಅವರು ಪ್ರತಿದ್ವಂದ್ವಿಯ ಪಶುಶಕ್ತಿಯ ಪ್ರಾಬಲ್ಯವನ್ನು ತಗ್ಗಿಸಿ, ಅವನನ್ನು ಗೆಲ್ಲಬಯತ್ನಿಸುವರು. ಮೊದಲಿನಿಂದ ಕೊನೆಯವರೆಗೂ ಸತ್ಯ ಧರ್ಮ ನೀತಿ ಮಾರ್ಗಗಳಿಗೆ ವಿರೋಧವಲ್ಲದ ಸಾಮವಾಕ್ಯಗಳಿಂದ ಬೋಧಿಸುವುದೊಂದಲ್ಲದೆ, ಅವರು ಮತ್ತಾವ ವಿಧ ಅಸ್ತ್ರ ಶಸ್ತ್ರಪ್ರಯೋಗವನ್ನೂ ಅರಿಯರು. ಈ ಮಾರ್ಗದಿಂದ

ಕಾರ್ಯಸಾಧನೆಯಾಗದೆ ಶತ್ರುಪಕ್ಷದವರು ಪ್ರಬಲಿಸಿದರೆಂದರೆ, ಇವರಿಗೆ ಚಿತ್ರಹಿಂಸೆಯೂ ಪ್ರಾಣಾಪಾಯವೂ ತಪ್ಪದೆ ಬೆನ್ನಂಟುವುವು. ತಮ್ಮ ಧರ್ಮವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಇವರು ಅನೇಕವೇಳೆ ಅಸಹನೀಯ - ವಿಚಿತ್ರಹಿಂಸೆಗಳನ್ನು ಅನುಭವಿಸಬೇಕಾಗುವುದು. ಮದಾಂಧರೂ ಕ್ರೋಧಪೂರಿತರೂ ಆದ ಆ ಘಾತುಕರು ಧರ್ಮಬೋಧಕರಾದ ಈ ಸಾಧುವರ್ಯರ ಕಣ್ಣುಗಳನ್ನು ಕೀಳಿಸಿ, ಕೈಕಾಲುಗಳನ್ನು ಕತ್ತರಿಸಿ, ಸಜೀವ ಸುಡಿಸಿ, ಶೂಲಕ್ಕೇರಿಸಿ, ಆನೆಯ ಕಾಲುಗಳಿಂದ ತುಳಿಸಿ, ಸುಣ್ಣಕಲ್ಲಿನಲ್ಲಿ ಬಿರೀ ಹಾಕಿಸಿ, ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿಸಿ, ನಿಂತಂತೆಯೇ ತಲೆ ಹೊಡೆಯಿಸಿ ಹೀಗೆ ಅನೇಕ ವಿಧ ಶಿಕ್ಷೆಗಳಿಗೆ ಗುರಿಪಡಿಸಿ ಅವರ ಪ್ರಾಣಹರಣ ಮಾಡಿದ ಉದಾಹರಣೆಗಳೂ ಉಂಟು. ಇಂತಹ ಶಿಕ್ಷೆಗಳಲ್ಲೊಂದಾದ ಶೂಲಾರೋಹಣವು ನಮ್ಮ ಕಥಾನಾಯಕನಿಗೇ ಪ್ರಾಪ್ತವಾಯಿತು.

ಈ ಎರಡು ಮಾರ್ಗಗಳಲ್ಲದೆ, ಶಾಸ್ತ್ರವಾದದಿಂದ ಪ್ರತಿಕಕ್ಷಿಯನ್ನು ಜಯಿಸಿ, ತನ್ಮೂಲಕ ಸತ್ಯಧರ್ಮಗಳನ್ನು ಸ್ಥಾಪಿಸುವ ಕಾರ್ಯವೂ ಭಾರತದೇಶದಲ್ಲಿ - ತ್ರಿಮತಾಚಾರ್ಯರು ತಮ್ಮತಮ್ಮ ಮತಸ್ಥಾಪನೆ ಮಾಡಿದ ಕಾಲದಲ್ಲಿ ರೂಢಿಗೆ ಬಂದು ಕಾರ್ಯಕಾರಿಯಾದುದುಂಟು. ಇದು, ಪ್ರತಿಕಕ್ಷಿಯೂ ಪಂಡಿತನಾಗಿದ್ದು ಕುಶಾಸ್ತ್ರಗಳನ್ನು ಬೋಧಿಸಿ, ತನ್ಮೂಲಕ ಜನಮನವನ್ನು ಕೆಡಿಸಿ ಧರ್ಮಭ್ರಷ್ಟತೆಯನ್ನುಂಟುಮಾಡುವ ಸಂದರ್ಭದಲ್ಲಲ್ಲದೆ ಇತರ ವೇಳೆಗಳಲ್ಲಿ ಸಾಧ್ಯವಾಗದು.

ಮೇಲೆ ಹೇಳಿದ ಮುಖ್ಯವಾದ ಎರಡು ಮಾರ್ಗಗಳಲ್ಲಿ, ಸೌಮ್ಯಮಾರ್ಗದಿಂದ ಭೂಲೋಕದಲ್ಲಿ ಸ್ವರ್ಗಸಾಮ್ರಾಜ್ಯವನ್ನು ಸ್ಥಾಪಿಸುವ ಮಹತ್ಕಾರ್ಯಕ್ಕಾಗಿ ಜೀವಾವಧಿ ಶ್ರಮಿಸಿದಾತನು ನಮ್ಮ ಕಥಾನಾಯಕನು. ಆ ಮಹಾಪುರುಷನ ಆದ್ಯಂತ ಚರಿತ್ರೆಯನ್ನು ಹುಡುಕಿ ನೋಡಿದರೂ, ಕಾಮ ಕ್ರೋಧ ದಂಭ ಮಾತ್ಸರ್ಯ ಸ್ವಾರ್ಥತೆ ಮುಂತಾದುವುಗಳ ಸುಳಿವಾಗಲೀ, ಅನ್ಯಾಯ ಅಸತ್ಯ ಮೋಸ ಕಾಪಟ್ಯಾದಿಗಳ ಸೋಂಕಾಗಲೀ ಗೋಚರವಾಗದು. ಲೌಕಿಕ ಸಂಬಂಧವಾದ ದೋಷಲೇಶವೂ ಇಲ್ಲದೆ, ದಯಾ ಪ್ರೇಮ ಸತ್ಯ ನ್ಯಾಯಗಳೇ ದೇಹವೆತ್ತಿ ಬಂದಂತಿರುವ ಆ ಸೌಮ್ಯ ಮೂರ್ತಿಯನ್ನು ದೇವ ಕುಮಾರನೆಂದು ಗೌರವಿಸುವುದು ಏನತಿಶಯವು! ನಮ್ಮಲ್ಲಿಯ ಪೌರಾ

ಣಿಕ ವ್ಯಕ್ತಿಗಳಾದ ದಧೀಚಿ ಮಯೂರಧ್ವಜ ಮುಂತಾದವರಂತೆ ಪರೋಪಕಾರಕ್ಕಾಗಿ ತನ್ನ ದೇಹವನ್ನೇ ಅರ್ಪಿಸಿದ ಆ ತ್ಯಾಗಿ ಶಿರೋಮಣಿಯು ವಂದನಾರ್ಹನಲ್ಲವೆ! ಆ ಅಮೌಲ್ಯ ಸದ್ಗುಣವು ಅನುಕರಣೀಯವಲ್ಲವೆ!

ಈ ಚಿಕ್ಕ ಪುಸ್ತಕವು ಕ್ರೈಸ್ತಮತಸ್ಥಾಪಕನಾದ ಮಹಾತ್ಮಾ ಏಸು ಕ್ರಿಸ್ತನ ಸಂಕ್ಷೇಪ ಜೀವಿತವನ್ನಲ್ಲದೆ, ನಮ್ಮ ಧರ್ಮಬಾಂಧವರಾದ ಕ್ರೈಸ್ತ ಮತೀಯರ ಧಾರ್ಮಿಕ ವಿಚಾರಗಳನ್ನೆಲ್ಲ ಸಂಪೂರ್ಣವಾಗಿ ವಿವರಿಸಲಾರದು. ಆದರೂ ಉಭಯ ಮತೀಯರಲ್ಲೂ, ಪ್ರೇಮ ಸೌಹಾರ್ದಗಳೂ, ಗೌರವನಂಬಿಕೆಗಳೂ, ಮೊಳಕೆ ಎತ್ತಿ, ಬೆಳೆದು ಅಭಿವೃದ್ಧಿಗೊಳ್ಳಲು, ಇದು ಎಷ್ಟು ಅಲ್ಪರೀತಿಯಿಂದ ಸಹಾಯಕವಾದರೂ ನಮ್ಮ ಶ್ರಮವು ಸಾರ್ಥಕವಾಯಿತೆಂದು ಭಾವಿಸಿ ತೃಪ್ತಿಗೊಳ್ಳುವೆವು.

ಜಗತ್ತಿನಲ್ಲಿ ಶಾಂತಿಯನ್ನೂ, ಸತ್ಯ ಧರ್ಮ ನ್ಯಾಯಗಳನ್ನೂ ಸ್ಥಾಪಿಸುವ ಮಹತ್ಕಾರ್ಯಕ್ಕಾಗಿ ಉದಯಿಸುವ ಮಹಾಪುರುಷರೆಲ್ಲರೂ, ಗೌರವಾರ್ಹರು, ವಂದನಾರ್ಹರು, ಭಗವದ್ವಿಭೂತಿಯ ಕಿರಣಸ್ವರೂಪರು ಎಂಬ ಪೂರ್ಣಭಾವನೆಯಿಂದ, ಕರ್ನಾಟಕ ಬಾಲಕಬಾಲಿಕೆಯರ ಸೇವಾರ್ಥವಾಗಿ ಮಹಾಪುರುಷರ ಜೀವನ ಚರಿತ್ರೆಗಳನ್ನು ಪ್ರಕಟಿಸುತ್ತಿರುವ 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ' ಯ ಮೂಲೋದ್ದೇಶಗಳನ್ನು ಗಮನಕ್ಕೆ ತಂದು, ಭಾಷಾಭಿಮಾನಿಗಳು ಈ ಪುಸ್ತಕವನ್ನೂ ಆದರದಿಂದ ಸ್ವೀಕರಿಸಿ ಗ್ರಂಥಮಾಲೆಯನ್ನು ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
೨೫—೧೨—೨೮

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



"Man is not to live on bread alone,
but on every word that issues from the mouth
of God."

"He who has found his life will lose it,
and he who loses his life for my sake
will find it."

"You cannot serve both God and Mammon."

**JESUS CHRIST.**

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಮಹಾತ್ಮಾ ಏಸುಕ್ರಿಸ್ತ

ಶ್ರೀರಾಮ ಸಹಾಯಂ

## ಕ್ರೈಸ್ತ ಮತಸ್ಥಾಪಕ

# ಮಹಾತ್ಮಾ ಏಸುಕ್ರಿಸ್ತ



**ಅಧ್ಯಾಯ ೧. ‘ಹಸುವಿನ ಗೋದಲಿಯಲ್ಲಿ’**

ನಮ್ಮ ಮಾತೃಭೂಮಿಯಾದ ಹಿಂದೂದೇಶವು ಸದ್ಯಃ ಕಾಲದಲ್ಲಿ ಹಿಂದೂ, ಮುಹಮ್ಮದೀಯ, ಕ್ರೈಸ್ತ, ಬೌದ್ಧ, ಜೈನ, ಪಾರ್ಶಿ ಮೊದಲಾದ ಹಲವು ಮತಗಳವರ ವಾಸಸ್ಥಾನವಾಗಿ ಪರ್ಯಟ್ಟಿದೆಯಷ್ಟೆ! ಇವರೆಲ್ಲರೂ, ಹಿಂದೆ ನೂರಾರು ಸಹಸ್ರಾರು ವರ್ಷಗಳಿಂದಲೂ - ತಲೆತಲಾಂತರವಾಗಿ ಈ ದೇಶದಲ್ಲೇ ಹುಟ್ಟಿಬೆಳೆದು, ಮನೆಬಾಗಿಲು, ಆಸ್ತಿಪಾಸ್ತಿಗಳನ್ನು ಸಂಪಾದಿಸಿ ಮಕ್ಕಳು ಮರಿಗಳನ್ನು ಹೆತ್ತು ಪೋಷಿಸಿಕೊಂಡು ವಾಸಿಸುತ್ತಿದ್ದಾರೆ. ಅಲ್ಲದೆ ಮುಂದೂ ಸಾವಿರಾರು ವರ್ಷಗಳವರೆಗೆ, ಇವರು ಪುತ್ರ ಪೌತ್ರ ಪಾರಂಪರ್ಯವಾಗಿ ಇಲ್ಲೇ ನೆಲೆಸಿ ವಾಸಿಸಬೇಕಾಗಿದೆಯಲ್ಲದೆ, ಇವರಲ್ಲಿ ಯಾರಾಗಲೀ ಅರಬ್ಬೀ ತುರ್ಕೀ ದೇಶಗಳಿಗಾಗಲೀ, ಯೂರೋಪು ಅಮೇರಿಕಾ ಖಂಡಗಳಿಗಾಗಲೀ, ಚೀನಾ ಜಪಾನ್ ದೇಶಗಳಿಗಾಗಲೀ ಹೊರಟು ನಡೆದು, ಆಯಾ ದೇಶಗಳನ್ನು ತಮ್ಮ ಜನ್ಮ ಸ್ಥಾನಗಳನ್ನಾಗಿಸಿಕೊಂಡು ನೆಲೆಸಲು ಸಾಧ್ಯವಿಲ್ಲ. ಅಲ್ಲವೆ? ಹೀಗೆ, ಇದು ವಿವಿಧ ಧರ್ಮಗಳಿಗೆ ಸೇರಿದ ನಮ್ಮೆಲ್ಲರಿಗೂ ಏಕಮಾತ್ರ ಮಾತೃಭೂಮಿಯಾಗಿ, ನಾವುಗಳೆಲ್ಲರೂ ಬದುಕಿರುವಷ್ಟು ದಿನವೂ, ಇಲ್ಲ ವಾಸಿಸಿಯೇ ತೀರಬೇಕಾದುದು ಅನಿವಾರಣೀಯವಾದುದು ಎಂದಾದಮೇಲೆ, ನಾವು ಪರಸ್ಪರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿಕೊಂಡು, ಲೌಕಿಕ ಸುಖಜೀವಿತಕ್ಕೆ ಆವಶ್ಯಕವಿರುವ - ಪರಸ್ಪರರಲ್ಲಿ ನಂಬಿಕೆ ಗೌರವಗಳನ್ನು ತೋರ್ಪಡಿಸುತ್ತ, ನಾಗರಿಕರೆಂಬ ಹೆಸರಿಗೆ ಗೌರವವನ್ನು ಕೊಟ್ಟು ಬಾಳಬೇಕಾದುದಾದರೂ ಆವಶ್ಯಕವೆಂಬುದನ್ನು ಯಾರು ಒಪ್ಪುವುದಿಲ್ಲ? ಹಾಗೆ ಮಾಡ

ಬೇಕಾದರೆ, 'ನಾವೆಲ್ಲರೂ ಒಂದೇ ದೇಶಮಾತೆಯ ಗರ್ಭದಲ್ಲಿ ಜನ್ಮವೆತ್ತಿದವರು, ತಲೆತಲಾಂತರವಾಗಿ ನಮ್ಮ ಹಿರಿಯರು ಇದ್ದು ಬಾಳಿದಂತೆಯೇ, ನಾವೂ ನಮ್ಮ ಸಂತಾನರೂ ಇಲ್ಲೇ-ಈ ದೇಶದಲ್ಲೇ ವಾಸಿಸಿ, ನಮ್ಮ ಪಾಂಚಭೌತಿಕ ದೇಹಗಳನ್ನು ಇಲ್ಲೇ ತ್ಯಜಿಸತಕ್ಕವರು.' ಎಂಬ ಒಂದು ಭಾವನೆಯು ಸರ್ವತ್ರ ವ್ಯಾಪಿಸಿದಲ್ಲದೆ ಬೇರೆ ಮಾರ್ಗವಿಲ್ಲ.

ಲೌಕಿಕವಾದ ಈ ಬಗೆಯ ಭಾವನೆಯುಂಟಾಗುವುದರೊಂದಿಗೆ, ಪಾರಲೌಕಿಕವಾದ ಧಾರ್ಮಿಕ ಭಾವನೆಯಲ್ಲಿ ಏಕಮತ್ಯವಿರಬೇಕಾದುದಾದರೂ ಅನಾವಶ್ಯಕವೆನ್ನುವಂತಿಲ್ಲ: ಅದೂ ಬೇಕಾಗಿದೆ. ಆದರೆ, 'ಆ ಆವಶ್ಯಕತೆಗಾಗಿ ಲೋಕದಲ್ಲಿರುವ-ಅರ್ಥಾತ್ ಹಿಂದೂಸ್ಥಾನದಲ್ಲಿರುವ ಎಲ್ಲರೂ ಒಂದೇ ಮತಸ್ಥರಾಗಬೇಕು,' ಎಂದರೆ ಅದು ಎಂದಿಗೂ ಸಾಧ್ಯವಾಗದ ಸಂಗತಿಯು, ಏಕೆಂದರೆ ರುಚಿ ಭೇದವಿರತಕ್ಕುದು ಪ್ರಪಂಚ ಸ್ವಭಾವವಲ್ಲವೆ! ಹುಳಿ ಉಪ್ಪು ಕಾರ ಅಥವ ಸಿಹಿ ಮುಂತಾದುವುಗಳಲ್ಲ ಯಾವುದಾದರೂ ಒಂದು ಬಗೆಯ ಆಹಾರವನ್ನೇ ಲೋಕದಲ್ಲಿ ಎಲ್ಲರೂ ತಿನ್ನಬೇಕೆಂದು ವಿಧಿಸುವುದು ಸಾಧ್ಯವೇ? ಹಾಗೆಯೇ, ವಿದ್ಯಾಭ್ಯಾಸದಲ್ಲೂ ಕೆಲವರಿಗೆ ಚಿತ್ರಕಲೆಯ ಮೇಲೆ ಹೆಚ್ಚು ಅಭಿಲಾಷೆಯಿರಬಹುದು. ಬೇರೆ ಕೆಲವರಿಗೆ ಸಂಗೀತವು ಹೆಚ್ಚು ಆಕರ್ಷಕವಾಗಿರಬಹುದು. ಮತ್ತೆ ಕೆಲವರು ಸಾಹಿತ್ಯಭಾಗವನ್ನು ಮೆಚ್ಚಿಕೊಳ್ಳುವವರಿರುವರು. ಇನ್ನು ಕೆಲವರಿಗೆ ಕೈ ಕೆಲಸಗಳ ಮೇಲೆ ಹೆಚ್ಚು ಮಮತೆಯಿರಬಹುದು. ಹೀಗೆ ಬೇರೆಬೇರೆ ರುಚಿಗಳನ್ನುಳ್ಳ ಈ ಎಲ್ಲರನ್ನೂ ಒಂದೇ ಎಡೆಯಲ್ಲಿ ಕೂರಿಸಿ,-'ನೀವೆಲ್ಲರೂ ಈ ಒಂದೇ ಬಗೆಯ ವಸ್ತುವನ್ನು ಗ್ರಹಿಸಲೇ ಬೇಕು' ಎಂದು ನಿರ್ಬಂಧಿಸುವುದು ಅಸ್ವಾಭಾವಿಕವಲ್ಲವೆ? ಧಾರ್ಮಿಕ ವಿಚಾರವಾದರೂ ಹಾಗೆಯೇ ಇರುವುದೆಂಬುದಕ್ಕೆ ಆಕ್ಷೇಪಣೆಯೇನು? ಪ್ರತಿಯೊಬ್ಬ ಮನುಷ್ಯನೂ ತನ್ನ ಮನಃಪೂರ್ವಕವಾಗಿ, ಆತ್ಮತೃಪ್ತಿಯಾಗಿರುವಂತೆ ಯಾವುದನ್ನು ನಂಬಿ ಮೆಚ್ಚುವನೋ ಅದು ಧರ್ಮವೆನಿಸುವುದಲ್ಲದೆ, ಅವರವರ ನಿರ್ಬಂಧಕ್ಕಾಗಲೀ ದಾಕ್ಷಿಣ್ಯಕ್ಕಾಗಲೀ ಅನುಸರಿಸುವುದಲ್ಲ, ಅಲ್ಲವೆ? ಹೀಗಿರುವಲ್ಲಿ ಮೇಲೆ ಹೇಳಿದಂತೆ -'ಇದು ನಮ್ಮ ಮಾತೃಭೂಮಿ' ಎಂಬ ಪವಿತ್ರಭಾವನೆಯಿಂದ ಪ್ರೇರಿತರಾಗಿ ತನ್ಮೂಲಕ ಏಕಮತ್ಯವನ್ನು ಸಾಧಿಸಿಕೊಂಡು ಸುಖ ಸಂತಸಗಳಿಂದ ವಾಸಿಸಬೇ

ಕಾದ ನಾವು, ಪಾರಲೌಕಿಕ ವಿಚಾರವಾಗಿಯೂ, ನಮ್ಮ ಹಲವು ಮತಗಳ ಲ್ಲಡಗಿರುವ ಧರ್ಮ ಸಾಮರಸ್ಯವನ್ನು ಕಂಡುಕೊಂಡು, ಪರಸ್ಪರರ ಹೃದಯ ವೇನೆಂಬುದನ್ನು ತಿಳಿದುಕೊಂಡು, ಪ್ರೀತಿವಿಶ್ವಾಸಗಳನ್ನು ಸಂಪಾದಿಸಿಕೊಳ್ಳ ತಕ್ಕುದೂ ಆವಶ್ಯಕವೇ ಇದೆ. ಇದಕ್ಕೆ ಪರಸ್ಪರರಲ್ಲಿ ತಾಳ್ಮೆ ಇರಬೇಕು, ಪ್ರೇಮಭಾವವಿರಬೇಕು, ಹಟಮಾರಿತನವು ಇಲ್ಲದಿರಬೇಕು, ಮೂರ್ಖತನವೂ ಮೂಢನಂಬಿಕೆಯೂ ಹೋಗಬೇಕು, ಧರ್ಮಾಂಧತೆಯು ನಾಶವಾಗಬೇಕು. ಇವು ಪ್ರಾರಂಭಕ್ಕೆ ಇರಲೇಬೇಕಾದ ಕೆಲವು ಆವಶ್ಯಕ ಸಾಮಗ್ರಿಗಳು.

ಪ್ರಪಂಚದಲ್ಲಿ ಮಾನವ ಸಮುದಾಯದ ರಕ್ಷಣೆಗಾಗಿ ಜನ್ಮವೆತ್ತಿದ ಯಾವನೊಬ್ಬ ಮಹಾಪುರುಷನೂ, ಸತ್ಯ, ಧರ್ಮ, ಶಾಂತಿ, ಅಹಿಂಸೆ, ನ್ಯಾಯ, ಪರೋಪಕಾರ, ಬ್ರಹ್ಮಚರ್ಯ, ಭೂತದಯೆ, ಭಗವದ್ಭಕ್ತಿ ಈ ಮುಂತಾದ ಕೆಲವು ದೈವಿಕ ಗುಣಗಳೆಂಬ ತಳಹದಿಯ ಕಲ್ಲುಗಳನ್ನು ಬಿಟ್ಟು ಮತಸಿದ್ಧಾಂತವೆಂಬ ಧರ್ಮಗೃಹವನ್ನು ಕಟ್ಟಲು ಯತ್ನಿಸಲೇ ಇಲ್ಲ. ಹಾಗೆ ಮಾಡುವುದು ಸಾಧ್ಯವೂ ಇಲ್ಲ. ಅನ್ಯಾಯ ಅಸತ್ಯ ಮೋಸ ಸುಳ್ಳು ಕಳ್ಳತನ ಗಳು ಯಾವಾಗಲೂ ಯಾವ ಮತಸ್ಥಾಪಕನಿಗೂ ಧ್ಯೇಯಗಳಾಗಿದ್ದುದಿಲ್ಲ. ಹೀಗೆ ಲೋಕ ಸಾಮಾನ್ಯವೂ ಜಗಚ್ಛಾಂತಿಗೆ ಅತ್ಯಾವಶ್ಯಕವೂ ಆಗಿರುವ ಮೇ ಲ್ಕಂಡ ಸತ್ಯ ಶಾಂತಿ ಮೊದಲಾದ ಗುಣಗಳನ್ನು ಆರ್ಯಮತಸ್ಥಾಪಕರಾದ ಋಷಿಮಹರ್ಷಿಗಳೂ ಈಚೆಗೆ ಬಂದ ಮತಸ್ಥಾಪಕರಾದ ಆಚಾರ್ಯರೂ ಹೇಗೆ ಬೋಧಿಸಿದರೋ, ಹಾಗೆಯೇ ಬುದ್ಧನೂ ಕ್ರಿಸ್ತನೂ ಮಹಮ್ಮದನೂ ಬೋ ಧಿಸಿದ್ದಾರೆ. ಅವರ ಬೋಧನೆಗಳಲ್ಲಿ ದೇಶ, ಕಾಲ, ಪಾತ್ರ ಇವುಗಳನ್ನನುಸ ರಿಸಿ ಸ್ವಾಭಾವಿಕವಾಗಿ ಆಚಾರವಿಚಾರಗಳಲ್ಲಿ ಇರಲೇಬೇಕಾದ ಹಲಕೆಲವು ವ್ಯ ತ್ಯಾಸಗಳಲ್ಲದೆ, ಸತ್ಯ ಧರ್ಮ ನ್ಯಾಯಗಳ ಮೂಲಸೂತ್ರಗಳಿಗೆ ಯಾವ ಬಾ ಧಕವೂ ಉಂಟಾಗುವಂತಿಲ್ಲವೆಂಬುದನ್ನು ವಿಚಾರವಂತರೆಲ್ಲರೂ ಗ್ರಹಿಸಬ ಹುದು. ಲೋಕದಲ್ಲಿ ಕೆಲವು ದೇಶಗಳ ಸ್ಥಿತಿಗತಿಗಳೂ ಹವಾಮಾನಗಳೂ ತ್ರಿಕಾಲ ಸ್ನಾನ ಸಂಧ್ಯೆ ಜಪತಪಗಳು ಮುಂತಾದುವನ್ನು ನಡೆಸಲು ಅನುಕೂ ಲತೆಯನ್ನೂ ವಿರಾಮವನ್ನೂ ಉಳ್ಳುವಾಗಿರುವುವು. ಬೇರೆ ಕೆಲವು ದೇಶಗ ಳಲ್ಲಿ ಈ ಅನುಕೂಲತೆಗಳಿಲ್ಲದೆ ಜೀವನ ಸಂಗ್ರಾಮವು ಬಹು ಪ್ರಬಲವೂ ತೀ ಕ್ಷ್ಣವೂ ಆಗಿ ಅಲ್ಲಿ ಆತ್ಮ ಪರಲೋಕ ದೇವರು ಮುಂತಾದ ವಿಚಾರಗಳನ್ನು

ಕುರಿತು ಯೋಚಿಸಲೂ ಸಮಯವಿಲ್ಲದೆ ಮನುಷ್ಯರು ಬಹು ಕಷ್ಟಪಟ್ಟು ಜೀವಿಸಬೇಕಾದ ಪರಿಸ್ಥಿತಿಯಿರುವುದು. ಹಿಂದೂಸ್ಥಾನದ ವಾಯುಗುಣಕ್ಕೆ ನೇರ-ವಿರೋಧ ರೀತಿಯ ಹವಾಮಾನವನ್ನುಳ್ಳ ಹಲವು ದೇಶಗಳು ಪ್ರಪಂಚದಲ್ಲಿವೆ. ಕೆಲವು ದೇಶಗಳಲ್ಲಿ ಸಣಕೆನೆಗಳಲ್ಲಿನ ನೀರು ಗಡ್ಡೆ ಕಟ್ಟುವಷ್ಟು ಶೈತ್ಯವಿದೆ. ಮತ್ತೆ ಕೆಲವೆಡೆಗಳಲ್ಲಿ ಬಯಲಿನಲ್ಲಿಟ್ಟ ನೀರು ಮರಳಿಹೋಗುವಷ್ಟು ಸೂರ್ಯನ ತೀಕ್ಷ್ಣತೆಯು ಭೂಮಿಯ ಮೇಲೆ ಬೀಳುತ್ತದೆ. ಕೆಲಕೆಲವು ಸ್ಥಳಗಳಲ್ಲಿ ಪೈರುಪಚ್ಚೆಗಳೇ ಬೆಳೆಯದೆ, ಜನರು ಕೇವಲ ಮಿಡಿ-ಮೀನುಗಳನ್ನೇ ತಿಂದು ಬದುಕುವ ಸ್ಥಿತಿ ಇದೆ. ಹೀಗೆ ವ್ಯತ್ಯಸ್ತವಾಗಿರುವ ಹಲವು ಪ್ರದೇಶಗಳವರು ಒಂದೇ ಬಗೆಯ ಆಚಾರ ವಿಚಾರಗಳನ್ನುಂಟಾಗಿರಬೇಕೆಂಬುದು ಸ್ವಭಾವಕ್ಕೇ ವಿರುದ್ಧವಾಗಿರುವುದು, ಅಲ್ಲವೆ? ಆದುದರಿಂದಲೇ ಲೋಕರಕ್ಷಕನೂ, ಸರ್ವೇಶ್ವರನೂ ಆದ ಜಗತ್ಪತಿನು ಪ್ರಪಂಚದ ವಿವಿಧ ಸ್ಥಿತಿಗತಿಗಳನ್ನೂ ಕಾಲ ಋತುಧರ್ಮಗಳ ಭೇದಗಳನ್ನೂ, ಆಯಾ ಪ್ರದೇಶಗಳಲ್ಲಿ ವಾಸಿಸುವ ಜನರ ಪಾತ್ರತೆ, ಆತ್ಮಾಭಿವೃದ್ಧಿಯ ಪ್ರಮಾಣ ಇವುಗಳನ್ನೂ ಅನುಸರಿಸಿ, ಅವರವರಿಗೆ ಯೋಗ್ಯವಾದ ಅನುಕೂಲವೆನ್ನಿಸುವ ಧರ್ಮವನ್ನು ಬೋಧಿಸಿ ಶಾಂತಿಸುಖ ಸಮಾಧಾನಗಳನ್ನು ಸ್ಥಾಪಿಸುವಂತೆ ಬೇರೆಬೇರೆ ಕಾಲಗಳಲ್ಲಿ ಲೋಕಕ್ಕೆ ತನ್ನ ಪ್ರತಿನಿಧಿಗಳನ್ನು ಕಳುಹಿಸುವನು. ಈಗ್ಗೆ ಹತ್ತೊಂಬತ್ತು ಶತಮಾನಗಳ ಹಿಂದೆ, ಹಾಗೆ ಭಗವಾನನಿಂದ ಕಳುಹಿಸಲ್ಪಟ್ಟ ಒಬ್ಬ ಮಹಾಪುರುಷನೇ ನಮ್ಮ ಕಥಾನಾಯಕನಾದ ಏಸುಕ್ರಿಸ್ತನು. ಆತನ ಪವಿತ್ರ ಚರಿತ್ರೆಯನ್ನೂ, ನಮ್ಮ ವಾಚಕ ಮಹಾಶಯರು ಓದಿ, ಆತನು ಬೋಧಿಸಿದ ಆತ್ಮೋತ್ತೇಜಕ ವಿಚಾರಗಳ ಪರಿಚಯವು ಹೊಂದಬೇಕೆಂದು ಆಶಿಸುವೆವು.

ಕಾಲಕರ್ಮ ಸಂಯೋಗದಿಂದ ನೋಲ್ಕಂಡಂತೆ ವಿವಿಧ ಮತಧರ್ಮ ನಡೆನುಡಿಗಳಿಗೆ ಸಂಬಂಧಪಟ್ಟು ಆದರೂ ಒಂದೇ ಎಡೆಯಲ್ಲಿ ವಾಸಿಸಬೇಕಾಗಿರುವ ನಾವು, ಪರಸ್ಪರರ ವಿಶ್ವಾಸ ಧಾರ್ಮಿಕ ವೃತ್ತಾಂತಗಳೇನು, ಅವರ ನಡೆನುಡಿ, ಆಚಾರವಿಚಾರಗಳಿಗೆ ಅರ್ಥವೇನು, ಎಂಬುದನ್ನು ತಿಳಿದುಕೊಳ್ಳಲು ಅವಕಾಶವಿಲ್ಲದೆ-ಆಸಿಸದೆ ಒಬ್ಬರೊಬ್ಬರೂ ಬೇರೊಬ್ಬರನ್ನು ದೋಷೈಕ ದೃಷ್ಟಿಯಿಂದಲೂ, ಅಪನಂಬಿಕೆ ದ್ವೇಷಭಾವ ಅಸೂಯೆಗಳಿಂದಲೂ

ನೋಡುತ್ತಿರುವುದೇ, ಆಗಾಗ್ಗೆ ನಮ್ಮನಮ್ಮಲ್ಲಿ ನಡೆಯುತ್ತಿರುವ ಅನೇಕ ಬಗೆಯ ಧಾರ್ಮಿಕ ಯುದ್ಧಗಳಿಗೆ ಕಾರಣವಾಗುತ್ತಿದೆ. ಎಲ್ಲಾ ಮತಗಳಲ್ಲಿ ಡಗಿರುವ ಮೂಲಧರ್ಮಗಳ ಸಾಮಂಜಸ್ಯವೂ ಸಾಮಾನ್ಯ ಜನ ಸಮುದಾಯದ ತಿಳಿವಳಿಕೆಗೆ ಬರುವಂತಹ ಉಪಾಯವೊಂದು ಒದಗಿದರೆ, ಲೋಕದಲ್ಲಿ ಮೇಲೆಮೇಲೆ ಪ್ರಾಪ್ತವಾಗುತ್ತಿರುವ ಅಶಾಂತತೆಯು ಎಷ್ಟೋಮಟ್ಟಿಗೆ ಕಡಮೆಯಾಗುವುದರಲ್ಲಿ ಸಂದೇಹವಿಲ್ಲ.

ಹಿಂದೂಸ್ಥಾನದಲ್ಲಿ ಈಗ್ಗೆ ಎರಡು ಸಾವಿರದ ಐನೂರು ಸಂವತ್ಸರಗಳಿಗೆ ಹಿಂದೆ ಗೌತಮಬುದ್ಧನು ಜನಿಸಿ ಬೌದ್ಧಮತ ಪ್ರಚಾರಮಾಡಿದ ಸಂಗತಿಯು ಪರಿಚಯವುಂಟಲ್ಲವೆ? ಆ ಮಹಾಮಹಿಮನು ನಿರ್ಯಾಣಹೊಂದಿದ ಮೂರು ಶತಮಾನಗಳ ತರುವಾಯ ಅಶೋಕ ಚಕ್ರವರ್ತಿಯು ಜನಿಸಿ, ಬೌದ್ಧಮತವನ್ನು ದೇಶಾಂತರ-ದ್ವೀಪಾಂತರಗಳಲ್ಲೆಲ್ಲ ಪ್ರಚಾರಪಡಿಸಿ ಕೀರ್ತಿಶೇಷನಾಗಿ ಹೋದನು. ಈ ಅಶೋಕಚಕ್ರವರ್ತಿಯ ಕಾಲವೂ ಕಳೆದು ಎರಡು ಶತಮಾನಗಳಾಗಿ ಹೋದುವು. ಆ ಕಾಲದಲ್ಲಿ ಯೂರೋಪು ಖಂಡದ ದಕ್ಷಿಣಭಾಗದಲ್ಲಿರುವ ಇಟಲಿ ದೇಶಕ್ಕೆ ರಾಜಧಾನಿಯಾದ ರೋಂ ನಗರದಲ್ಲಿ ಅಗಸ್ಟಸ್ ಸೀಜರ್ ಎಂಬೊಬ್ಬ ರಾಜನು ಆಳುತ್ತಿದ್ದನು. ಆತನು ಭೂಮಧ್ಯಸಮುದ್ರ (*Mediteranian Sea*) ದ ಸುತ್ತುಮುತ್ತಲೂ ಇದ್ದ ಏಷ್ಯಾ ಯೂರೋಪು ಮತ್ತು ಆಫ್ರಿಕಾಖಂಡಗಳ ಬಹು ಭಾಗವನ್ನು ವಶಪಡಿಸಿಕೊಂಡು, ಏಕಚ್ಛತ್ರಾಧಿಪತ್ಯದಿಂದ ಆಳುತ್ತಿದ್ದನು. ಏಷ್ಯಾಖಂಡದ ಪಶ್ಚಿಮದ ಕೊನೆಯಲ್ಲಿ—ಅರಬ್ಬೀದೇಶದ ವಾಯುವ್ಯ ಭಾಗದಲ್ಲಿ ಪಾಲಸ್ಟೈನ್ (*Palastine*) ಎಂಬೊಂದು ದೇಶವಿದೆ. ಆ ದೇಶದಲ್ಲಿ ಯಹೂದ್ಯರೆಂಬೊಂದು ಪುರಾತನ ಮತಸ್ಥರು ರೋಂ ರಾಜ್ಯದ ಸೀಜರಿನ ಆಧಿಪತ್ಯಕ್ಕೊಳಪಟ್ಟು ವಾಸಮಾಡಿಕೊಂಡಿದ್ದರು.

ಯಹೂದ್ಯರು (*Jews*) ಇಸ್ರಯೇಲ್ಯರೆಂದು ಕರೆಯಲ್ಪಡುತ್ತಿದ್ದುದೂ ಉಂಟು. ಅಬ್ರಹಾಂ ಎಂಬಾತನು ಅವರ ವಂಶದ ಮೂಲಪುರುಷನು. ಕ್ರಿಸ್ತಏಸುವು ಜನಿಸುವುದಕ್ಕೆ ಅನೇಕ ಶತಮಾನಗಳ ಹಿಂದೆ, ಈ ಜನರು ಈಜಿಪ್ಟ್ ದೇಶದಲ್ಲಿ ಗುಲಾಮರಾಗಿದ್ದರು. ಮೋಸೆಸ್ ಎಂಬೊಬ್ಬ ಸಾಧುಶ್ರೇಷ್ಠನು ಆ ಜನಗಳಲ್ಲಿ ಹಲವು ಕಟ್ಟುಪಾಡುಗಳನ್ನು ಏರ್ಪಡಿಸಿ, ಅವರನ್ನು ಗುಲಾಮ

ಗತಿಯಿಂದ ತಪ್ಪಿಸಿ, ಉತ್ತಮಸ್ಥಿತಿಗೆ ತಂದು ಅವರನ್ನು ಒಂದು ಜನಾಂಗ ವನ್ನಾಗಿ ಮಾಡಿಟ್ಟನು. ಏಸುವಿನ ಜನನಕ್ಕೆ ಸುಮಾರು ಒಂದುಸಾವಿರ ವರ್ಷಗಳಿಗೆ ಹಿಂದೆ ಡೇವಿಡ್ ಎಂಬೊಬ್ಬ ಎಹೂದ್ಯರ ಅರಸನು ಬಹು ಪ್ರಖ್ಯಾತನಾಗಿ ರಾಜ್ಯವಾಳಿ ಕೀರ್ತಿಶೇಷನಾಗಿದ್ದನು. ಈತನ ತರುವಾಯ ಸುಮಾರು ಐದಾರು ಶತಮಾನಗಳು ಕಳೆವ ವೇಳೆಗೆ ಎಹೂದ್ಯರು ಅನೇಕ ದುರಾಚಾರಗಳ ಪಾಲಾಗಿ ತಮ್ಮ ಮತಧರ್ಮಗಳನ್ನು ಬಿಟ್ಟು ನಡೆಯುತ್ತ ಹಲವು ಪಾಪಕರ್ಮಗಳನ್ನು ಮಾಡುತ್ತ ಇದ್ದರು. ಆಗಾಗ್ಗೆ ಆ ಜನರನ್ನು ಎಚ್ಚರಿಸಿ, ಉತ್ತಮ ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವುದಕ್ಕಾಗಿ ಪ್ರವಾದಿಗಳೆಂಬ ಹಲವುಮಂದಿ ಬೋಧಕರು, ಆಗಾಗ್ಗೆ ಜನಿಸಿಬಂದು ಬೋಧಿಸಿದ ರಾದರೂ ಅದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ. ಕೊನೆಗೆ ಏಸುವು ಜನಿಸುವ ಕಾಲಕ್ಕೆ ಅವರು ತಮ್ಮಲ್ಲಿದ್ದ ದುರ್ಗುಣ ದುರಾಚಾರಗಳ ಫಲವಾಗಿ ಸ್ವಾತಂತ್ರ್ಯವನ್ನು ಕಳೆದುಕೊಂಡು, ರೋಂ ರಾಜ್ಯಕ್ಕೆ ಅಧೀನ ಜನಾಂಗ ವಾಗಿ, ಬಹು ಕಷ್ಟನಷ್ಟಗಳ ಪಾಲಾಗಿ ನರಳುತ್ತಿದ್ದರು.

ರೋಂ ರಾಜ್ಯದ ಆಜ್ಞೆಗೆ ಒಳಪಟ್ಟು ಹೆರೋದ (*King Herod*) ಎಂಬ ರಾಜನು ಪಾಲಸ್ತೀನ್ ದೇಶಕ್ಕೆ ಅಧಿಪತಿಯಾಗಿ ಎಹೂದ್ಯರನ್ನು ಆಳುತ್ತಿದ್ದನು. ಆತನಾದರೂ, ಸಾಮ್ರಾಜ್ಯಾಧಿಕಾರಿಗಳಾದ ರೋಮನರ ತಾಳ ಶ್ರುತಿಗಳಿಗೆ ತಕ್ಕಂತೆ ಕುಣಿಯುತ್ತಿದ್ದನಲ್ಲದೆ, ಸ್ವಜನರಾದ ಎಹೂದ್ಯರ ಶ್ರೇಯಸ್ಸನ್ನು ಗಮನಿಸುವವನಾಗಿರಲಿಲ್ಲ. ಪರಾಧೀನರಾದ ಎಹೂದ್ಯರಿಗಾದ ರೋ ದಿನದಿನಕ್ಕೆ ತಳಮಳವು ಹೆಚ್ಚುತ್ತಾ ಹೋಯಿತು. ಆಗಾಗ್ಗೆ ಅವರ ಕುಲದಲ್ಲಿ ಜನ್ಮವೆತ್ತಿ ಬೋಧಿಸುತ್ತ ಬಂದಿದ್ದ ಮೋಸೆಸ್ ಮೊದಲಾದ ಸಾಧುಸಂತರ ಹೇಳಿಕೆಗಳಿಂದ ತಮ್ಮದು ಬಹು ಪರಿಶುದ್ಧವಾದ ಮತವೆಂಬ ಅಭಿಮಾನವೂ, ಹಿಂದೆ ಡೇವಿಡ್‌ರಾಜನ ಕಾಲದಲ್ಲಿ ತಾವಿದ್ದ ಉನ್ನತೋನ್ನತ ವೈಭವದ - ಸ್ವಾತಂತ್ರ್ಯದ ಸ್ಮರಣೆಯೂ ಈಗಲೀಗ ಅವರಲ್ಲಿ ಉಂಟಾಗುತ್ತಿದ್ದುವು. ಹೀಗೆ ದೇಶಾಭಿಮಾನ ಧರ್ಮಾಭಿಮಾನಗಳಿಂದ ಪ್ರೇರಿತರಾದ ಆ ಜನರು, ತಮ್ಮನ್ನು ಆ ಪರಾಧೀನತೆಯಿಂದ ತಪ್ಪಿಸಿ, ರಕ್ಷಿಸಬಲ್ಲ ಯಾವನಾದರೊಬ್ಬ ಮಹಾತ್ಮನು ಜನಿಸುವನೇ ಎಂದು ಹಂಬಲಿಸುತ್ತಿದ್ದರು. ಹೀಗೆ ಎಹೂದ್ಯರಲ್ಲಿ ಧರ್ಮಾಭಿಮಾನಿಗಳಾಗಿದ್ದವರು, ಲೋಕವನ್ನು ಪಾಪಮಾರ್ಗ

ದಿಂದ ತಿರುಗಿಸಿ ಉದ್ಧರಿಸಬಲ್ಲ ಮಹಾತ್ಮನು ಬರಲೆಂದೂ, ದೇಶಾಭಿಮಾನಿಗಳಾಗಿದ್ದವರು ತಮ್ಮನ್ನು ಪರಾಧೀನತೆಯಿಂದ ತಪ್ಪಿಸಿ ಸ್ವಾತಂತ್ರ್ಯವನ್ನು ತಂದಿತ್ತು ಕಾಪಾಡಬಲ್ಲ ಪ್ರಭುವು ಬರಲೆಂದೂ ಪ್ರಾರ್ಥಿಸುತ್ತಿದ್ದ ಆ ಕಾಲದಲ್ಲಿ ಆವರ ಉದ್ಧಾರಕ್ಕಾಗಿ ಜನ್ಮಿಸಿದಾತನೇ ನಮ್ಮ ಕಥಾನಾಯಕನು.

ಎಂದರೇನು? ಏಸುವು ದೊಡ್ಡ ರಾಜಾಧಿರಾಜನಂತೆ ದಿವ್ಯ ವೈಭವದಿಂದ ಜನಿಸಿದನೆ? ಆತನ ಜನನ ಕಾಲದಲ್ಲಿ ನಗಾರಿ-ತುತೂರಿಗಳನ್ನು ಮೊಳಗಿಸಿದರೆ? ರಾಜನು ಜನಿಸಿದನೆಂದು ಫಿರಂಗಿಗಳನ್ನು ಹಾರಿಸಿ ಉತ್ಸಾಹವನ್ನು ಪ್ರಕಟಿಸಿದರೆ? ಪಾಪ! ಆತನ ಜನನಕಾಲದಲ್ಲಿ ಈ ಅಟ್ಟಹಾಸಗಳೊಂದೂ ನಡೆಯಲಿಲ್ಲ! ಆತನು ಒಂದು ಬಡ ಕುಟುಂಬದಲ್ಲಿ ಕೇವಲ ಪರಿತಾಪಕರ ಪರಿಸ್ಥಿತಿಯಲ್ಲಿ ಜನಿಸಿದನು. ಆತನ ಜನ್ಮಕಥೆಯು ವಿಚಿತ್ರವಾಗಿದೆ.

ಆ ಕಾಲದಲ್ಲಿ ಮೇಲೆ ಹೇಳಿದ ಎಹೂದ್ಯರ ರಾಜನಾದ ಸುಪ್ರಸಿದ್ಧ ಡೇವಿಡ್ಡನ ಸಂತತಿಯಲ್ಲಿ ಜೋಸೆಫ್ ಎಂಬಾತನು ಜನಿಸಿ ಗ್ಯಾಲಿಲೀ ಪ್ರಾಂತಕ್ಕೆ ಸೇರಿದ ನಜರತ್ ಎಂಬ ಊರಿನಲ್ಲಿ ವಾಸವಾಗಿದ್ದನು. ಜೋಸೆಫನು ಹಾಗೆ ರಾಜಸಂತತಿಯಲ್ಲಿ ಜನಿಸಿ ಬಂದವನೇ ಆದರೂ, ಈಗ್ಗೆ ಆತನು ಬಹು ಬಡತನಸ್ಥಿತಿಯಲ್ಲಿ-ಬಡಗಿ ಕೆಲಸಮಾಡಿಕೊಂಡು ಅದರಿಂದ ಜೀವನವನ್ನು ಸಂಪಾದಿಸಿಕೊಳ್ಳುತ್ತಿದ್ದನು. ಆತನಿಗೆ ಮೇರಿ ಎಂಬೊಬ್ಬ ಕನ್ಯಾಶಿರೋಮಣಿಯು ಪತ್ನಿಯಾಗಿದ್ದಳು. ಆದರೆ ಆ ಪತ್ನಿಯರು ಲೌಕಿಕವಾಗಿ ಏಕತ್ರ ಕಳೆಯುವುದಕ್ಕೆ ಮುಂಚೆಯೇ ಮೇರಿಯು ದೈವಿಕವಾಗಿ ಗರ್ಭಧಾರಣೆ ಮಾಡಿದ್ದಳು. ದಾಂಪತ್ಯ ಧರ್ಮಕ್ಕೆ ವಿರುದ್ಧವಾದ ಈ ಸಂಗತಿಯು ಜೋಸೆಫನಿಗೆ ತಿಳಿಯಿತು. ಜೋಸೆಫನು ಬಡವನಾದರೂ ಸತ್ಯಪ್ರಿಯನೂ ಗಾಂಭೀರ್ಯಶಾಲಿಯೂ ಆಗಿದ್ದುದರಿಂದ ತನ್ನ ಪತ್ನಿಯನ್ನು ಅವಮಾನಗೊಳಿಸಲಿಷ್ಟಪಡದೆ, ಆಕೆಯನ್ನು ತ್ಯಜಿಸಿಬಿಡಬೇಕೆಂದು ಸಂಕಲ್ಪಿಸಿದನು. ದೈವಿಕವಾಗಿ ಉಂಟಾಗಿದ್ದ ಗರ್ಭ ಕಾರಣವನ್ನು ತಿಳಿಯದೆ ಆತನು ಹೀಗೆ ನಿಶ್ಚಯ ಮಾಡಿರಲು, ಒಂದಾನೊಂದು ದಿನ ಆತನು ಮಲಗಿದ್ದಾಗ್ಗೆ ಕನಸಿನಲ್ಲಿ, ದೇವದೂತನೊಬ್ಬನು ಪ್ರತ್ಯಕ್ಷನಾಗಿ-'ಜೋಸೆಫ್, ಕಳವಳಪಡಬೇಡ. ನಿನ್ನ ಪತ್ನಿಯು ದೈವಶಕ್ತಿಯಿಂದ ಗರ್ಭಧಾರಣ ಮಾಡಿರುವಳಲ್ಲದೆ ಅನ್ಯಥಾ ಇಲ್ಲ. ಆ ಪವಿತ್ರ ಗರ್ಭದಿಂದ ಉದಿಸುವ ಪುತ್ರನಿಂದ ನಿಮ್ಮ ಕುಲವೂ ಜನಾಂಗವೂ

ಉದ್ಧಾರವಾಗುವುವು. ಆವನಿಗೆ 'ಏಸು' ಎಂದು ನಾಮಕರಣಮಾಡು ಎಂದು ಹೇಳಿ ಅದೃಶ್ಯನಾದನು.

ಇತ್ತ ಕೇವಲ ಕನ್ಯೆಯಾಗಿದ್ದ ತನ್ನಲ್ಲಿ ಗರ್ಭಚಿಹ್ನೆಗಳು ತೋರಿದುದನ್ನು ಕಂಡು ಮೇರಿಯಾದರೂ ಅತ್ಯಂತ ಗಾಬರಿ ಪಟ್ಟಿದ್ದಳು. ಆಗ ಆಕೆಗೂ ದೇವದೂತನೊಬ್ಬನು (ಸ್ವಪ್ನದಲ್ಲಿ) ಪ್ರತ್ಯಕ್ಷನಾಗಿ — 'ತಾಯೇ ಬೆದರಬೇಡ, ನೀನು ಭಗವಂತನಿಂದ ಪರಿಗೃಹೀತಳಾಗಿರುವೆ! ನಿನ್ನಲ್ಲಿ ಪವಿತ್ರಗರ್ಭವು ಭಗವದಿಚ್ಛಾನುಸಾರವಾಗಿ ಪ್ರಾಪ್ತವಾಗಿದೆ. ಭಯಪಡಬೇಡ. ನಿನ್ನಲ್ಲಿ ಜನಿಸುವ ಕುಮಾರನಿಂದ ನಿನ್ನ ಕುಲವು ಉದ್ಧಾರವಾಗುವುದು; ಆತನು ದೇವಕುಮಾರನೆಂದು ಪ್ರಖ್ಯಾತನಾಗಿ ಲೋಕದಲ್ಲಿ ಸತ್ಯ ಧರ್ಮ ನ್ಯಾಯಗಳನ್ನು ಸ್ಥಾಪಿಸುವನು' ಎಂದು ನುಡಿದು ಅದೃಶ್ಯನಾದನು. ಹೀಗೆ ತಮಗೆ ಪ್ರಾಪ್ತವಾದ ಅಪೂರ್ವಾನುಭವದ ವಿಚಾರವನ್ನು ತಿಳಿದು ಸಂತೋಷಿಸಿ ಆ ಪತಿಪತ್ನಿಯರು ಪರಸ್ಪರ ಅನ್ಯೋನ್ಯತೆಯಿಂದ ವಾಸಿಸುತ್ತಿದ್ದರು.

ಹೀಗಿರುವಲ್ಲಿ ಆ ಕಾಲಕ್ಕೆ ಸರಿಯಾಗಿ ರೋಂ ದೇಶದ ಅಗಸ್ಟಸ್ ರಾಜನು, ತನ್ನ ದೇಶದಲ್ಲಿ ಜನಗಣತಿಯ ಲೆಕ್ಕವನ್ನು ತಯಾರಿಸಬೇಕೆಂದು ಆಜ್ಞೆ ಮಾಡಿದನು. ಆ ಗಣತಿಗಾಗಿ, ಪ್ರತಿಯೊಬ್ಬನೂ - ಎಲ್ಲಿ ವಾಸಿಸುತ್ತಿದ್ದವನಾದರೂ, ತನ್ನ ಸ್ವಂತಊರಿಗೆ ಹೋಗಿ ಗಣತಿಯ ದಿನ ಹಾಜರಿರಬೇಕೆಂದು ರಾಜಾಜ್ಞೆಯಾಯಿತು. ಅದರಂತೆಯೇ ಜೋಸೆಫನೂ ಗರ್ಭಿಣಿಯಾದ ತನ್ನ ಪತ್ನಿಯೊಂದಿಗೆ ನಜರೇತಿನಿಂದ ಹೊರಟು ದಕ್ಷಿಣದಿಕ್ಕಿಗೆ ಪ್ರಯಾಣ ಮಾಡಿ, ಸುಮಾರು ಎಪ್ಪತ್ತುಮೈಲಿ ದೂರವಿದ್ದ ಎರೂಸಲೇಮ್ ನಗರದ ಸಮೀಪದಲ್ಲಿದ್ದ ಬೆತ್ಲೆಹೇಂ ಎಂಬೊಂದು ಚಿಕ್ಕಗ್ರಾಮವನ್ನು ಸೇರಿದನು. ಈ ಗ್ರಾಮವೇ ಆತನ ಪೂರ್ವಿಕನಾದ ಡೇವಿಡ್ ರಾಜನ ಜನ್ಮಸ್ಥಳವಾಗಿದ್ದಿತು. ಜೋಸೆಫನಂತೆಯೇ ಜನಗಣತಿಗಾಗಿ ಬೇರೆಬೇರೆ ಸ್ಥಳಗಳಿಂದ ಬಂದು ನೆರೆದ ಹಲವರಿಂದ ಆ ಚಿಕ್ಕಗ್ರಾಮದ ಛತ್ರವು ತುಂಬಿಹೋಯಿತು. ಬಡವರಾದ ಜೋಸೆಫ್ ಮತ್ತು ಮೇರಿಯವರು ತಮ್ಮ ವಾಸಕ್ಕಾಗಿ ಬಂದು ಪ್ರತ್ಯೇಕ ಸ್ಥಳವನ್ನು ಗೊತ್ತುಮಾಡಲಾರದೆ, ಆ ಛತ್ರದ ಹಿಂದುಗಡೆಯಲ್ಲಿದ್ದ ಒಂದು ದನಗಳ ಕೊಟ್ಟಿಗೆಯಲ್ಲೇ ಇಳಿದುಕೊಂಡರು. ಆ ವೇಳೆಗೆ ದಿನ ತುಂಬಿದ್ದ ಮೇರಿಗೆ ಪ್ರಸವಕಾಲವು ಸಮೀಪಿಸಿ, ದೈವಾನುಗ್ರಹದಿಂದ ವಿಶೇಷ ಶ್ರ

ಮೆ ತೋರದೆಯೇ ಒಂದು ಪುರುಷಶಿಶು ಜನ್ಮಿಸಿತು. ಪಾಪ, ಬಡವರಾದ ಅವರು ಆ ಮಗುವನ್ನು ಸರಿಯಾಗಿ ಮಲಗಿಸಿ ಉಪಚರಿಸಲೂ ಸ್ಥಳವಿಲ್ಲದೆ ಬಹು ತೊಂದರೆ ಪಟ್ಟರು. ಮೇರಿಯು ತನ್ನಾ ಕಂದನನ್ನು, ತಮ್ಮಲ್ಲಿದ್ದ ಬಟ್ಟೆಬರೆಗಳಲ್ಲಿ ಸುತ್ತಿ ಅಲ್ಲೇ ಇದ್ದ ದನಗಳ ಗೋದಲಿಯಲ್ಲಿ ಮಲಗಿಸಿದಳು. ಹೀಗೆ ದೈವ ಕುಮಾರನಾಗಿ ಜನಿಸಿದ ಆ ದಿವ್ಯ ಶಿಶುವಿಗೆ ಪಶುವಿನ ಗೋದಲಿಯೇ ಮೊದಲನೆಯ ಶಯನ ಸ್ಥಳವಾಯಿತು.



## ಅಧ್ಯಾಯ ೨ "ದೇವಸ್ಥಾನದಲ್ಲಿ"

ಲೋಕದಲ್ಲಿ ಅನೇಕ ಮಂದಿ ಮಹಾಪುರುಷರ ಜನನ ಕಾಲದಲ್ಲಿ ನಡೆದಿರುವುವೆಂದು ಹೇಳಿಕೊಳ್ಳುವ ಹಲವು ಕಥೆಗಳಂತೆಯೇ, ಏಸುವಿನ ಜನನಕಾಲದಲ್ಲಿಯೂ ನಡೆದ ಕೆಲವು ಕಥೆಗಳಿವೆ. ಇತ್ತ ಮಗು ಜನನವಾದ ಸ್ವಲ್ಪ ಹೊತ್ತಿನೊಳಗಾಗಿಯೇ ಬೆತ್ಲಿಹೇಂ ಗ್ರಾಮದ ಹೊರವಳಯದ ಹೊಲಗಳಲ್ಲಿ ಕುರಿಮಂದೆಯನ್ನು ಬಿಟ್ಟು ಕಾದುಕೊಂಡಿದ್ದ ಕೆಲವು ಮಂದಿ ಕುರುಬರಿಗೆ ಆಕಸ್ಮಾತ್ತಾಗಿ ಮಿಂಚು ಮಿಂಚಿದಂತಹ ಒಂದು ಪ್ರಕಾಶವು ಹೊಳೆಯಿತು. ಅವರು ಅದೇನೆಂದು ಗಾಬರಿಪಟ್ಟು ನೋಡಲಾಗಿ, ಅಲ್ಲೊಬ್ಬ ದೇವದೂತನು ನಿಂತಿದ್ದುದನ್ನು ಕಂಡು, ಅಂತಹ ದಿವ್ಯಸ್ವರೂಪವನ್ನು ಎಂದೂ ಕಂಡವರಲ್ಲವಾದುದರಿಂದ ಅವರು ಬಹು ಭಯಪಟ್ಟರು. ಆಗ ಆ ದೇವದೂತನು, ಅವರನ್ನು ಕುರಿತು,—'ಎಲೈ ಬೆದರಬೇಡಿರಿ. ಲೋಕದ ಜನರಿಗೆಲ್ಲ ಮಹದಾನಂದಕರವಾಗಿರುವ ಒಂದು ಶುಭ ಸಮಾಚಾರವನ್ನು ನಿಮಗೆ ಹೇಳುತ್ತೇನೆ. ಕೇಳಿ. ಈದಿನ ನಿಮಗೋಸ್ಕರವಾಗಿ, ದಾವೀದ(*David*)ನ ಊರಿನಲ್ಲಿ ಒಬ್ಬ ರಕ್ಷಕನು ಹುಟ್ಟಿದ್ದಾನೆ. ಬಟ್ಟೆಯಲ್ಲಿ ಸುತ್ತಲ್ಪಟ್ಟ ಒಂದು ಶಿಶುವು ಗೋದಲಿಯಲ್ಲಿ ಮಲಗಿಸಲ್ಪಟ್ಟಿರುವುದೇ ಇದಕ್ಕೆ ಗುರುತು. ಆತನೇ ರಕ್ಷಕನಾದ ಏಸುವು' ಎಂದು ಹೇಳಿದನು. ಮುಂದೆ ಸ್ವಲ್ಪ ಹೊತ್ತಿನೊಳಗಾಗಿಯೇ, ಆಶ್ಚರ್ಯಮಗ್ನರಾಗಿ ನಿಂತಿದ್ದ ಅವರೆದುರಿಗೆ ಹಲವು ಮಂದಿ ದೇವದೂತರು ಕಾಣಿಸಿಕೊಂಡು,—'ಉನ್ನತೋನ್ನತ ಮಹಿಮನಾದ ಭಗವಂತನ ಕಲ್ಯಾಣ ಗುಣಗಳನ್ನು ಗಾನಮಾಡಿರಿ. ಇನ್ನು ಜಗತ್ತಿನಲ್ಲಿ ಶಾಂತಿ ಸಮಾಧಾನಗಳು

ಸ್ಥಾಪಿಸಲ್ಪಡುವುವು. ಸಜ್ಜನರಿಗೆ ರಕ್ಷಣೆಯು ಸಿಕ್ಕುವುದು' ಎಂದು ನುಡಿದು ಅದೃಶ್ಯರಾದರು.

ಅಪೂರ್ವವಾದ ದೃಶ್ಯವನ್ನು ಕಂಡ ಆ ಕುರುಬರು ಪರಮಾಶ್ಚರ್ಯದಿಂದ, ದೇವದೂತರು ಹೇಳಿದ ಆ ಸಂಗತಿಯು ನಿಶ್ಚಯವೇ ಎಂಬುದನ್ನು ಪರೀಕ್ಷಿಸಬೇಕೆಂದು ಒಡನೆ ಗ್ರಾಮಕ್ಕೆ ಓಡಿಬಂದು, ಗೋದಲಿಯಲ್ಲಿ ಮಲಗಿಸಿರುವ ಮಗುವು ಎಲ್ಲಿರುವುದು? ಎಂದು ಅಲ್ಲಲ್ಲಿ ಹುಡುಕತೊಡಗಿದರು. ಕೊನೆಗೆ ಚತ್ರದ ಹಿಂಭಾಗದ ದನದ ಕೊಟ್ಟಿಗೆಯಲ್ಲಿ ತಂಗಿದ್ದ ಜೋಸೆಫ್ ಮೇರಿಯರನ್ನೂ, ಅಲ್ಲೇ ಗೋದಲಿಯಲ್ಲಿ ಮಲಗಿದ್ದ ಶಿಶುವಿನ ಮಂಗಳಕರವಾದ ಸುರೂಪವನ್ನೂ ಕಂಡು, - ದೇವದೂತರು ಹೇಳಿದ ವೃತ್ತಾಂತವು ನಿಜವೆಂದುಕೊಂಡು, ಮೇರಿಯನ್ನು ಕುರಿತು, ತಾವು ಕೇಳಿದ್ದ ಆ ಆಶ್ಚರ್ಯಕರ ವೃತ್ತಾಂತವನ್ನು ಪೂರ್ತಿಯಾಗಿ ಹೇಳಿದರು. ಮೇರಿಯು, ಅಷ್ಟು ಕಷ್ಟ ತಾಪತ್ರಯಗಳ ಮಧ್ಯದಲ್ಲಿ ಜನಿಸಿದ ತನ್ನ ಕಂದನು ಲೋಕರಕ್ಷಕನಾಗುವನೆಂಬ ಆ ವಾರ್ತೆಯನ್ನು ಕೇಳಿ, ಆಶ್ಚರ್ಯಾನಂದಗಳಿಂದ ಏನು ಪ್ರತ್ಯುತ್ತರ ಕೊಡಲೂ ತೋರದೆ, ಅವರು ಹೇಳಿದ ಮಾತುಗಳನ್ನೇ ಮೇಲೆಮೇಲೆ ಜ್ಞಾಪಿಸಿಕೊಳ್ಳುತ್ತಾ ವಿಚಾರಮಗ್ನಳಾದಳು. ಕುರುಬರು ಅಕಸ್ಮಾತ್ತಾಗಿ ಒದಗಿದ ಆ ಪರಿಸ್ಥಿತಿಯಿಂದ ಮುಂದೇನಾಗುವದೋ ನೋಡಬೇಕೆಂದು, ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಾ ಹೊರಟುಹೋದರು.

ಎಹೂದ್ಯರಲ್ಲಿ ತಮ್ಮ ಮಕ್ಕಳಿಗೆ ನಾಮಕರಣಮಾಡಿದ ಒಂದು ತಿಂಗಳೊಳಗಾಗಿ ಅವನ್ನು ದೇವಸ್ಥಾನಕ್ಕೆ ಕರೆದೊಯ್ದು, ದೇವರಿಗೆ ಒಪ್ಪಿಸುವ ಒಂದು ಪದ್ಧತಿ ಇದ್ದಿತು. ಅದರಂತೆಯೇ ಜೋಸೆಫ್ ಮೇರಿಯರು ತಮ್ಮ ಕುಮಾರನಿಗೆ ದೇವದೂತನ ವಾಕ್ಯದಂತೆ 'ಏಸು' ಎಂದು ನಾಮಕರಣಮಾಡಿದಮೇಲೆ. ಕೆಲವು ದಿನಗಳೊಳಗಾಗಿ ಅವನನ್ನು ಎರೂಸಲೇಮ್ ಪಟ್ಟಣದಲ್ಲಿದ್ದ ಒಂದು ದೇವಾಲಯಕ್ಕೆ ಕರೆದೊಯ್ದು, ದೇವರಿಗೆ ಒಪ್ಪಿಸಿದರು. ಆ ವೇಳೆಗೆ ಸರಿಯಾಗಿ ಅಲ್ಲಿಗೆ ಸ್ಯಿಮೋನನೆಂಬೊಬ್ಬ ವೃದ್ಧನಾದ ದೈವಭಕ್ತ ಎಹೂದ್ಯನು ಬಂದಿದ್ದನು. ಅವನಿಗೆ—'ಲೋಕರಕ್ಷಣೆಗಾಗಿ ಬರುವ ಧರ್ಮಸ್ಥಾಪಕನನ್ನು ಕಾಣುವವರೆಗೆ ನಿನಗೆ ಮೃತ್ಯು ವುಂಟಾಗದಿರಲಿ' ಎಂದು ಭಗವದಾಜ್ಞೆಯಾಗಿದ್ದಿತಂತೆ! ಅಂತಹ ಧರ್ಮಸ್ಥಾಪಕನ ಅವತಾರವು ಎಂದಿಗಾಗುವು

ದೋ ಎಂದು ಆತನು ಅಹರ್ನಿಶಿ ದೇವರನ್ನು ಪ್ರಾರ್ಥಿಸುತ್ತಿದ್ದನು. ಆ ದಿನ ದೇವಸ್ಥಾನಕ್ಕೆ ಕರೆತರಲ್ಪಟ್ಟಿದ್ದ ಮೆರಿಯ ಮಗನಾದ ಏಸುವನ್ನು ಕಂಡೊಡನೆ, ಆತನು ಪರಮಾನಂದಭರಿತನಾಗಿ, ಸ್ವಾಮಿಯು ತನಗೆ ಹೇಳಿದ್ದ ಭವಿಷ್ಯವು ನಿಶ್ಚಯವಾಯಿತೆಂದು ಸಮಾಧಾನಗೊಂಡು—'ಓ ಜಗದ್ರಕ್ಷಕಾ, ನೀನು ಈ ದಾಸನಿಗೆ ಕೊಟ್ಟಿದ್ದ ಭರವಸೆಯು ನಿನ್ನ ಕರುಣೆಯಿಂದ ಇಂದು ಪೂರ್ಣವಾಯಿತು. ಈತನಿಂದ ಜಗತ್ತಿನಲ್ಲಿ ಜ್ಞಾನಪ್ರಕಾಶವು ಹರಡಲಿ. ಇಸ್ರಯೇಲಿನ ಕೀರ್ತಿಯು ಲೋಕದಲ್ಲಿ ಶಾಶ್ವತವಾಗಿರಲಿ' ಎಂದು ಆನಂದಬಾಷ್ಪಗಳನ್ನು ಸುರಿಸುತ್ತ ಪ್ರಾರ್ಥಿಸಿ—'ಧನ್ಯನಾದೆನು. ಇನ್ನು ನನಗೆ ಮರಣ ಬಂದರೂ ದುಃಖವಿಲ್ಲ' ಎಂದುಕೊಂಡು ಹೊರಟುಹೋದನು.

ಲೋಕದಲ್ಲಿ ಪಸರಿಸಿದ್ದ ಪಾಪವನ್ನು ನೀಗಿಸಿ ಧರ್ಮಸ್ಥಾಪನೆ ಮಾಡುವ ಮಹಾಪುರುಷನು ಉದಯಿಸುವನೆಂಬುದನ್ನು, ಯಹೂದ್ಯರಂತೆಯೇ ಇತರ ಜನಾಂಗದಲ್ಲಿನ ದೈವಭಕ್ತರೂ ನಂಬಿದ್ದರು. ಅಂತಹ ದೈವಭಕ್ತರಾದ ಮೂರುಮಂದಿ ಪಾರಸೀಕ ಜ್ಯೋತಿಷ್ಯರು ಜೆರೂಸಲೇಮಿಗೆ ಪೂರ್ವಭಾಗದಲ್ಲಿದ್ದ ದೇಶವೊಂದರಲ್ಲಿ ವಾಸವಾಗಿದ್ದರು. ಅವರು ಜ್ಯೋತಿಷ್ಯರಾಗಿದ್ದುದರಿಂದ ನಕ್ಷತ್ರಗಳ ಗಮನಾಗಮನಗಳನ್ನು ಕುರಿತು ವಿಚಾರನಡಿಸುವುದಕ್ಕಾಗಿ ಅಂತರಿಕ್ಷವನ್ನು ನೋಡತೊಡಗಿರುವಲ್ಲಿ, ಆಕಸ್ಮಾತ್ತಾಗಿ ಬಹು ಪ್ರಕಾಶಮಾನವಾದ ಒಂದು ನಕ್ಷತ್ರವು ಕಾಣಿಸಿತು. ಕರ್ಮಧರ್ಮಸಂಯೋಗವೋ ಎಂಬಂತೆ ಅಂದೇ ಇತ್ತ ಬೆತ್ಲೆಹೇಂ ಗ್ರಾಮದಲ್ಲಿ ಏಸುವಿನ ಜನನವಾಗಿದ್ದಿತು. ತಾವು ಎಂದೂ ಕಾಣದ್ದ ಆ ನಕ್ಷತ್ರದ ಪ್ರಕಾಶಕ್ಕಾಗಿ ಮಹದಾಶ್ಚರ್ಯಗೊಂಡ ಅವರು, ಅದೇನೆಂದು ನೋಡುತ್ತಿರುವಲ್ಲಿ, ಧರ್ಮಸ್ಥಾಪನೆಗಾಗಿ ಬರಲಿರುವ ರಕ್ಷಕನು ಇಂಥಾ ಸ್ಥಳದಲ್ಲಿಯೇ ಜನಿಸಿದ್ದಾನೆಂಬುದನ್ನು ತಿಳಿಸುವುದಕ್ಕಾಗಿ, ಅದು ದೇವರು ಕಳುಹಿಸಿರುವ ಗುರುತಾಗಿರಬಹುದು, ಎಂಬ ಯೋಚನೆಯು ಅವರಿಗೆ ಹೊಳೆಯಿತು. ಒಡನೆ ಅವರು ಅದು ಹೋಗುತ್ತಿದ್ದ ದಿಕ್ಕನ್ನೇ ಅನುಸರಿಸಿಕೊಂಡು ಹೊರಟರು. ಅದೂ ಅವರು ನಡೆದಂತೆಲ್ಲ ಪಶ್ಚಿಮದಿಕ್ಕಿನಲ್ಲಿ ಮುಂದಮುಂದಕ್ಕೆ ಸಾಗುತ್ತ ಜೆರೂಸಲೇಂ ನಗರವೂ ಬೆತ್ಲಹೇಂ ಗ್ರಾಮವೂ ಇದ್ದ ಯೂದಾಯ ಪ್ರಾಂತದ ಕಡೆಗೆ ನಡೆಯಿತು. ಹಗಲೂ ಅದನ್ನು ಅನುಸರಿಸಿಕೊಂಡೇ ಬಂದಿದ್ದ ಅವರು

ಎಹೂದ್ಯರಿಗೆ ರಾಜನಾಗಲುಳ್ಳ ರಕ್ಷಕನು ನಿಶ್ಚಯವಾಗಿ ಜನಿಸಿದ ಸ್ಥಳವಾವುದೆಂದು ಆ ದೇಶದ ರಾಜನಾಗಿದ್ದ ಹೆರೋದನನ್ನು ಕೇಳಿದರು. ಎಹೂದ್ಯರಿಗೆ ತಾನು ರಾಜನಾಗಿರುತ್ತಿರುವಲ್ಲಿ ಅವರಿಗೆ ಪ್ರಭುವಾಗಲುಳ್ಳ ಮತ್ತೊಬ್ಬನು ಜನಿಸಿರುವನೆಂಬ ಮಾತನ್ನು ಕೇಳುವುದು ಅವನಿಗೆ ಕರ್ಣಕಠೋರವಾಗಿದ್ದಿತು. ಆದರೂ ತನ್ನಲ್ಲುಂಟಾದ ಆ ದ್ವೇಷಭಾವವನ್ನು ತೋರ್ಪಡಿಸಿಕೊಳ್ಳದೆ, ತನ್ನ ಆಸ್ಥಾನದಲ್ಲಿದ್ದ ಎಹೂದ್ಯ ಪಂಡಿತರನ್ನು ಕರೆಸಿ, ಆ ವಿಷಯದಲ್ಲಿ ಮತಗ್ರಂಥಗಳಲ್ಲಿ ಏನಾದರೂ ಹೇಳಿಕೆಯಿದೆಯೋ ಎಂದು ಪ್ರಶ್ನಿಸಿದನು. ಆ ಪಂಡಿತರು ಗ್ರಂಥಗಳನ್ನು ಹುಡುಕಿನೋಡಿ-'ಕ್ರಿಸ್ತನು ದೇವಿಡ್ಡನ ಜನ್ಮಸ್ಥಾನವಾದ ಬೆತ್ಲಿಹೇಮಿನಲ್ಲಿ, ಎಹೂದ್ಯರ ರಾಜನಾಗಿ ಜನಿಸತಕ್ಕವನಿರುವನು ಎಂಬದಾಗಿ ಒಬ್ಬ ಪ್ರವಾದಿಯ ವಾಕ್ಯವಿದೆ' ಎಂದು ಹೇಳಿದರು. ಆ ಮಾತನ್ನು ಕೇಳಿದ ಹೆರೋದ ರಾಜನು, ಮೂಡಣದೇಶದಿಂದ ಬಂದಿದ್ದ ಆ ಪಂಡಿತರನ್ನು ಕರೆಸಿ, ಆ ಸಂಗತಿಯನ್ನು ಹೇಳಿ-'ಆ ಮಗುವನ್ನು ನೀವು ನೋಡಿ ಹಿಂದಿರುಗಿ ಹೋಗುವಾಗ್ಗೆ ನನಗೂ ಆ ಸಮಾಚಾರವನ್ನು ತಿಳಿಸಿ ಹೋಗಿರಿ. ನಾನೂ ಅಲ್ಲಿಗೆ ಹೋಗಿ, ಆ ಲೋಕರಕ್ಷಕನ ಶಿಶುಮೂರ್ತಿಯನ್ನು ದರ್ಶನಮಾಡಿ, ನನ್ನ ವಂದನೆ ಕಾಣಿಕೆಗಳನ್ನು ಅರ್ಪಿಸಿ ಬರುತ್ತೇನೆ" ಎಂದು ಹೇಳಿದನು.

ರಾಜನ ಮಾತಿಗೆ ಹಾಗೇ ಆಗಲೆಂದು ಒಪ್ಪಿಕೊಂಡು ಹೊರಟ ಆ ಪಂಡಿತರಿಗೆ ಆ ನಕ್ಷತ್ರವು ಪುನಃ ದೃಷ್ಟಿಗೋಚರವಾಯಿತು. ಜ್ಯೋತಿಷ್ಕರು ಪರಮ ಸಂತೋಷದಿಂದ ಅದನ್ನು ಅನುಸರಿಸಿಕೊಂಡು ನಡೆಯಲು, ಅದು ಬೆತ್ಲಿಹೇಂ ಗ್ರಾಮದಲ್ಲಿ ಮೇರಿಯೂ ಆಕೆಯ ಮಗ ಏಸುವೂ ಇದ್ದ ಆ ಕೊಟ್ಟಿಗೆಯ ಮೇಲೆ ಸರಿಯಾಗಿ ನಿಂತಂತೆ ಕಾಣಿಸಿತು. ಅದನ್ನು ಕಂಡು ಅತ್ಯಂತ ಕೌತುಕಗೊಂಡಿದ್ದ, ಆ ಮೂರುಮಂದಿಯೂ ಆ ಛತ್ರದ ಒಳಹೊಕ್ಕು ವಿಚಾರಿಸಿ, ಮೇರಿಯನ್ನೂ ಆಕೆಯ ಮಡಿಲಲ್ಲಿ, ನಗೆಮುಖದಿಂದಲೂ ಸ್ವಚ್ಛವಾದ ತೇಜಸ್ವಿ ಕಣ್ಣುಗಳಿಂದಲೂ ಒಪ್ಪುತ್ತಿದ್ದ ದಿವ್ಯ ಸುಂದರಾಕಾರನಾಗಿದ್ದ ಆ ಮಗುವನ್ನೂ ಕಂಡು ಭಕ್ತಿ ಭರಿತರಾಗಿ ಸಾಷ್ಟಾಂಗ ನಮಸ್ಕಾರಮಾಡಿ, ತಾವು ತಂದಿದ್ದ ಚಿನ್ನ, ಧೂಪ, ರಕ್ತಬೋಳ ಮುಂತಾದ ವಸ್ತುಗಳನ್ನು ಆ ದೇಶದ ಪದ್ಧತಿಯಂತೆ ಕಾಣಿಕೆಯಾಗಿ ಅರ್ಪಿಸಿ, ಧನ್ಯರಾದೆವೆಂದುಕೊಂಡು ಸಂತೋಷಪಟ್ಟರು.

ಇದಾದ ತರುವಾಯ ಆ ರಾತ್ರಿ ಅಲ್ಲೇ ಛತ್ರದಲ್ಲೇ ಮಲಗಿಕೊಂಡಿದ್ದ ಆ ಜ್ಯೋತಿಷ್ಕರಿಗೆ ದೇವದೂತನು ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ,-"ಎಲೈ ನೀವು ಹೆರೊದನ ಮಾತಿನಂತೆ ಪುನಃ ಹೋಗಿ ಅವನನ್ನು ಕಾಣದೆ ಬೇರೆ ಮಾರ್ಗದಿಂದ ಹೊರಟು ನಿಮ್ಮ ಸ್ಥಳಕ್ಕೆ ಹೋಗಿ ಸೇರಿರಿ" ಎಂದು ಹೇಳಿದಂತಾಯಿತು. ಅಲ್ಲದೆ, ಅದೇ ದಿನವೇ ಜೋಸೆಫನಿಗೂ-'ನೀನು ಎದ್ದು ಒಡನೆ ಈ ಕೂಸನ್ನೂ ನಿನ್ನ ಪತ್ನಿಯನ್ನೂ ಕರೆದುಕೊಂಡು, ಐಗುಪ್ತದೇಶ (*Egypt*) ಕ್ಕೆ ಹೊರಟುಹೋಗು. ಪುನಃ ನಿನಗೆ ಆಜ್ಞೆಯಾಗುವವರೆಗೂ ಹಿಂದಕ್ಕೆ ಬರದೆ ಅಲ್ಲೇ ವಾಸಿಸುತ್ತಿರು. ಹೆರೊದನು ಈ ಕೂಸನ್ನು ಕೊಲ್ಲಿಸಬೇಕೆಂದು ಅಲ್ಲಲ್ಲಿ ಹುಡುಕಿಸುತ್ತಿರುವನು' ಎಂದು, ದೇವದೂತನು ಕನಸಿನಲ್ಲಿ ಬಂದು ಆಜ್ಞಾಪಿಸಿ ಹೋದನು. ಮಾರನೆಯ ಪ್ರಾತಃಕಾಲ ಆ ಪಂಡಿತರು ಎದ್ದು ಬೇರೆ ದಾರಿಯಿಂದ ನಡೆದು ತಮ್ಮ ಊರನ್ನು ಸೇರಿಕೊಂಡರು. ಇತ್ತ ಜೋಸೆಫನೂ ತನ್ನ ಹೆಂಡತಿಯನ್ನೂ ಮಗುವನ್ನೂ ಕರೆದುಕೊಂಡು ಐಗುಪ್ತ ದೇಶವನ್ನು ಕುರಿತು ಪ್ರಯಾಣಮಾಡಿದನು.

ಹೆರೊದನು, ತನ್ನೊಂದಿಗೆ ಹೇಳಿ ಹೋದಂತೆ ಪಂಡಿತರು ಹಿಂದಿರುಗಿ ಬಾರದಿದ್ದುದಕ್ಕಾಗಿ ಕೋಪಗೊಂಡು, ರಕ್ಷಕನಾಗಿ ಜನಿಸುವ ಏಸುವು ಯಾವ ಮಗುವೆಂಬ ವಿಚಾರವು ತಿಳಿಯದೆ,-'ಆ ಪ್ರಾಂತದಲ್ಲಿದ್ದ ಎರಡು ವರ್ಷ ವಯಸ್ಸಿನೊಳಗಿದ್ದ ಮಕ್ಕಳನ್ನೆಲ್ಲ ಕೊಂದುಬಿಡಿರಿ' ಎಂದು ತನ್ನ ದೂತರಿಗೆ ಆಜ್ಞಾಪಿಸಿದನು. ಒಡನೆ ಕೇಳುವುದೇನು? ಆ ಘಾತುಕರು, ಗ್ರಾಮಗ್ರಾಮವನ್ನೂ ಹೊಕ್ಕು, ಎರಡು ವಯಸ್ಸಿನೊಳಗಿದ್ದ ಚಿಕ್ಕ ಮಕ್ಕಳನ್ನೆಲ್ಲ ಕೊಂದುಬಿಟ್ಟರು. ಹಾಗೆ ಕೊಲ್ಲಲ್ಪಟ್ಟ ಆ ಮಕ್ಕಳೊಳಗೆ, ತನಗೆ ಪ್ರತಿಕಕ್ಷಿಯಾಗಿ ಡೇವಿಡ್ಡಿನ ವಂಶದಲ್ಲಿ ಹುಟ್ಟಿದ್ದ ಮಗುವೂ ಸತ್ತುಹೋಯಿತೆಂದುಕೊಂಡು, ತನ್ಮೂಲಕ ಶತ್ರುನಾಶವಾದುದಕ್ಕಾಗಿ, ಪಾಪಾತ್ಮನಾದ ಆ ರಾಜನು ಸಂತೋಷಗೊಂಡನು.

ದೇವದೂತನ ಆಜ್ಞೆಯನ್ನನುಸರಿಸಿ ಐಗುಪ್ತದೇಶಕ್ಕೆ ನಡೆದ ಜೋಸೆಫನ ಕುಟುಂಬದವರು, ಆ ದೇಶದ ಯಾವ ಪಟ್ಟಣ ಅಥವ ಗ್ರಾಮದಲ್ಲಿ ಎಷ್ಟುಕಾಲ ವಾಸಿಸಿದ್ದರೆಂಬುದಕ್ಕೆ ಎಲ್ಲೂ ಉಲ್ಲೇಖವಿಲ್ಲ. ಜೋಸೆಫನು ಬಹುಶಃ ತನಗೆ ಅಭ್ಯಾಸವಿದ್ದ ಮರಕೆಲಸದಿಂದಲೇ ತನ್ನ ಕುಟುಂಬದ ಜೀವ

ನವನ್ನು ಸಂಪಾದಿಸಿಕೊಂಡು ಅಲ್ಲಿದ್ದಷ್ಟು ದಿನವೂ ಕಾಲಯಾಪನೆಮಾಡಿರಬೇಕು. ಮುಂದೆ ಕೆಲವು ಕಾಲಾನಂತರ, ಇತ್ತ ಎಹೂದ್ಯರ ರಾಜನಾಗಿದ್ದ ಹೆರೋದನು ಮೃತನಾಗಲು ಮತ್ತೊಂದುವೇಳೆ ದೇವದೂತನು ಸ್ವಪ್ನದಲ್ಲಿ ಬಂದು-'ಜೋಸೆಫ್. ಮಗುವನ್ನು ಕೊಲ್ಲಬೇಕೆಂದು ಛಲಗೊಂಡಿದ್ದ ದುರುಳರಾಜನು ಮೃತನಾಗಿದ್ದಾನೆ. ಇನ್ನು ನೀನು ಈ ಪರದೇಶದಿಂದ ಹೊರಟು ನಿನ್ನ ಗ್ರಾಮಕ್ಕೆ ಹೋಗಬಹುದು' ಎಂದು ಹೇಳಿದಂತಾಯಿತು. ಒಡನೆ ಶ್ರದ್ಧಾವಂತನಾದ ಆತನು ತನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು ಸ್ವದೇಶಾಭಿಮುಖನಾದನು. ಆದರೆ, ಎರೂಸಲೇಮಿನಲ್ಲಿ ಹೆರೋದನ ಮಗನೇ ರಾಜನಾಗಿದ್ದುದರಿಂದ, ತಂದೆಯಂತೆಯೇ ಆವನಾದರೂ ತಮ್ಮ ಕಂದನ ಮೇಲೆ ಮುನಿದು ಕೇಡುಮಾಡಬಹುದೆಂದು ಅಂಜಿ, ಆ ಸಾಧು ದಂಪತಿಗಳು ಬೆತ್ಲಿಹೇಮಿನ ಆಸೆಯನ್ನು ಬಿಟ್ಟು ನಜರೇತಿಗೆ ನಡೆದು ಕೊನೆಯವರೆಗೂ ಅಲ್ಲೇ ವಾಸಮಾಡಿಕೊಂಡಿದ್ದರು.

ಚಿಕ್ಕ ಏಸುವು ತನ್ನ ಬಾಲಲೀಲೆಗಳಿಂದಲೂ, ಮುದ್ದುಮುದ್ದು ಮಾತುಗಳಿಂದಲೂ ತಾಯಿತಂದೆಗಳಿಗೆ ಆನಂದವನ್ನುಂಟುಮಾಡುತ್ತಾ ಬೆಳೆಯುತ್ತಿದ್ದನು. ಆ ಮಗುವಿನ ಎಳೆಸೊಂಟವೂ ಮನೋಹರವಾದ ಮುದ್ದುಮುಖವೂ ಪುಷ್ಟಿಯಾಗಿ ಬೆಳೆದು ದುಂಡುದುಂಡಾಗಿದ್ದ ಮೈಕೈಕಾಲುಗಳೂ, ಸದಾ ಆನಂದಪ್ರಕೃತಿಯಿಂದ ಕೂಡಿ ನಗುನಗುತ್ತಾ, ಕರೆದವರಲ್ಲಿಗೆ ತಡೆಬಡೆಯಿಲ್ಲದೆ ಬಂದು, ಆಡುತ್ತ ನಲಿಯುತ್ತ ಇದ್ದ ಸುಸ್ವಭಾವವೂ ನೆರೆಹೊರೆಯ ಹೆಂಗಸರ ಚಿತ್ತವನ್ನೆಲ್ಲ ಅಪಹರಿಸಿದುವು. ಏಸುವು ಶೈಶವಾವಸ್ಥೆಯನ್ನು ಕಳೆದು ಆಡಿದಮಾತಿನ ಅರ್ಥವನ್ನು ತಿಳಿದುಕೊಳ್ಳುವ ವಯಸ್ಸಿಗೆ ಬಂದೊಡನೆಯೇ ಮೇರಿಯು ತಮ್ಮ ಎಹೂದ್ಯಕುಲದಲ್ಲಿ ಪ್ರಸಿದ್ಧರಾದ ಭಗವದ್ಭಕ್ತರ, ಸತ್ಯಸಂಧರ, ಲೋಕೋಪಕಾರಿಗಳ, ಶೂರರ ಚರಿತ್ರೆಗಳನ್ನು ಮನೋಹರವಾದ ಕಥೆಗಳ ಮೂಲಕ ಹೇಳಿ, ತನ್ನ ಮಗನ ಮನಸ್ಸನ್ನು ಸಂತೋಷಗೊಳಿಸುತ್ತಿದ್ದಳು. ಆವನ ಜನನ ಕಾಲದಲ್ಲಿ ಬೆತ್ಲಿಹೇಮಿನ ಸಮೀಪದ ಕುರುಬರೂ, ಮೂರುಮಂದಿ ಮೂಡಣದೇಶದ ಪಂಡಿತರೂ ಆವನ ವಿಷಯವಾಗಿ ಹೇಳಿದ್ದ ವಿಚಾರಗಳು ಆಕೆಗೆ ಆಗಾಗ್ಗೆ ಜ್ಞಾಪಕಕ್ಕೆ ಬಂದು, ತನ್ನ ಮಗನೂ ಜಗತ್ಪ್ರಸಿದ್ಧನಾದ ಭಗವದ್ಭಕ್ತನೂ, ಧರ್ಮಕರ್ತನೂ ಆಗಲುಳ್ಳವನೆಂದು,

ಸಾಧ್ಯವಾದಾಗಲೆಲ್ಲ ದೇವರ ಅನಂತ ಮಹಿಮೆಗಳನ್ನೂ, ಮಾನವ ಲೋಕದ ಮೇಲೆ ಆತನಿಗಿದ್ದ ಅಪಾರ ಪ್ರೇಮ ವಿಶ್ವಾಸಗಳನ್ನೂ ವರ್ಣಿಸಿ ಹೇಳುತ್ತಿದ್ದಳು. ಹೀಗೆ ತಾಯಿಯೇ ಪ್ರಥಮಗುರುವಾಗಿ ಆಕೆಯಿಂದ ಅಮೌಲ್ಯ ಬೋಧನೆಗಳನ್ನು ಹೊಂದಿದ ಏಸುವಿನ ಮನಸ್ಸಿನಲ್ಲಿ ದೈವಭಕ್ತಿಯೂ, ಸಹ ಜೀವಿಗಳಲ್ಲ ಪ್ರೇಮಾಗರಗಳೂ ಮೊಳಕೆಗೊಂಡು, ವಯಸ್ಸಿನೊಂದಿಗೆ ಕ್ರಮ ಕ್ರಮವಾಗಿ ಬೆಳೆಯುತೊಡಗಿದವು. ಏಸುವು ತನ್ನ ತಂದೆಯಿಂದ ತಮ್ಮ ಕುಲ ಕಸಬಾದ ಮರಗೆಲಸವನ್ನು ಕಲಿತನೆಂಬುದಕ್ಕೂ ಸಂದೇಹವಿಲ್ಲ, ಆದರೆ ಆತನು ಯಾವ ವಿದ್ಯಾಶಾಲೆಯನ್ನಾದರೂ ಪ್ರವೇಶಿಸಿ, ಅಕ್ಷರ ವಿದ್ಯೆಯಲ್ಲ ಶಿಕ್ಷಣ ಹೊಂದಿದನೇ ಎಂಬುದು ಮಾತ್ರ ಎಲ್ಲೂ ಹೇಳಲ್ಪಟ್ಟಿಲ್ಲ. ಲೌಕಿಕ ವಾದ ಓದು ಬರಹಗಳಲ್ಲಿ ಎಷ್ಟು ಮಟ್ಟಿಗೆ ಕಲಿತನೆಂಬುದು ತಿಳಿಯದಿದ್ದರೂ ಹಿಂದಿನ ಪದ್ಧತಿಯಂತಿದ್ದ ಧರ್ಮಗುರುಗಳ ಬಳಿ ಆತನು ಎಹೂದ್ಯ ಧರ್ಮ ಶಾಸ್ತ್ರ ಗ್ರಂಥಗಳನ್ನೂ ಮತಗ್ರಂಥಗಳನ್ನೂ ಓದಿದ್ದನೆಂದು ಒಂದೆರಡು ಕ್ರೈಸ್ತ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ.

ಅತಿಶಯ ಮೇಧಾವಿಯಾಗಿದ್ದ ಆ ಬಾಲಕನು, ಬಹು ಶೀಘ್ರಕಾಲದಲ್ಲೇ ಆ ಪಂಗಡದವರ ಧರ್ಮತತ್ವಗಳನ್ನು ಗ್ರಹಿಸಿಕೊಂಡನೆಂಬುದಕ್ಕೆ ಸಂಶಯ ವಿಲ್ಲ. ದೇವರಲ್ಲಿ ಶ್ರದ್ಧೆ ಮತ್ತು ಭಕ್ತಿಗಳು ದಿನದಿನಕ್ಕೆ ಬೆಳೆಯುತ್ತ ಹೋದುವು. ಹೃದಯದಲ್ಲಿ ದಯೆಯೂ, ಸ್ನೇಹಪ್ರೀತಿಗಳೂ ತುಂಬಿ ಹೊರಸೂಸುವಂತೆ ವೃದ್ಧಿಗೊಂಡವು. ಎಲ್ಲಿ ನಿಂತರೂ ಕುಳಿತರೂ ಆ ಬಾಲಕನು ಪರಮ ಪಿತನ ಧ್ಯಾನದಿಂದ ಪರಮಾನಂದಗೊಳ್ಳುವನು. ಪರಿಶುದ್ಧ ಹೃದಯದ ಆ ಬಾಲಕನ ಮನಸ್ಸಿನಲ್ಲಿ ದೇವರ ವಿಷಯವಾದ ಅನೇಕ ಯೋಚನೆಗಳು ಸ್ಫುರಿಸುವುವು. ಅವನ ನಿಷ್ಕಲ್ಮಷವಾದ ಮುಖವನ್ನು ನೋಡಿದವರಿಗೆ ಮನಸ್ಸಿನಲ್ಲಿನ ವ್ಯಸನವೆಲ್ಲವೂ ದೂರವಾಗಿ ಸಂತೋಷವು ಉಕ್ಕುವುದು. ಅವನ ಸಮ ವಯಸ್ಸಿನ ಬಾಲಕರೆಲ್ಲರೂ ಅವನನ್ನು ತಮಗೆ ನಾಯಕನೆಂದು ಭಾವಿಸಿ, ಅವನ ಬಳಿ ಭಯಭಕ್ತಿಯಿಂದ ನಡೆದುಕೊಳ್ಳುವರು. ತಮ್ಮ ತೊಂದರೆಗಳನ್ನೂ ಕಷ್ಟನಷ್ಟಗಳನ್ನೂ ಅವನಲ್ಲಿ ಹೇಳಿಕೊಂಡು ಸಲಹೆ ಕೇಳುವರು. ಅವನಾದರೂ ಕರುಣಾಮಯನಾಗಿ, ಸಾವಧಾನದಿಂದ ಅವರು ಹೇಳುವುದನ್ನೆಲ್ಲ ಕೇಳಿ, ಅವರಿಗೆ ಹಿತಕರವೂ ನ್ಯಾಯಸಮ್ಮತವೂ ಆದ ಮಾತು

ಗಳನ್ನು ಹೇಳಿ ಎಲ್ಲರ ಮನಸ್ಸಿಗೂ ಸಂತೋಷ - ಸಮಾಧಾನಗಳನ್ನುಂಟು ಮಾಡುವನು. ಯಾರಾದರೂ ಪರಸ್ಪರ ಜಗಳವಾಡಿಕೊಂಡು ತೀರ್ಪಿಗಾಗಿ ಅವನ ಬಳಿ ಬಂದರಾದರೆ, ಅವನು ತನ್ನ ನ್ಯಾಯುಸಮ್ಮತವಾದ ಮೃದುವಾಕ್ಯ ಗಳಿಂದ ಉಭಯಪಕ್ಷದವರಿಗೂ ಒಪ್ಪಿತವಾಗುವಂತೆ ಮಾತನಾಡಿ, ಅವರು ಪುನಃ ಸ್ನೇಹದಿಂದ ನಗುನಗುತ್ತಾ ಹಿಂದಿರುಗುವಂತೆ ಮಾಡುತ್ತಿದ್ದನು. ಆ ಊರಿನ ಮಾತಾಪಿತೃಗಳೆಲ್ಲರೂ, ತಮ್ಮ ಮಕ್ಕಳನ್ನು ಕುರಿತು, ಆ ಬಾಲ ಕನ ಸದ್ಗುಣ ಸದಾಚಾರಣೆಗಳನ್ನು ಅನುಸರಿಸಿರೆಂದು ಹೇಳುತ್ತಿದ್ದರು.

ಏಸುವಿಗೆ ಹನ್ನೆರಡು ವರುಷ ಪ್ರಾಯ. ಆ ವೇಳೆಯಲ್ಲಿ, ಆತನ ಪ್ರತಿ ಭೆಯು ಪ್ರಕಟವಾಗುವಂತಹ ಒಂದು ಸಂದರ್ಭ ಒದಗಿತು. ಎಹೂದ್ಯರಲ್ಲಿ ಪಸ್ಕಹಬ್ಬ *(Feast of Passover)* ವೆಂಬೊಂದು ಮಹೋತ್ಸವವು ವರ್ಷಕ್ಕೊಂದು ವೇಳೆ ಬಹು ವಿಜೃಂಭಣೆಯಿಂದ ನಡೆಯುತ್ತಿದ್ದಿತು. ಶ್ರದ್ಧಾ ವಂತರೂ ಮತಭಕ್ತಿಯುಳ್ಳವರೂ ಆಗಿದ್ದ ಜೋಸೆಫ್ ಮತ್ತು ಮೇರಿಯರು ಪ್ರತಿವರ್ಷವೂ ಆ ಹಬ್ಬದ ಕಾಲಕ್ಕೆ, ನಜರೇತಿನಿಂದ ಎರೂಸಲೇಮಿಗೆ ಪ್ರಯಾ ಣಮಾಡುವ ಪದ್ಧತಿಯನ್ನಿಟ್ಟುಕೊಂಡಿದ್ದರು. ಏಸುವಿಗೆ ಹನ್ನೆರಡು ವರ್ಷ ತುಂಬುತ್ತಿದ್ದ ಆ ವೇಳೆಯಲ್ಲೂ ಅವರು ಒಂದು ಬಾರಿ ಆ ಹಬ್ಬಕ್ಕಾಗಿ ದೂ ರದ ಎರೂಸಲೇಮಿಗೆ ಪ್ರಯಾಣವಾದರು. ಅಲ್ಲಿ ಆ ಮಹೋತ್ಸವಕ್ಕಾಗಿ ನೆರೆದ ಹಲವರೊಂದಿಗೆ ಅವರು ಒಂದು ವಾರ ಅಲ್ಲಿದ್ದು, ತಮ್ಮ ಮತಪದ್ಧತಿ ಯ ಮೇರೆಗೆ ಧ್ಯಾನ ಜಪ ಪೂಜೆಗಳಿಂದ ದೇವರ ಸೇವೆಯನ್ನು ನಡೆಸಿ, ಬಡ ವರಿಗೂ ಕುರುಡ ಕುಂಟರಿಗೂ ದಾನಧರ್ಮಾದಿಗಳನ್ನು ಮಾಡಿ, ತರುವಾಯ ಊರಿಗೆ ಹಿಂದಿರುಗಿದರು. ಹಾಗೆ ತಂದೆತಾಯಿಗಳಿಬ್ಬರೂ, ತಮ್ಮೊಂದಿಗೆ ಬಂದಿದ್ದ ಇತರರೊಂದಿಗೆ ಹೊರಟು, ಒಂದುದಿನದ ಪ್ರಯಾಣಮಾಡಿದ ಮೇಲೆ, ಅವರಿಗೆ ತಮ್ಮ ಮಗನು ತಮ್ಮೊಂದಿಗೆ ಪ್ರಯಾಣವಾಗಿ ಬರಲಿಲ್ಲವೆಂ ಬುದು ತಿಳಿಯಿತು. ಹೊರಟಾಗ ತಮ್ಮ ಜೊತೆಯಲ್ಲಿರದಿದ್ದರೂ, ಆ ಗುಂಪಿ ನಲ್ಲಿ ಎಲ್ಲೋ ಇರಬಹುದೆಂದು ತಿಳಿದಿದ್ದ ಅವರ ನಂಬಿಕೆಯು ಸುಳ್ಳಾದೊಡ ನೆಯೇ, ಪಾಪ, ಆ ದಂಪತಿಗಳು ಬಹು ಗಾಬರಿಪಟ್ಟು, ಒಡನೆ ಹಿಂದಿರುಗಿ ಎರೂಸಲೇಮಿಗೆ ಬಂದು ಅಲ್ಲಲ್ಲಿ ಹುಡುಕತೊಡಗಿದರು. ಕೊನೆಗೆ ದೇವಸ್ಥಾ ನದ್ವಾಸಭಾಂಗಣದಲ್ಲಿ ಪಂಡಿತರೂ ಶಾಸ್ತ್ರಕಾರರೂ ನೆರೆದು, ಧರ್ಮಶಾಸ್ತ್ರ ವಿಚಾ

ರದಲ್ಲೂ, ಮತಗ್ರಂಥಗಳ ಗೂಢಪ್ರಶ್ನೆಗಳನ್ನು ಕುರಿತೂ ಚರ್ಚೆ ನಡೆಸುತ್ತಿರಲು ಅವರ ಮಧ್ಯದಲ್ಲಿ ತಮ್ಮ ಮಗನನ್ನು ಕಂಡು ಅವರಿಗೆ ಏಕಕಾಲದಲ್ಲಿ ಆನಂದವೂ ಆಶ್ಚರ್ಯವೂ ಉಂಟಾದುವು. ಅಲ್ಲಿ ಏಸುವು, ಆ ಪಂಡಿತರು ಶಾಸ್ತ್ರ ವಿಚಾರದಲ್ಲಿ ಕೇಳುತ್ತಿದ್ದ - ಕೇವಲ ಬಹು ಶ್ರುತರಾದ ವಿದ್ವಾಂಸರಿಂದ ಮಾತ್ರವೇ ಗ್ರಹಿಸಲ್ಪಡಲು ಅರ್ಹವಾದ-ಪ್ರಶ್ನೆಗಳನ್ನು ಸಹ ಬಹು ಸುಲಭವಾಗಿ ಅರ್ಥಮಾಡಿಕೊಂಡು, ಅವರಿಗೂ ಸಂದೇಹ ತೋರಿದ್ದ ಅನೇಕ ಸಂಗತಿಗಳನ್ನು ಬಹು ತಿಳಿವಾಗಿ, ಅವರ ಮನಸ್ಸಿಗಂಟುವಂತೆ ತಿಳಿಸುತ್ತಾ ಕುಳಿತಿದ್ದನು. ಸಾಧ್ವಿ ಮೇರಿಯು, ಕಳೆದುಹೋಗಿದ್ದ ತನ್ನ ಮಗನನ್ನು ಒಡನೆ ಕರೆದು ಅಪ್ಪಿಕೊಂಡು-'ಕಂದಾ ನೀನೇಕೆ ನಮ್ಮೊಂದಿಗೆ ಬರಲಿಲ್ಲ. ನೀನೂ ನಮ್ಮೊಂದಿಗೆ ಗುಂಪಿನಲ್ಲಿ ಬಂದೆಯೆಂದು ತಿಳಿದೇ ನಾವು ಪ್ರಯಾಣ ಮಾಡಿದ್ದೆವಲ್ಲಾ — ನೀನೇಕೆ ಹೀಗೆ ಒಬ್ಬನೇ ಹಿಂದೆ ನಿಂತುಬಿಟ್ಟೆ! ನಿನಗಾಗಿ ಬಹು ಗಾಬರಿಪಟ್ಟು ಎಲ್ಲೆಲ್ಲೋ ಹುಡುಕಿದೆವಲ್ಲಾ! ಹೀಗೆ ಮಾಡಬಹುದೇ?' ಎಂದು ಕೇಳಿದಳು. ಅದನ್ನು ಕೇಳಿದ ಆ ಬಾಲಕನು - 'ತಾಯೇ, ನಾನು ನನ್ನ ತಂದೆಯ ಮನೆಯಲ್ಲಿ (ದೇವಾಲಯದಲ್ಲಿ) ಇದ್ದೇನೆಂಬುದು ನಿಮಗೆ ತಿಳಿಯಲಿಲ್ಲವೋ! ಆತನ ಕೆಲಸದಲ್ಲೇ ನಿರತನಾಗಿ ನಾನು ಇಲ್ಲೇ ಇದ್ದೆನು. ಇದಕ್ಕಾಗಿ ಗಾಬರಿಪಟ್ಟುದೇಕೆ?' ಎಂದು ಪ್ರತ್ಯುತ್ತರ ಕೊಟ್ಟನು. ಆ ಮಾತನ್ನು ಕೇಳಿ, ಆ ದಂಪತಿಗಳು ಪರಮ ಸಂತೋಷಪಟ್ಟರು.

**ಅಧ್ಯಾಯ ೩.** **"ಜ್ಞಾನಸ್ನಾನ"**

ಪಸ್ಕಹಬ್ಬವನ್ನು ತೀರಿಸಿಕೊಂಡು ನಜರೇತಿಗೆ ಹಿಂದಿರುಗಿ ಬಂದ ತರ್ುವಾಯ, ಸುಮಾರು ಹದಿನೆಂಟು ವರ್ಷಕಾಲ ಏಸುವು ಎಲ್ಲಿದ್ದನೆಂಬ ವಿಚಾರವಾಗಿ ಕ್ರೈಸ್ತಧರ್ಮಗ್ರಂಥಗಳು *(New Testament)* ಕೇವಲ ಮೌನಭಾವವನ್ನು ಅವಲಂಬಿಸಿವೆ. ಮೇಲ್ಕಂಡಂತೆ ಹನ್ನೆರಡು ವರ್ಷದ ಬಾಲಕನಾಗಿದ್ದಾಗ ಆತನನ್ನು ಎರೂಸಲೇಮಿನ ದೇವಸ್ಥಾನದಲ್ಲಿ ನೋಡಿದ್ದ ನಾವು ಪುನಃ ಆತನನ್ನು ಕಾಣುವುದೆಂದರೆ ಯೋರ್ದನ್ *(Jorden)* ಹೊಳೆಯಲ್ಲಿ, ಯೋಹಾನ *(John)* ಸಾಧುವಿನಿಂದ ಜ್ಞಾನಸ್ನಾನವನ್ನು ಪಡೆಯಲು ಬಂದಾಗಲೆ! ಈ ಮಧ್ಯಕಾಲವನ್ನು ಆತನು ಎಲ್ಲಿದ್ದು ಏನುಮಾಡುತ್ತಾ ಹೇಗೆ ಕಳೆದನೆಂಬ ವಿಷಯದಲ್ಲಿ ಈ ಬಗೆಯ ಅನಿಶ್ಚಿತಭಾವನೆ ಯಿರುವುದರಿಂದ ಅದನ್ನು-ವಿಚಾರ

ಪ್ರಾಧಾನ್ಯವಾಗಿರುವ ಈ ಕಾಲದಲ್ಲಿ ಹಲವರು ಹಲವು ಒಗೆಯ ವಿಚಾರ ಪರಂಪರೆಗಳಿಂದ ಚರ್ಚಿಸುತ್ತಿದ್ದಾರೆ. ಆತನು ಈ ಮಧ್ಯಕಾಲದಲ್ಲಿ ತನ್ನ ಜನ್ಮಭೂಮಿಯಿಂದ ಹೊರಟು ಹಿಂದೂಸ್ಥಾನದ ಆರ್ಯಾವರ್ತದಲ್ಲೂ ಟಿಬೆಟ್ ದೇಶದಲ್ಲೂ, ಕೆಲಕೆಲವು ಕಾಲ ವಾಸಿಸಿ, ಹಿಂದೂ ಮತ್ತು ಬೌದ್ಧ ಧರ್ಮ ತತ್ವಗಳನ್ನು ಅಭ್ಯಸಿಸಿ, ತನ್ನ ದೇಶಕ್ಕೆ ಹೋದನೆಂದು ಒಂದು ಲೋಕವಾರ್ತೆಯು ಹಬ್ಬಿ ಹರಡುತ್ತಿದೆ. ಇದರ ಸತ್ಯಾಸತ್ಯ ವಿಮರ್ಶೆಯು ಇನ್ನೂ ಆಗಿಲ್ಲ. (*'The King of Truth'*) ಎಂಬೊಂದು ಕ್ರೈಸ್ತಗ್ರಂಥವು ಎರೂಸಲೇಮಿನಿಂದ ಬಂದ ತರುವಾಯ ಹದಿನೆಂಟು ವರ್ಷಕಾಲವೂ ಆತನು ತನ್ನ ಕುಲವೃತ್ತಿಯನ್ನು ಮಾಡಿಕೊಂಡು ಸ್ವಗ್ರಾಮವಾದ ನಜರೇತಿನಲ್ಲೇ ವಾಸಿಸಿದ್ದನೆಂದು ಕಂಠೋಕ್ತವಾಗಿ ಹೇಳುತ್ತಿದೆ. ಹಬ್ಬವನ್ನು ತೀರಿಸಿಕೊಂಡು ಹೆಂಡತಿ ಮತ್ತು ಏಸುವಿನೊಂದಿಗೆ ಊರು ಸೇರಿದ ಜೋಸೆಫನು ಮುಂದೆ ಏನಾದನು ಎಂಬ ವಿಚಾರವಾದರೂ ಎಲ್ಲೂ ವ್ಯಕ್ತಪಟ್ಟಿಲ್ಲ.

ಏಸು ಎರೂಸಲೇಮಿನಿಂದ ಹಿಂದಿರುಗಿ ಬಂದ ಕೆಲವು ದಿನಗಳಲ್ಲೇ ಜೋಸೆಫನು ಮೃತನಾಗಿರಬಹುದು. ತರುವಾಯ ತಾಯಿಯ ಪೋಷಣೆಯ ಭಾರವು ಏಸುವಿನ ಮೇಲೆಯೇ ಬಿದ್ದಿರಬಹುದು. ಆತನು ತನ್ನ ಕುಲವೃತ್ತಿಯಿಂದ ಜೀವನವನ್ನು ಸಾಗಿಸಿಕೊಳ್ಳುತ್ತ, ದಿನದಿನಕ್ಕೆ ಧೈರ್ಯ ಸಾಮರ್ಥ್ಯ ಲೋಕಾನುಭವ ಭೂತದಯೆ ಭಗವದ್ಭಕ್ತಿ ಮುಂತಾದುವುಗಳನ್ನು ಗಳಿಸಿಕೊಂಡು ಎಲೆಯ ಮರೆಯಲ್ಲಿನ ಕಾಯಿಯಂತೆ ಅಭಿವೃದ್ಧಿಯಾಗಿ ಕೊನೆಗೆ ಪರಿಪಕ್ವ ಸ್ಥಿತಿಯಲ್ಲಿ ಮುಂದೆ ಹೇಳುವಂತೆ ಲೋಕಕ್ಕೆ ಪ್ರಕಟವಾಗಿರಬಹುದು. ಹಾಗಿದ್ದರೆ ಹಲವು ಮಂದಿ ಸ್ವಜನರ-ಕುಟುಂಬಿಕರ ಮಧ್ಯೆ ಲೌಕಿಕವೃತ್ತಿಯನ್ನು ಅವಲಂಬಿಸಿ ಮೂವತ್ತು ವಯಸ್ಸಿನವರೆಗೆ ವಾಸಿಸಿದ್ದ ಆವರೆಗೆ ಸ್ಪಷ್ಟ ಧರ್ಮಾವಲಂಬಿಯಾಗದೆ ಇರಬಹುದೆ ಎಂಬ ಸಂದೇಹವಾದರೂ ಉಂಟಾಗುವುದು. ಆದರೆ ಅದಕ್ಕೆ ಸಮಾಧಾನವೂ ಉಂಟು. ಚಿಕ್ಕಂದಿನಿಂದಲೂ ವೈರಾಗ್ಯಪರ ಚಿತ್ತವೃತ್ತಿಯಿಂದ ಇದ್ದ ಅತಿಶಯಮೇಧಾವಿಯಾದ ಆತನು, ಲೋಕದಲ್ಲಿ ತನ್ನ ಕಣ್ಣೆದುರಾಗೇ ಇದ್ದ ಅನೇಕ ಪರಸ್ಪರ ವಿರುದ್ಧ ಧರ್ಮಗಳನ್ನು ಕಂಡು ಬೇಸತ್ತು ಅವುಗಳನ್ನು ನಿರ್ಮೂಲಿಸಲು ಸಂಕಲ್ಪಿಸಿ, ಲೌಕಿಕವನ್ನು ವಿಸರ್ಜಿಸಿ, ತತ್ಕಾರ್ಯಸಾಧನೆಗಾಗಿ ಸಮಯ ನಿರೀಕ್ಷಣೆಯ

ಲ್ಲಿದ್ದು, ಮುಂದೆ ಹೇಳುವಂತೆ ಯೋಹಾನನು ಬೋಧಿಸತೊಡಗಿದಾಗ ಹೊರಬಿದ್ದಿರಬಹುದು. ಅಥವ ಹಿಂದೆ ದೇವಸ್ಥಾನದಲ್ಲಿ ಬಾಲಕ ಏಸುವು ತನ್ನ ತಾಯಿ ತಂದೆಗಳಿಗೆ 'ದೇವರ ಕಾರ್ಯದಲ್ಲಿ ನಿರತನಾಗತಕ್ಕುದು ತನ್ನ ಕರ್ತವ್ಯ'ವೆಂದು ಹೇಳಿದಂತೆಯೇ, ದೊಡ್ಡವನಾಗುತ್ತ-ಆಗುತ್ತ ಭಕ್ತಿ ವೈರಾಗ್ಯಗಳು ಹೆಚ್ಚು ಹೆಚ್ಚಾಗಿ ದೃಢಪಡುತ್ತಿರಲು ಧರ್ಮ ಸಂಸ್ಥಾಪನೆಯ ಕಾರ್ಯಕ್ಕಾಗಿ ಲೋಕಸಂಚಾರದಿಂದ ವಿವಿಧ ಧರ್ಮರಹಸ್ಯಗಳನ್ನು ತಿಳಿದು ಯೋಗಸಾಮರ್ಥ್ಯವನ್ನೂ ಪಡೆದಿರಬಹುದು. ಆದರೆ ಆತನ ಜೀವಿತ ವಿಚಾರವನ್ನು ಬರೆದಿರುವ ಕ್ರೈಸ್ತ ಗ್ರಂಥಗಳು, ಹೇಗಾದರೊಂದು ಬಗೆಯಿಂದ ಸಕಾರಣವಾಗಿ ಇರಲೇಬೇಕಾದ ಮೇಲ್ಕಂಡ ವಿಚಾರದಲ್ಲಿ ಯಾವ ಪಕ್ಷವನ್ನೂ ವಹಿಸದೆ ಮೌನವಾಗಿರುವುದರಿಂದ, ಕೇವಲ ಸಂದಿಗ್ಧವಾಗಿರುವ ಈ ಸಂಗತಿಯನ್ನು ಕುರಿತು ಯಾರೂ ನಿರ್ಧರವಾಗಿ ಏನನ್ನೂ ಹೇಳುವಂತಿಲ್ಲ.

ಆದುದರಿಂದ ಸದ್ಯಃ ದೊರೆತಿರುವಂತೆಯೇ ಕಥಾತಂತುವನ್ನು ಅನುಸರಿಸಿ ಮುಂದರಿಸಬೇಕಾಗಿದೆ. ಏಸುವಿಗೆ ಸುಮಾರು ಮೂವತ್ತು ವರ್ಷ ಪ್ರಾಯ. ಆ ಕಾಲದಲ್ಲಿ ಯೋಹಾನನೆಂಬ ಸಾಧುವು ಪಾಲಸ್ತೈನ್ ದೇಶಕ್ಕೆ ದಕ್ಷಿಣಭಾಗದಲ್ಲಿದ್ದ ಒಂದು ಅಡವಿಯಲ್ಲಿ ವಾಸಿಸುತ್ತಿದ್ದನು. ಆತನು ಸುಖ ಸೌಲಭ್ಯಗಳನ್ನು ವಿಸರ್ಜಿಸಿ ಬೇಕೆಂದೇ ದಾರಿದ್ರ್ಯವನ್ನೂ ಕಷ್ಟಮಯಜೀವಿತವನ್ನೂ ಅಂಗೀಕರಿಸಿ ಲೋಕಸಂಗ್ರಹಣಕಾರ್ಯದಲ್ಲಿ ಬದ್ಧಕಂಕಣನಾಗಿದ್ದನು. ಒಂಟೇ ಕೂದಲಿನಿಂದ ಮಾಡಿದ ಒಂದು ವಸ್ತ್ರವನ್ನು ಹೊದೆದು, ಒಂದು ಚರ್ಮದ ತುಂಡನ್ನು ನಡುವಿಗೆ ಸುತ್ತಿಕೊಂಡು, ಆತನು ಅಡವಿಯಲ್ಲಿ ದೊರೆವ ಜೇನು ಮತ್ತು ಹಣ್ಣು ಕಾಯಿಗಳಿಂದ ಜೀವಿಸುತ್ತಾ ಕೇವಲ ನಿರ್ಮಮನಾಗಿ ಧರ್ಮಬೋಧನೆ ಮಾಡುತ್ತಿದ್ದನು. ಹೀಗೆ ಕೇವಲ ಸ್ವಾರ್ಥರಹಿತನೂ, ವಿರಕ್ತನೂ ಆಗಿದ್ದುದರಿಂದ ಆತನು ನಿರ್ಭಯವಾಗಿ ಜನರ ತಪ್ಪುಗಳನ್ನು ಉದ್ಘಾಟಿಸಿ, ಸತ್ಯಮಾರ್ಗವನ್ನು ಬೋಧಿಸಲು ಸಾಧ್ಯವಿದ್ದಿತು. ಎಹೂದ್ಯರಲ್ಲಿ ಸುಪ್ರಸಿದ್ಧ ಪ್ರವಾದಿಯೆನ್ನಿಸಿಕೊಂಡಿದ್ದ ಎಲೀಯನಂತೆಯೇ ಈ ಯೋಹಾನನಾದರೂ-'ಧರ್ಮಕರ್ತನೊಬ್ಬನು ಲೋಕದಲ್ಲಿ ಅವತರಿಸತಕ್ಕವನಿದ್ದಾನೆ. ಆತನಿಗೆ ಮಾರ್ಗವನ್ನು ಸರಿಗೊಳಿಸತಕ್ಕ ಕಾರ್ಯವು ಮಾತ್ರ ನನ್ನದು' ಎಂದು ಸಾರಿದನು. ಸ್ವಾರ್ಥತೆಯನ್ನು ಬಿಟ್ಟು ಧರ್ಮವನ್ನು

ಬೋಧಿಸತೊಡಗುವ ಸಾಧುವನ್ನು ಅನುಸರಿಸದವರಾರು? ಪಾಲಸ್ಟೈನ್ ದೇಶದ ಆ ಭಾಗದಲ್ಲಿ ವಾಸಿಸಿದ್ದ ಜನರೆಲ್ಲಾ ಗುಂಪುಗುಂಪಾಗಿ, ಆತನಲ್ಲಿಗೆ ಬಂದು, ಆತನು ಹೇಳುತ್ತಿದ್ದ ಮಾತುಗಳನ್ನು ಕೇಳಲಾತುರಗೊಂಡರು. ಯೋಹಾನನು - 'ಜನಗಳೇ, ಧರ್ಮಸ್ಥಾಪನೆಗಾಗಿ ಕ್ರಿಸ್ತನು ಬರತಕ್ಕವನಿದ್ದಾನೆ. ಕಾಲವು ಸಮೀಪಿಸಿದೆ. ಆತನು ಮನುಷ್ಯರನ್ನು ಪಾಪಮಾರ್ಗದಿಂದ ತಪ್ಪಿಸಿ, ದೇವರಿಗೆ ವಿಧೇಯರಾಗುವಂತೆ ಮಾಡುವನು. ಸತ್ಯ ಧರ್ಮ ನ್ಯಾಯಗಳನ್ನು ಸ್ಥಾಪಿಸುವುದರ ಮೂಲಕ, ಸ್ವರ್ಗಸಾಮ್ರಾಜ್ಯವನ್ನು ಭೂಲೋಕಕ್ಕೆ ತರಬೇಕೆಂಬುದೇ ಆತನ ಆಗಮನದ ಮುಖ್ಯೋದ್ದೇಶವು. ನಿಮ್ಮ ಈ ವರೆಗಿನ ಪಾಪಗಳಿಗಾಗಿ ಪಶ್ಚಾತ್ತಾಪಪಟ್ಟು, ಭಗವಂತನ ಕಡೆ ಮನಸ್ಸನ್ನು ತಿರುಗಿಸಿರಿ. ಸ್ವಾರ್ಥಬುದ್ಧಿಯನ್ನು ಬಿಟ್ಟು ಉದಾರಿಗಳಾಗಿರಿ. ಪರೋಪಕಾರಿಗಳಾಗಿರಿ. ಅನ್ಯಾಯದ-ಅಸತ್ಯದ ಮಾರ್ಗಗಳನ್ನು ತ್ಯಜಿಸಿರಿ. ಹಾಗಾದರೆ ಮಾತ್ರ ಆತನು ಬಂದಾಗ ಆತನನ್ನು ತಿಳಿದುಕೊಳ್ಳಲು ಯೋಗ್ಯರಾಗುವಿರಿ' ಎಂದು ಮುಂತಾಗಿ ಬೋಧಿಸಿದನು.

ಮನುಷ್ಯನು ಅಹಂಕಾರ ಮಮಕಾರ ಪೂರಿತನಾಗಿ ಪಾಪಮಾರ್ಗವನ್ನು ಅನುಸರಿಸುತ್ತಿರುವವರೆಗೆ ಪಶ್ಚಾತ್ತಾಪವುಂಟಾಗದು. ಆದರೆ ಪವಿತ್ರವಸ್ತುವಿನ ಸಾನ್ನಿಧ್ಯಕ್ಕೆ ಬಂದೊಡನೆಯೇ ಪಾಪಿಯ ಹೃದಯದಲ್ಲೂ ಪಶ್ಚಾತ್ತಾಪವುಂಟಾಗದಿರುವುದಿಲ್ಲ. ಈ ಬಗೆಯ ಪಶ್ಚಾತ್ತಾಪವೇ ಮನಸ್ಸನ್ನು ಶುದ್ಧಪಡಿಸಿ ಅದರಲ್ಲಿದ್ದ ಪಾಪದ ಕೊಳೆಯನ್ನು ಹೋಗಲಾಡಿಸಲು ಸಹಕಾರಿಯಾಗುವುದು. ಆದುದರಿಂದ ಹಿಂದೆಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪ ಪಟ್ಟು ಪುನಃ ಪಾಪಮಾರ್ಗದಲ್ಲಿ ಪ್ರವೇಶಿಸದಿರುವಂತೆ ಭಗವಂತನ ಪವಿತ್ರನಾಮವನ್ನು ಉಚ್ಚರಿಸುತ್ತಿರಬೇಕೆಂದು ಸಕಲಮತಗಳೂ ವಿಧಿಸುತ್ತಿವೆ. ಕೊಳೆಯಾದ ಪಾತ್ರೆಯನ್ನು ನೀರಿನಿಂದ ತೊಳೆವಂತೆ ಮನಸ್ಸನ್ನಾದರೂ ಯಥಾರ್ಥ ರೀತಿಯ ಪಶ್ಚಾತ್ತಾಪದಿಂದ ಶುದ್ಧಿಗೊಳಿಸಬಹುದು. ಹೀಗೆ ಪರಿಶುದ್ಧಚರಿತನಾದ ಯೋಹಾನನು ತನ್ನಬಳಿಗೆ ಬಂದ ಜನಗಳನ್ನು ಸಮೀಪದಲ್ಲೇ ಇದ್ದ ಯೋರ್ದನ್ ಹೊಳೆಯ ಬಳಿಗೆ ಕರೆದೊಯ್ದು ತಮ್ಮ ಪಾಪಗಳಿಗಾಗಿ ಅವರು ಪಶ್ಚಾತ್ತಾಪ ಪಟ್ಟನಂತರ ತನ್ನ ಕೈಯಿಂದ ಆ ಹೊಳೆಯ ಸ್ವಲ್ಪ ನೀರನ್ನೆತ್ತಿ ಅವರ ಮೇಲೆ ಸುರಿದು, 'ಶುದ್ಧರಾಗಿರಿ' ಎಂದುಚ್ಚರಿಸಿ, ಶುದ್ಧೀಕರಣದ

ಬಾಹ್ಯಕ್ರಿಯೆಯನ್ನೂ ಆಚರಿಸುತ್ತಿದ್ದನು. ಮತ್ತು-" ಓ ಜನರೇ, ನಾನಾದರೆ ಕೇವಲ ನೀರಿನಿಂದ ನಿಮ್ಮನ್ನು ಶುದ್ಧಿಗೊಳಿಸಲು ಯತ್ನಿಸಿದ್ದೇನೆ. ಆದರೆ ಮುಂದೆ ಬರಲಿರುವ ಕರ್ತನು ನಿಮ್ಮನ್ನು ಭಗವತ್ತತ್ವದಿಂದ ಪರಿಶುದ್ಧಗೊಳಿಸಲಿರುವನು. ಆದುದರಿಂದ ಆತನಿಗಾಗಿ ಎದುರುನೋಡಿಕೊಂಡಿರಿ' ಎಂದು ಹೇಳುತ್ತಿದ್ದನು. ಸುತ್ತಮುತ್ತಲಿನ ಪ್ರಾಂತಗಳಿಂದ ನೂರಾರು ಸಾವಿರಾರು ಜನರು ಬಂದು ಆತನಿಂದ ಜ್ಞಾನಸ್ನಾನವನ್ನು ಹೊಂದಿ ಬೋಧನೆಗಳನ್ನು ಕೇಳಿ ಮನಃಶಾಂತರ ಪಡೆದು ತೃಪ್ತರಾಗಿ ಹಿಂದಿರುಗುತ್ತಿದ್ದರು. ಆತನ ಕೀರ್ತಿಯು ಎಲ್ಲೆಲ್ಲೂ ಹರಡಿತು.

ಆ ಸಂಗತಿಯನ್ನು ತಿಳಿದು, ಯೋಹಾನದಿಂದ ಜ್ಞಾನಸ್ನಾನವನ್ನು ಪೊಂದುವುದಕ್ಕಾಗಿ ಏಸುವೂ ಯೋರ್ದನ್ ಹೊಳೆಯ ಬಳಿಗೆ ಬಂದನು. ಯೋಹಾನನು ಏಸುವಿಗೆ ಬಂಧುವೂ ವಯಸ್ಸಿನಲ್ಲಿ ಆತನಿಗಿಂತ ಮೂರು ತಿಂಗಳು ಹಿರಿಯನೂ ಆಗಿದ್ದನು. ಮಹಾಭಕ್ತನಾದ ಏಸುವು ಪಾಪಿಗಳಾದ ಇತರರಂತೆ ಶುದ್ಧನಾಗಬೇಕಿಲ್ಲದಿದ್ದರೂ, ಜನಸಮೂಹದಲ್ಲಿದ್ದ ತರುವಾಯ ಅವರಂತೆಯೇ ನಡೆಯಬೇಕೆಂಬ ಲೌಕಿಕಾಚಾರಕ್ಕಾಗಿ. ತಾನೂ ನದಿಯಲ್ಲಿಳಿದು ನಿಂತು, ಆತನಿಂದ ಪವಿತ್ರೋದಕವನ್ನು ಸ್ವೀಕರಿಸಲು ಸಿದ್ಧನಾದನು. ಇತರ ಸಾಮಾನ್ಯರು, ತಮ್ಮ ಹಲವು ಬಗೆಯ ಪಾಪಗಳನ್ನು ಆತನಿಗೆ ಬಿನ್ನವಿಸಿಕೊಂಡು, ಪಶ್ಚಾತ್ತಾಪಪಟ್ಟು ರಕ್ಷಣೆಯನ್ನು ಬೇಡಿದ್ದರಾದರೂ ಏಸುವು ತನ್ನ ಮನಸ್ಸಿಗೆ ಗೋಚರವಾದಂತೆ ಯಾವ ಪಾಪವನ್ನೂ ಮಾಡಿದ್ದವನಲ್ಲವಾಗಿ ತನ್ನ ಪಾಪವನ್ನು ಕ್ಷಮಿಸೆಂದು ಬೇಡುವುದಕ್ಕೆ ಬದಲಾಗಿ, ಪರಮಪಿತನನ್ನು ಕುರಿತು, ಲೋಕದಲ್ಲಿ ವ್ಯಾಪಿಸಿದ್ದ ಪಾಪವನ್ನೂ ದುಃಖ ಸಂಕಟಗಳನ್ನೂ ನೀಗಿಸೆಂದು ಪ್ರಾರ್ಥಿಸಿದನು.

'ಜ್ಞಾನಸ್ನಾನ' ಎಂಬಮಾತು ಹಿಂದೂಧರ್ಮಾವಲಂಬಿಗಳಿಗೆ ಹೊಸದಲ್ಲ. 'ಸ್ನಾನಮಾಡಿರೋ ಜ್ಞಾನತೀರ್ಥದಲಿ-ನಾನು ತಾನು ಎಂಬ ಅಹಂಕಾರವ ಬಿಟ್ಟು' ಎಂಬದಾಗಿ ಒಬ್ಬಾನೊಬ್ಬ ದಾಸರು ಹಾಡಿದ್ದಾರೆ. ಜಲಸ್ನಾನದಿಂದ ದೇಹದ ಮಲವು ಕತ್ತರಿಸಿ ಹೋಗುವಂತೆ, ಜ್ಞಾನತೀರ್ಥದ ಸ್ನಾನದಿಂದ ಮನಸ್ಸಿನ ಕಲ್ಮಷವಾದರೂ ಕತ್ತರಿಸಿಹೋಗಿ ಅದು ಪರಿಶುದ್ಧವಾಗುವುದು. ನಾನು ತಾನು ಎಂಬ ಅಹಂಕಾರ ಮಮಕಾರಗಳಿರುವವರೆಗೆ

ಮನುಷ್ಯನಲ್ಲಿ ವಿನಯ ವಿಧೇಯತೆಗಳುಂಟಾಗವು, ಅಹಂಕಾರ ಮದಾಂಧನಿಗೆ ಪಾಪಕಾರ್ಯಗಳನ್ನು ಮಾಡುವಲ್ಲಿ ಭಯಭೀತಿಗಳ-ಪಾಪಪುಣ್ಯಗಳ ಲಕ್ಷ್ಯವೇ ಇರದು; ಅಹಂಕಾರವು ಹೋಗುವವರೆಗೆ ತಾನು ಮಾಡುವುದು ಪಾಪಕಾರ್ಯವೆಂದು ತಿಳಿದಿದ್ದರೂ ಪಶ್ಚಾತ್ತಾಪವುಂಟಾಗದು. ಪಶ್ಚಾತ್ತಾಪವುಂಟಾಗುವವರೆಗೆ ಪಾಪಮಾರ್ಗ ಗಮನವು ತಪ್ಪದು. ಪಾಪಮಾಡುತ್ತಿರುವವರೆಗೆ ಸತ್ಪಥವಾದರೂ ಹೇಗೆ ದೃಷ್ಟಿಗೋಚರವಾದೀತು! ಆದುದರಿಂದ ಪಾಪ ಪರಿಹಾರದ ಮೂಲಕ ಸದ್ಗತಿಯಾಗಬೇಕೆಂದು ಅಪೇಕ್ಷಿಸುವ ಒಬ್ಬೊಬ್ಬನೂ ಜೀವನದಲ್ಲಿ ಎಂದೋ ಒಂದ ಸಾರಿ ಮಾತ್ರವಲ್ಲ- ಿನದಿನವೂ, ಸಾಯಂಕಾಲ ಪ್ರಾತಃಕಾಲಗಳಲ್ಲೂ ಜ್ಞಾನವೆಂಬ ತೀರ್ಥದಲ್ಲ ಸ್ನಾನಮಾಡುತ್ತಿರಬೇಕು. ಎಂದರೆ ಸತ್ಯ ಅಸತ್ಯ, ನ್ಯಾಯ ಅನ್ಯಾಯ, ನಿತ್ಯ ಅನಿತ್ಯ, ಧರ್ಮ ಅಧರ್ಮ, ಪಾಪ ಪುಣ್ಯ ಮುಂತಾದುವುಗಳನ್ನು ವಿಮರ್ಶಿಸುತ್ತಾ, ಲೋಕಯಾತ್ರೆಯಲ್ಲಿ ನಡೆಯುತ್ತಿರಬೇಕು. ಕೇವಲ ಪಶ್ಚಾತ್ತಾಪ ಪಟ್ಟ ಮಾತ್ರದಿಂದಲೇ ಮಾಡಿದ ಸಮಸ್ತ ಪಾಪವೂ ಪರಿಹಾರವಾಗಿ ತಾನು ಶುದ್ಧನಾಗಿ ಬಿಡುವನೆಂದು ಯಾರೂ ಭಾವಿಸಲಾಗದು. ಪಶ್ಚಾತ್ತಾಪವೆಂದ, ಇದು ಪಾಪಕಾರ್ಯವೆಂದು ಮನಸ್ಸಿಗೆ ನಿಶ್ಚಯತೋರಿ ಮುಂದೆ ಅಂತಹ ಕಾರ್ಯವನ್ನು ಎಂದಿಗೂ ಮಾಡದಂತೆ ಆಗಬೇಕೆಂಬುದೇ ಪಶ್ಚಾತ್ತಾಪ ಕ್ರಿಯೆಯ ಮುಖ್ಯ ತತ್ವವು.

ಏಸುವೂ ಇತರರಂತೆಯೇ ಯೋಹಾನನಿಂದ ಸ್ನಾನವನ್ನು ಹೊಂದಿ ನೀರಿನಿಂದ ಹೊರಕ್ಕೆ ಹೊರಟು ಬಂದೊಡನೆಯೇ ಒಂದು ವಿಚಿತ್ರ ಸಂಗತಿಯು ನಡೆಯಿತೆಂದು ಹೇಳಲ್ಪಟ್ಟಿದೆ. ಆಗತಾನೆ ಸ್ನಾನಮಾಡಿ ನಿಂತ ಏಸುವಿನ ಮೇಲೆ ಅಂತರಿಕ್ಷವು ತೆರೆದಂತಾಗಿ, ಅಲ್ಲಿಂದ ದೇವರ ಆತ್ಮವು ಪಾರಿವಾಳದ ರೂಪಿನಿಂದ ಇಳಿದು ಬಂದಿತು. ಈವರೆಗೇ ಭಗವದ್ಭಕ್ತಿ, ಸತ್ಯ ಶಾಂತತೆ ನಯ ವಿನಯಗಳಿಂದ ಕೂಡಿದ್ದ ಏಸುವು ಈ ಜ್ಞಾನಸ್ನಾನದಿಂದಲೂ, ಮತ್ತು ಭಗವಾನನ ಪರಿಶುದ್ಧಾಂತಃಕರಣವು ತನ್ನ ದೇಹದಲ್ಲಿ ಪ್ರವೇಶಮಾಡಿದುದರಿಂದಲೂ, ನಿರ್ದೋಷ, ಪ್ರೀತಿ, ಪರಿಶುದ್ಧತೆ, ಆತ್ಮಜ್ಞಾನ ಮುಂತಾದುವುಗಳನ್ನು ವಿಶೇಷವಾಗಿ ಗಳಿಸಿದುದರಿಂದ, ಮುಂದೆ ಭಗವತ್ಕಾರ್ಯ ಸಾಧನೆಗೆ ಸಕಲ ಬಗೆಯಿಂದಲೂ ತಕ್ಕವನಾದನು. ಅಲ್ಲದೆ ಆ ಸಂದರ್ಭದಲ್ಲೇ

ಅಂತರಿಕ್ಷದಿಂದ—'ನೀನೇ ನನ್ನ ಪ್ರಿಯಪುತ್ರನು-ನಿನಗೆ ನಾನು ಪ್ರಸನ್ನನಾಗಿದ್ದೇನೆ' ಎಂಬದಾಗಿ ದೇವರೇ ಹೇಳಿದಂತೆ ಒಂದು ಅಶರೀರವಾಣಿಯೂ ಕೇಳಿಸಿತು. ಈ ಅಶರೀರವಾಣಿಯನ್ನು ಕೇಳಿದ ಯೋಹಾನನು-'ಜಗತ್ತಿನ ಉದ್ಧಾರಕ್ಕಾಗಿ ಬರುತ್ತಾನೆಂದು ನಾನು ಹೇಳುತ್ತಿದ್ದ ರಕ್ಷಕನು ಈತನೇ! ಈತನೇ ಪರಮಪಿತನಿಂದ ಅನುಗೃಹೀತನಾಗಿರುವ ದೈವ ಕುಮಾರನು' ಎಂದು ಹೇಳಿ ಮುಂದೆ ಆತನಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳತೊಡಗಿದನು.



**ಅಧ್ಯಾಯ ೪. "ಪರ್ವತಪ್ರಸಂಗ"**

ಧರ್ಮಪ್ರಚಾರಕನ ಸ್ಥಾನವು ಸಾಮಾನ್ಯವಾದುದಲ್ಲ. ಬಹು ಗುರುತರವಾದುದು. ಜನಸಾಮಾನ್ಯರೆಲ್ಲರೂ ತಮ್ಮ ನಡೆನುಡಿಗಳಿಗೆ ಆತನನ್ನೇ ಆದರ್ಶಪುರುಷನನ್ನಾಗಿ ಭಾವಿಸುವುದರಿಂದ ಆತನು ಬಹು ಜಾಗರೂಕತೆಯಿಂದ ನಡೆಯಬೇಕಾದುದು ಅತ್ಯವಶ್ಯಕವು. ಆತನು ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದವನಾಗಿರಬೇಕು. ಪಂಚೇಂದ್ರಿಯಗಳ ಉಪಟಳವನ್ನು ಮನೋದಾರ್ಢ್ಯದಿಂದ ತಡೆಯಬಲ್ಲವನಾಗಿರಬೇಕು. ಬಹು ಶ್ರುತನಿರಬೇಕು. ಧರ್ಮ ಸೂಕ್ಷ್ಮವನ್ನು ಅರಿತವನಿರಬೇಕು. ತನ್ನನ್ನು ಕೊಲ್ಲುವುದಕ್ಕೆ ಬರುವ ಶತ್ರುವನ್ನಾದರೂ ಕ್ಷಮಿಸಿ ರಕ್ಷಿಸುವಂತಹ ಸಾಧು ಸ್ವಭಾವದವನಿರಬೇಕು. ಆತನು ದಯೆ ಮಮತೆಗಳಿಗೆ ಆಶ್ರಯ ಸ್ಥಾನನಾಗಿರಬೇಕು. ಸತ್ಯವಾಕ್ಕುಳ್ಳವನೂ ಋಜುವರ್ತನವುಳ್ಳವನೂ ಆಗಿರಬೇಕು. ಅವನ ನಡತೆಯಲ್ಲಿ ಲೇಶಮಾತ್ರ ಕಳಂಕವಿದ್ದರೂ, ಶುಭ್ರವಾದ ಬಿಳಿಯ ಬಟ್ಟೆಯ ಮೇಲಿನ ಚಿಕ್ಕದೊಂದು ಕಪ್ಪು ಚುಕ್ಕೆಯಂತೆ ಅದು ಒಡನೆ ತಿಳಿದು ಹೋಗುವುದು. ಮುಂದೆ ಆತನ ಉದಾಹರಣೆಯಿಂದ ಉಂಟಾಗುವ ಸತ್ಫಲಕ್ಕಿಂತಲೂ ಲಕ್ಷಪಾಲು ಅಧಿಕ ದುಷ್ಫಲವೇ ಉಂಟಾಗುವುದು ತಪ್ಪದು.

ಜೋರ್ಡನ್ ನದಿಯಲ್ಲಿ ಜ್ಞಾನಸ್ನಾನದಿಂದ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಆದರೆ ಏಸುವು, ನದಿಯಿಂದ ಹೊರಕ್ಕೆ ಬಂದೊಡನೆಯೇ ಆತ್ಮಪ್ರೇರಿತನಾಗಿ ದೊಡ್ಡದೊಂದು ಕಾಡಿಗೆ ನಡೆದು ಅಲ್ಲಿ ಜ್ಞಾನಸಿದ್ಧಿಗಾಗಿ ತಪಶ್ಚರ್ಯ ಮಾಡಿದನು. ನಾಲ್ವತ್ತು ದಿನಗಳು ಅಹೋರಾತ್ರಿಯೂ ನಿದ್ರಾಹಾರಗಳನ್ನು ತೆಗೆದುಕೊಳ್ಳದೆ, ಬಹು ಕಠಿಣವಾದ ಉಪ

ವಾಸ ವ್ರತವನ್ನು ಆಚರಿಸಿದನು. ಉಪವಾಸ ವ್ರತದ ಅವಧಿಯು ಮುಗಿಯುತ್ತಿರಲು ಆಗ ಆತನಿಗೆ ಹಸಿವೆಯು ತೋರಿತು. ಆಗಲೇ ಮನೋದಾರ್ಢ್ಯ ಮತ್ತು ಆತ್ಮ ಶಕ್ತಿಗಳ ಅಗಾಧ ಪರೀಕ್ಷೆಯೂ ನಡೆಯಲಾರಂಭಿಸಿತು. ಪಂಚೇಂದ್ರಿಯಗಳೂ ಆತನನ್ನು ಹಲವು ಬಗೆಯಿಂದ ವಶಪಡಿಸಿಕೊಳ್ಳಲು ಹವಣಿಸಿದುವು. ಕಾಮನು (ಸೈತಾನನು) ಆತನ ಬುದ್ಧಿಯನ್ನು ಕೆಡಿಸಲು ಅನೇಕ ಮೋಹಕ ವಸ್ತುಗಳನ್ನು ಒದಗಿಸಿ ಆತನ ಚಿತ್ತವನ್ನು ಆತ್ಮ ತತ್ವದಿಂದ ತಿರುಗಿಸಿ, ವಿಷಯ ಮುಖವಾಗುವಂತೆ ಪ್ರಯತ್ನಿಸಿದನು. ಆದರೆ ಅವೆಲ್ಲಾ ವ್ಯರ್ಥವಾದುವು. ಸೈತಾನನು, ಆತನು ತನ್ನ ಯೋಗಸಿದ್ಧಿಗಳನ್ನು ಸಾರ್ಥತೆಗಾಗಿ ಉಪಯೋಗಿಸಲೆಂದು- ನೀನು ನಿಜವಾಗಿ ದೈವ ಪುತ್ರನೇ ಆಗಿದ್ದರೆ, ಈ ಕಲ್ಲುಗಳನ್ನು ರೊಟ್ಟಿಗಳನ್ನಾಗಿ ಮಾಡು' ಎಂದನು. ಆಗ ಏಸುವು- 'ರೊಟ್ಟಿಯೊಂದು ಮಾತ್ರ (ಎಂದರೆ ಕೇವಲ ಐಹಿಕ ವಿಚಾರವೊಂದು ಮಾತ್ರವೇ) ವೇ ಮನುಷ್ಯನನ್ನು ಬದುಕಿಸಲಾರದು. ಭಗವಂತನ ಪವಿತ್ರ ವದನದಿಂದ ಹೊರಬಿದ್ದ ಒಂದೊಂದು ಮಾತೂ ಅವನನ್ನು ಬದುಕಿಸಬೇಕಾಗಿದೆ. ಆದಕ್ಕಾಗಿ ಜೀವಿಸಿರುವ ನಾನು ನಿನಗೆ ವಶನಾಗಲಾರೆನು.' ಎಂದುಬಿಟ್ಟನು.—'ನನ್ನನ್ನು ಒಪ್ಪುವೆಯಾದರೆ ನಿನಗೆ ಅಗಣಿತ ಐಶ್ವರ್ಯಗಳನ್ನು ಪ್ರಸಾದಿಸುವೆನು' ಎಂದನು. ಏಸುವು ಅದಕ್ಕೂ ಒಳಗಾಗಲಿಲ್ಲ. ತರುವಾಯ ಆತನನ್ನು (ಮಾನಸಿಕವಾಗಿಯೇ) ಬಹು ಉನ್ನತವಾದ ಸ್ಥಳಕ್ಕೆ ಕರೆದೊಯ್ದು, ವಿಚಿತ್ರವಾದ ಹಲವು ನಗರಗಳನ್ನೂ, ಸುಂದರ ವಸ್ತು ಸಮುದಾಯವನ್ನೂ ತೋರಿಸಿ,-'ನನ್ನನ್ನು ಅನುವರ್ತಿಸಿ ನಡೆವೆಯಾದರೆ, ನೋಡು, ಇವೆಲ್ಲವುಗಳ ಆಧಿಪತ್ಯವನ್ನೂ ನಿನಗೆ ವಹಿಸುವೆನು' ಎಂದನು. ಆಗಲೂ ಜಿತೇಂದ್ರಿಯನಾದ ಆ ಮಹಾತ್ಮನು ಯಾವ ಬಗೆಯಿಂದಲೂ ಮಾರನಿಗೆ ವಶನಾಗದೆ, ಅವನನ್ನು ತಿರಸ್ಕರಿಸಿ-' ಭಗವಾನನೊಬ್ಬನೇ ಪೂಜ್ಯನು. ಸತ್ಯಸ್ವರೂಪನೂ, ಪೂಜಾಯೋಗ್ಯನೂ ಆದ ಆತನೊಬ್ಬನನ್ನು ಸೇವಿಸಬೇಕಲ್ಲದೆ, ಅನ್ಯಥಾ ಯಾರೂ ಸೇವೆಗೆ ಯೋಗ್ಯರಲ್ಲ' ಎಂದು ಹೇಳಿಬಿಟ್ಟನು. ಏಸುವಿನ ಈ ಬಗೆಯ, ಮನೋದಾರ್ಢ್ಯ ಆತ್ಮ ಶಕ್ತಿಗಳಿಂದ ಪರಾಜಿತನಾದ ಮಾರನು ಅವನನ್ನು ಬಿಟ್ಟು ಹೊರಟುಹೋದನು. ತರುವಾಯ ದೇವದೂತರು ಪ್ರತ್ಯಕ್ಷರಾಗಿ, ಆತನನ್ನು, ಹಲವು ಬಗೆಯಿಂದ ಉಪಚರಿಸಿದರು. ಹೀಗೆ

ಸೈತಾನನ ಆಕರ್ಷಣೆಯಿಂದ ಮುಕ್ತನಾದ ಏಸುವು ಪುಟವಿಕ್ಕಿದ ಚಿನ್ನದಂತೆ ಪರಿಶುದ್ಧನಾಗಿ ಅಲ್ಲಿಂದ ಹೊರಟು ಮುಂದೆ ಭೂಮಿಯ ಮೇಲಿದ್ದಷ್ಟು ದಿನವೂ ಪ್ರಚಾರ ಕಾರ್ಯವನ್ನೇ ಅವಲಂಬಿಸಿ ಸಂಚರಿಸತೊಡಗಿದನು.

ಏಸುವು ಆ ಪ್ರಾಂತದಲ್ಲೆಲ್ಲಾ ಸುತ್ತಾಡಿ, ಭಗವಂತನ ಲೋಕ ಪಿತೃತ್ವವನ್ನು ತನ್ನ ಅಕ್ಷಯವಾಣಿಯಿಂದ ವರ್ಣಪುತ್ತ ಮೇಲುಕೀಳೆಂದು ನೋಡದೆ ನೆರೆದ ಜನರಿಗೆಲ್ಲ ಬೋಧಿಸುತ್ತಿದ್ದನು. ಆತನ ಬೋಧನೆಯು, ವಿಶೇಷ ತೊಡಕಿನಿಂದ ಕೂಡಿದ ಕ್ರಿಯಾಕಲಾಪಗಳನ್ನು ಕಿತ್ತೊಗೆದು, ಭಗವಂತನ ಪವಿತ್ರನಾಮವನ್ನು ಭಕ್ತಿಯಿಂದ ಆರಾಧಿಸಬೇಕೆಂಬುದೇ ಆಗಿದ್ದುದರಿಂದ,- ಕೇವಲ ಕ್ರಿಯಾಕಲಾಪದಿಂದಲೇ ತಮ್ಮ ಜೀವನವನ್ನು ಸಂಪಾದಿಸಿಕೊಂಡು ವಿಶೇಷ ದ್ರವ್ಯವಂತರಾಗಿದ್ದ ಆ ಮತದ ಪೌರೋಹಿತವರ್ಗವು, ಆತನ ಬೋಧನೆಯನ್ನು ಕೇಳಿ ಉರಿದೆದ್ದರು. ಎರೂಸಲೇಮ್ ಪಟ್ಟಣದಲ್ಲಿದ್ದ ಎಹೂದ್ಯರ ರಾಷ್ಟ್ರೀಯ ದೇವಮಂದಿರವು ಆ ಪುರೋಹಿತ ವರ್ಗದವರ ಅಧೀನದಲ್ಲಿತ್ತು. ಆ ದೇವಾಲಯದಲ್ಲಿ ಭಕ್ತಿಪೂರ್ವಕವಾದ ದೇವತಾರಾಧನೆಯು ಮಾಯವಾಗಿ ಎತ್ತು ಕುರಿ ಪಾರಿವಾಳಗಳನ್ನು ಬಲಿಕೊಟ್ಟು, ಅವರು ಆ ಮೂಲಕವೂ ಕಾಣಿಕೆಯ ರೂಪದಿಂದಲೂ ಬರುತ್ತಿದ್ದ ದ್ರವ್ಯವನ್ನು ಸಂಗ್ರಹಿಸುತ್ತ ದೇವಾಲಯವನ್ನೊಂದು ದೊಡ್ಡ ವ್ಯಾಪಾರಸ್ಥಳವನ್ನಾಗಿ ಮಾಡಿಬಿಟ್ಟಿದ್ದರು. ಏಸುವು, ಪ್ರಾರಂಭಕ್ಕೇ ಅದನ್ನು ಶುದ್ಧಪಡಿಸಲೆಳೆಸಿ-'ಛೀ ಇಲ್ಲಿಂದ ದೂರ ಸಾಗಿರಿ. ನಮ್ಮ ತಂದೆಯ ಈ ಆಲಯವನ್ನು ಅಂಗಡಿಯನ್ನಾಗಿ ಮಾಡಬೇಡಿರಿ' ಎಂದು ಎಲ್ಲರನ್ನೂ ಅಲ್ಲಿಂದ ಹೊರಡಿಸಿಬಿಟ್ಟನು. ಲೋಭ ಪೀಡಿತರಾದ ಅವರು ಕೋಪೋದ್ದೀಪಿತರಾಗಿ, - 'ನೀನು ದೈವಕುಮಾರನಾಗಿದ್ದರೆ ಏನಾದರೊಂದು ಅದ್ಭುತವನ್ನು ಪ್ರಕಟಿಸಿ ನಿನ್ನ ಅಧಿಕಾರವನ್ನು ಸ್ಥಾಪಿಸು' ಎಂದು ಕೂಗಲಾರಂಭಿಸಿದರು. ಆಗಲಾತನು-'ಎಲೈ ಹಾಗೆ ಅದ್ಭುತಬೇಕಾಗಿದ್ದರೆ, ಈ ದೇವಾಲಯವನ್ನು ಕೆಡಹಿಸಿರಿ. ಇನ್ನು ಮೂರುದಿನಗಳಲ್ಲಿ ಇದನ್ನು ಕಟ್ಟಿ ತೋರಿಸುವೆನು' ಎಂದನು. ಆದರೆ ಅದು, ಆ ಕಲ್ಲಿನ ದೇವಾಲಯದ ವಿಷಯದಲ್ಲಿ ಹೇಳಿದ ಮಾತಲ್ಲ—ದೇವರ ಆಲಯವೆಂದು ತಿಳಿದಿದ್ದ ತನ್ನ ದೇಹದ ವಿಷಯದಲ್ಲಿ ಹೇಳಿದುದು, ಎಂಬುದು ಆತನ ಶಿಷ್ಯರಿಗೆ, ಆತನ ದೇಹಾವಸಾನದಲ್ಲಿ ತಿಳಿಯಿತು.

ಪಸ್ಕಹಬ್ಬವು ಮುಗಿದ ತರುವಾದ ಏಸುವು ಕೆಲವುದಿನಗಳು ಯುಊದಾ ಯ ಪ್ರಾಂತದಲ್ಲಿ ವಾಸವಾಗಿದ್ದನು. ಆ ಕಾಲದಲ್ಲೇ ಅತ್ತ ಸತ್ಯಪ್ರಿಯನಾ ಗಿದ್ದ ಯೋಹಾನನು, ರಾಜಾ ಹೆರೊದನ ಕೆಲವು ಅನ್ಯಾಯ ಕೃತ್ಯಗಳನ್ನು ನಿರ್ದಾಕ್ಷಿಣ್ಯದಿಂದ ಖಂಡಿಸಿದುದರಿಂದ, ರಾಜನು ಅವನನ್ನು ಸೆರೆಯಲ್ಲಿಡಿಸಿ ದ್ದನು. ಆ ಸಮಾಚಾರವೂ ಏಸುವಿಗೆ ತಿಳಿಯಿತು. ಕೆಲವು ದಿನಗಳ ತರು ವಾಯ ಏಸುವು ಅಲ್ಲಿಂದ ಹೊರಟು ಸಮೇರಿಯಾ ಪ್ರಾಂತವನ್ನು ದಾಟಿ ಗ್ಯಾಲಿಲೀಗೆ ಬಂದನು.

ಎಹೂದ್ಯರು ಆ ಸಮೇರಿಯಾ ಪ್ರಾಂತದ ನಿವಾಸಿಗಳನ್ನು ಕೇವಲ ಅಸ್ಪೃಶ್ಯರೋ ಎಂಬಂತೆ ಕಾಣುತ್ತಿದ್ದರು. ಆದರೆ ಸರ್ವ ಸಮದರ್ಶಿಯಾದ ಏಸುವು ಅಲ್ಲೇ ಇದ್ದ ಒಂದು ಪುರಾತನ ಬಾವಿಯ ಬಳಿಯಲ್ಲಿ ಕುಳಿತು, ನೀರಿಗಾ ಗಿಬಂದಿದ್ದ ಒಬ್ಬ ಸಮೇರಿಯಾ ಸ್ತ್ರೀಯನ್ನು ಕುರಿತು-'ತಾಯೇ ದೇವರು ಸತ್ಯ ಸ್ವರೂಪನು. ಯಾರು ಆ ಸತ್ಯರೂಪದಿಂದ ಆತನನ್ನು ಪೂಜಿಸುವರೋ-ಪ್ರಾ ರ್ಥಿಸುವರೋ ಅವರ ಪ್ರಾರ್ಥನೆಯನ್ನು ಆ ಲೋಕಪಿತನು ತಪ್ಪದೆ ಸ್ವೀಕರಿ ಸುವನು' ಎಂದು ಬೋಧಿಸಿದನು. ಬಹು ಪ್ರಖ್ಯಾತನಾದ ಆ ಧರ್ಮಗು ರುವು, ಕೇವಲ ಅಸ್ಪೃಶ್ಯಳಾದ ತನ್ನ ಬಳಿಗೆ ಬಂದು, ಹಾಗೆ ಬೋಧಿಸಿ ದ್ದನ್ನು ಕೇಳಿ ಆತನ ಸರಳಹೃದಯತೆಗಾಗಿ ಆಕೆಯು ಪರಮಾಶ್ಚರ್ಯ ಪಟ್ಟಳು.

ಒಂದು ವರ್ಷಕಾಲವಾಯಿತು. ಪಸ್ಕಹಬ್ಬಕ್ಕಾಗಿ ಏಸುವು ಪುನಃ ತನ್ನ ಶಿಷ್ಯರೊಂದಿಗೆ ಎರೂಸಲೇಮಿಗೆ ಬಂದನು. ಈ ಬಾರಿ ಸಬ್ಬತುದಿನದಲ್ಲಿ (ವಿಶ್ರಾಮದಿನ) ಆತನು ಒಬ್ಬ ಕಷ್ಟರೋಗಿಯನ್ನು ತನ್ನ ಯೋಗಶಕ್ತಿಯಿಂದ ಗುಣಪಡಿಸಿದನು. -'ಏಳು ನಿನ್ನ ಹಾಸಿಗೆಯನ್ನೆತ್ತಿಕೊಂಡು ನಡ' ಎಂದು ಏಸುವು ಹೇಳಿದೊಡನೆಯೇ, ಆ ರೋಗಿಯು ಸಂಪೂರ್ಣಗುಣವಾಗಿ ಎದ್ದು ನಡೆದನು. ಇದನ್ನು ನೋಡಿ, ಪೂರ್ವಾಚಾರ ಪರಾಯಣರಾದ ಎಹೂದ್ಯರು ಅತ್ಯಂತ ಕೋಪಾಕ್ರಾಂತರಾದರು. ಎಹೂದ್ಯರು, ಸಬ್ಬತುದಿನವನ್ನು ಬಹು ಪವಿತ್ರವಾದುದನ್ನಾಗಿ ತಿಳಿದು, ಆ ದಿನ ಏನು ಕೆಲಸವನ್ನೂ ಮಾಡ ಬಾರದೆಂದು ಭಾವಿಸುವರು. ಆ ದಿನ ಏಸುವು ಕೆಲಸ ಮಾಡಿದುದರಿಂದ ಅವನ ಮೇಲೆ ಬಹು ಕೋಪಗೊಂಡರು. ಆದರೆ ಏಸುವು-' ನಾನು ಮಾಡ ಲೇನನ್ನು! ನನ್ನ ಪಿತನಾದ ದೇವರು ಮಾಡಿಸಿದಂತೆ ಮಾಡಬಲ್ಲವನು ನಾನು!

ಎಂದನು. ಅದನ್ನು ಕೇಳಿಯಂತೂ ಅವರಿಗೆ ಮತ್ತೂ ಕೋಪಬಂದು,— 'ತಾನು ದೇವರಿಗೆ ಮಗನೆಂದುಕೊಂಡು, ದೇವರೊಂದಿಗೆ ತಾನು ಸರಿಸಮಾನನನ್ನಾಗಿ ಭಾವಿಸುತ್ತಾನಾದ್ದರಿಂದ ಇವನನ್ನು ಕೊಲ್ಲಬೇಕು' ಎಂದು ಅಬ್ಬರಿಸಿದರು. ಹೀಗೆ ಮೇಲೆಮೇಲೆ ಆ ಪೂರ್ವಾಚಾರಪರಾಯಣರಿಗೆ ವಿರುದ್ಧವಾದ ಕಾರ್ಯನೇ ನಡೆಯುತ್ತಿದ್ದುದರಿಂದ, ಬಹು ವಿರೋಧಭಾವದಿಂದ ಕೂಡಿದ ಅವರನ್ನು ಕುರಿತು, ಏಸುವು— "ಅಯ್ಯಾ ಇದರ ಅರ್ಥವೇನೆಂಬುದು ನಿಮಗೆ ತಿಳಿದಿಲ್ಲ. ತಿಳಿದಿದ್ದರೆ ನೀನೆಂದಿಗೂ ವಿರೋಧಿಸುತ್ತಿರಲಿಲ್ಲ. ಸಬ್ಬತುದಿನವು ಮನುಷ್ಯನಿಗಾಗಿ ಮಾಡಲ್ಪಟ್ಟಿತಲ್ಲದೆ, ಮನುಷ್ಯನು ಸಬ್ಬತುದಿನಕ್ಕೆ ದಾಸನಾಗಿರಬೇಕಾದುದಿಲ್ಲ. ಸಬ್ಬತುದಿನ ನಿಮ್ಮ ಕುರಿಯೊಂದು ಬಾವಿಗೆ ಬೀಳುತ್ತದೆಂದು ಭಾವಿಸಿರಿ. ಆಗ ಅದನ್ನು ಹೋಗಿ ಎತ್ತದೆ ಸಬ್ಬತುದಿನವೆಂಬ ಕಾರಣದ ಮೇಲೆ ಬಿಡತಕ್ಕವನು ಯಾವನಾದರೂ ನಿಮ್ಮಲ್ಲಿ ಉಂಟೋ? ಹಾಗಿರುವಲ್ಲಿ ಮನುಷ್ಯನು ಕುರಿಗಿಂತಲೂ ಶ್ರೇಷ್ಠನಲ್ಲವೆ!" ಎಂದು ನುಡಿದು ಅವರ ಬಾಯಿ ಮುಚ್ಚಿಸಿದನು. ಮುಂದೆ ಆತನು ಹೀಗೆಯೇ ಬೋಧಿಸುತ್ತ ಅನೇಕ ಪ್ರಾಂತಗಳಲ್ಲಿ ಸಂಚರಿಸುತ್ತಿರಲು, ಸಹಸ್ರಾರು ಮಂದಿ ಆತನನ್ನು ಅನುಸರಿಸಿ ಆತನ ಆತ್ಮೋತ್ತೇಜಕ ಬೋಧನೆಗಳಿಂದ ತಮ್ಮ ದೇಹ ಮತ್ತು ಮನೋರೋಗಗಳನ್ನು ಗುಣಪಡಿಸಿಕೊಂಡು ಸ್ವಸ್ಥರಾಗುತ್ತಿದ್ದರು.

ಮುಂದೆ ಏಸುವು ಗ್ಯಾಲಲೀಯಿಂದ ಹೊರಟು ಎರೂಸಲೇಮಿಗೂ ಪ್ರಯಾಣಮಾಡಿದನು. ಆತನು ಹೋದಹೋದಲ್ಲೆಲ್ಲ, ಜನಸಂಘವು ನೆರೆದು ಆತನಿಂದ ಬೋಧನೆಯನ್ನು ಕೇಳಲು ಆತುರಗೊಳ್ಳುತ್ತಿದ್ದರು, ಜನಸಂಘದ ಗಲಭೆಯಿಂದ ಚಿತ್ತವು ಚದುರಿದಾಗಲೂ, ಸ್ಫೂರ್ತಿಯು ಬೇಕೆಂದು ತೋರಿದಾಗಲೂ ಆತನು ಸಮೀಪದಲ್ಲಿದ್ದ ಒಂದು ಬೆಟ್ಟದ ಮೇಲಕ್ಕೆ ಹೋಗಿ ಅಲ್ಲಿ ಕುಳಿತು ದೇವರನ್ನು ಪ್ರಾರ್ಥಿಸಿ ಸ್ವಸ್ಥಚಿತ್ತನಾಗುತ್ತಿದ್ದನು. ಒಂದಾನೊಂದುವೇಳೆ, ಆತನು ರಾತ್ರಿಯೆಲ್ಲಾ ಧ್ಯಾನಮಗ್ನನಾಗಿದ್ದು, ಪ್ರಾತಃಕಾಲದಲ್ಲಿ ಬೆಟ್ಟದಿಂದಿಳಿದು ಕೆಳಕ್ಕೆ ಬಂದನು. ಒಡನೆ ಆತನ ಅನುಚರರು ಹಲವು ಮಂದಿ ಆತನ ಸಮೀಪದಲ್ಲಿ ಬಂದು ನೆರೆದರು. ಆಗ ಆತನು ಅವರಲ್ಲಿ ಹನ್ನೆರಡುಮಂದಿಯನ್ನು ಮಾತ್ರ ತನ್ನ ಮುಖ್ಯ ಶಿಷ್ಯರನ್ನಾಗಿ ಆರಿಸಿಕೊಂಡು ಅವರನ್ನು ಅಪೋಸ್ತಲರು *(Apostles)* ಎಂದು ಕರೆದನು.

ಆತನನ್ನು ಬೆಟ್ಟದ ಕೆಳಗೆ ತನ್ನ ಶಿಷ್ಯರೊಂದಿಗೆ ಕಂಡೊಡನೆಯೇ ಎಂದಿನಂತೆ ಅಲ್ಲೊಂದು ದೊಡ್ಡ ಸಮೂಹವೇ ನೆರೆಯಿತು. ಒಡನೆ ಆತನು, ಎಲ್ಲರೊಂದಿಗೆ ಬೆಟ್ಟದಮೇಲಕ್ಕೆ ನಡೆದು, ಅಲ್ಲಿ ಪರಿಶುದ್ಧವಾದ ಒಂದು ಸ್ಥಳದಲ್ಲಿ ನಿಂತು, ಎಲ್ಲರೂ ಶ್ರದ್ಧಾಯುಕ್ತರಾಗಿ ಕೇಳುತ್ತಿರಲು, ಸ್ಫುಟವಾಣಿಯಿಂದ ಈಕೆಳಗೆ ಹೇಳುವಂತೆ ಬೋಧಿಸಿದನು. ಈ ಬೋಧನೆಯೇ ಕ್ರೈಸ್ತರಲ್ಲಿ *(The Sermon on the Mount)* 'ಪರ್ವತಪ್ರಸಂಗ' ಎಂಬ ಹೆಸರಿನಿಂದ ಪ್ರಖ್ಯಾತವಾಗಿರುವುದು. ಇದು ಸೂತ್ರಗಳಂತಿದ್ದು ಬಹು ಅರ್ಥಗರ್ಭಿತವಾಗಿದೆ. ಅವುಗಳನ್ನು ನಮ್ಮ ವಾಚಕರ ಅವಲೋಕನಕ್ಕಾಗಿ ಸಾಮಾನ್ಯವಿವರಣೆಗಳೊಂದಿಗೆ ಇಲ್ಲಿ ಕೊಡುತ್ತೇವೆ.

*(Blessed are the poor in Spirit)* ಅಹಂಕಾರ ಮಮಕಾರಗಳನ್ನು ತ್ಯಜಿಸಿ, ದೀನಹೃದಯದಿಂದಲೂ ದಾಸಭಾವದಿಂದಲೂ ಯಾರು ಭಗವಂತನನ್ನು ಸೇವಿಸುವರೋ ಅವರು ಧನ್ಯರು. (*....... the mourners*) ಯಾರು ತಮ್ಮಲ್ಲಿ ನೆಲೆಸಿರುವ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟು ಅದರ ಪರಿಹಾರಕ್ಕಾಗಿ ಸದಾ ಚಿಂತೆ ಪಡುವರೋ ಅವರು ಧನ್ಯರು. (*........the humble)* ಯಾರು ವಿನಯಶೀಲರೂ ಸಾಧುಸ್ವಭಾವದವರೂ ಆಗಿದ್ದಾರೋ ಅವರು ಧನ್ಯರು. ( *... ...who hunger and thrist for goodness*) ಯಾರು ಸತ್ಯ ಧರ್ಮ ನೀತಿ ನ್ಯಾಯಗಳಿಗಾಗಿ ಹಸಿದು ಬಾಯಾರಿಕೊಂಡಿರುವರೋ ಅವರು ಧನ್ಯರು. ( *.......the merciful*) ದಯಾಮಮತೆಗಳನ್ನುಳ್ಳವರು ಧನ್ಯರು. ( *... .. the peace makers*) ಯಾರು ದ್ವೇಷಭಾವಕ್ಕೆ ಎಡೆಗೊಡದೆ ಸದಾ ಶಾಂತಿಸಮಾಧಾನಗಳನ್ನು ಕಾಪಾಡುವುದರಲ್ಲಿ ನಿರತರಾಗಿರುವರೋ ಅವರು ಧನ್ಯರು. (*........the pure in heart*) ಯಾರು ನಿರ್ಮಲಚಿತ್ತವುಳ್ಳವರೋ ಅವರು ಧನ್ಯರು. (*........those who have been pursecuted for the sake of goodness*) ಯಾರು ಧರ್ಮಸ್ಥಾಪನೆಗೋಸುಗ ಪ್ರಯತ್ನಿಸುತ್ತಿದ್ದಾಗ ಸ್ವಜನದ್ವೇಷ, ದೇಶಾಂತರವಾಸ, ಬಹಿಷ್ಕಾರ ಮುಂತಾದ ವಿವಿಧ ಕಷ್ಟನಷ್ಟಗಳು ಪ್ರಾಪ್ತವಾದರೂ ಹಿಂಜರಿಯದೆ, ಸತ್ಯಮಾರ್ಗವನ್ನೇ ಅವಲಂಬಿಸುವರೋ ಅವರು ಧನ್ಯರು. ಸ್ನೇಹಿತರೇ ಕೇಳಿ, ನಾನು ಹೇಳುವ ಸತ್ಯಮಾರ್ಗವನ್ನು ಅವಲಂಬಿಸುವಲ್ಲಿ

ನಿಮ್ಮನ್ನು ಹಲವರು ದ್ವೇಷಿಸಬಹುದು. ಬಹಿಷ್ಕರಿಸಬಹುದು. ಅದಕ್ಕಾಗಿ ಬೆದರದಿರಿ. ಎಲ್ಲಾ ಸತ್ಯಬೋಧಕರಿಗೂ ಬೇರೆಬೇರೆ ಕಾಲಗಳಲ್ಲಿ ಈ ಗತಿಯೇ ಪ್ರಾಪ್ತವಾಗಿರುವುದು. ನಿಮ್ಮ ಸಚ್ಚರಿತ್ರೆಯು ಇತರರಿಗೆ ದೀಪವೋ ಎಂಬಂತೆ ಮಾರ್ಗದರ್ಶಕವಾಗಿರಲಿ. ಉಪ್ಪು ಸಕಲ ವಸ್ತುಗಳಿಗಿಂತಲೂ ರುಚಿಕರವಾಗಿಯೂ, ಸರ್ವಪ್ರಿಯವಸ್ತುವಾಗಿಯೂ ಇರುವಂತೆ ನೀವಾದರೂ ಸಮಸ್ತರಿಗೂ ಬೇಕಾದವರೂ ಪ್ರೀತಿಪಾತ್ರರೂ ಆಗಿರಬೇಕು. ಬೆಟ್ಟದಮೇಲಿದ್ದ ದೀಪವು ಹೇಗೆ ಸುತ್ತಲಿರುವ ಸಮಸ್ತರಿಗೂ ಮಾರ್ಗದರ್ಶಕವಾಗಬಲ್ಲುದೋ ನಿಮ್ಮ ನಡತೆಯೂ ಹಾಗೆಯೇ ಎಲ್ಲರಿಗೂ ಮೇಲ್ಪಙ್ತಿಯಾಗಿರಲಿ. ನಾನು ಈ ಬೋಧನೆಗಳಿಂದಲೂ ನನ್ನ ಇತರ ಕೃತಿಗಳಿಂದಲೂ, ಹಿಂದಿನ ಬೋಧಕರು ಸ್ಥಾಪಿಸಿರುವ ಸಿದ್ಧಾಂತಗಳನ್ನು ನಾಶಮಾಡಲು ಬಂದಿದ್ದೇನೆಂದು ತಿಳಿಯಬೇಡಿರಿ. ನಾನು ಅವುಗಳನ್ನು ನಾಶಮಾಡಲಿಕ್ಕಿಲ್ಲ.—ಆದರೆ, ಅವುಗಳೇ ಅತಿಶಯ ರೀತಿಯಿಂದ ನಿತ್ಯ ಜೀವಿತಕ್ಕೆ ಹೇಗೆ ಅನುಕೂಲವಾದುವು ಎಂಬುದನ್ನು ಸ್ಥಾಪಿಸಲಿಕ್ಕೆ ಬಂದಿದ್ದೇನೆ" ಎಂದು ನುಡಿದು ತರುವಾಯ, ಹಿಂದಿನ ಪ್ರವಾದಿಗಳು ಬೋಧಿಸಿದ ಒಂದೊಂದು ವಿಚಾರವನ್ನೂ ತೆಗೆದುಕೊಂಡು ವಿವರಿಸಿ ಹೇಳಸಾಗಿದನು.

ಧಾರ್ಮಿಕಾಚರಣೆಯೆಂಬ ಹೆಸರಿನಿಂದ ಅನೇಕ ಕ್ರಿಯಾಕಲಾಪಗಳು ಹೇಳಲ್ಪಟ್ಟಿವೆಯಲ್ಲವೆ! ಆದರೆ ಕೇಳಿ. ಕೇವಲ ಕ್ರಿಯಾಚರಣೆ ಮಾತ್ರವೇ ನಮಗೆ ಸದ್ಗತಿಯನ್ನು ಉಂಟುಮಾಡಲಾರದು. ಅದಕ್ಕಿಂತಲೂ, ಅವುಗಳಲ್ಲಿ ಅಡಗಿರುವ ಸತ್ಯಾಂಶಕ್ಕೆ ಗಮನಕೊಟ್ಟು ಅದನ್ನು ಮನಃಪೂರ್ವಕ ಅನುಸರಿಸದಿದ್ದರೆ ಫಲವಿಲ್ಲ. ನರಹತ್ಯ ಮಾಡಬಾರದು ಎಂದು ಪ್ರವಾದಿಗಳು ಹೇಳಿರುವ ಮಾತನ್ನು ನೀವು ಕೇಳಿದ್ದೀರಿ. ಆದರೆ ಮನುಷ್ಯನನ್ನು ಸಾಕ್ಷಾತ್ತಾಗಿ ಕೊಲ್ಲುವುದು ಮಾತ್ರವೇ ನರಹತ್ಯವೆಂದು ತಿಳಿಯಬೇಡಿರಿ. ಅವನ ವಿಷಯದಲ್ಲಿ ದ್ವೇಷಮಾಡುವುದೂ, ಕಾರಣವಿಲ್ಲದೆ ಅವನ ವಿಷಯದಲ್ಲಿ ಕ್ರೋಧಗೊಳ್ಳುವುದೂ ನರಹತ್ಯಕ್ಕೆ ಸಮಾನವಾದುದೇ ಎಂದು ತಿಳಿಯಿರಿ. ನಿಮ್ಮ ಶಾಸ್ತ್ರಗ್ರಂಥಗಳಲ್ಲಿ ನಿಮ್ಮ ನೆರೆಯವನನ್ನು ಪ್ರೀತಿಸಿರಿ-ನಿಮ್ಮ ಶತ್ರುವನ್ನು ದ್ವೇಷಿಸಿರಿ ಎಂದು ಹೇಳಿದೆಯಲ್ಲವೆ! ಆದರೆ ಕೇಳಿ, ನಿಮ್ಮ ಸ್ನೇಹಿತನನ್ನು ಪ್ರೀತಿಸುವುದರಲ್ಲಿ ಅತಿಶಯವೇನಿದೆ? ನಿಮ್ಮ ಶತ್ರುವನ್ನೂ ಪ್ರೀತಿಸಬೇಕೆಂದು

ನಾನು ಹೇಳುತ್ತೇನೆ. ನಿಮ್ಮನ್ನು ಶಪಿಸುವವರನ್ನು ಆಶೀರ್ವದಿಸಿರಿ. ನಿಮ್ಮನ್ನು ದ್ವೇಷಿಸಿ ಬಹಿಷ್ಕರಿಸುವವರ ಶ್ರೇಯಸ್ಸಿಗಾಗಿ ದೇವರಲ್ಲಿ ಪ್ರಾರ್ಥಿಸಿರಿ. ನೀವು ಭಗವಂತನಲ್ಲಿ ನಂಬಿಕೆಯೂ ಭಕ್ತಿಯೂ ಉಳ್ಳವರೆಂದು ತಿಳಿದಿರುವಿರಲ್ಲವೆ? ಹಾಗಿದ್ದರೆ, ಸರ್ವಸದ್ಗುಣ ಪೂರ್ಣನಾದ ಆತನಂತೆಯೇ ನಿಮ್ಮಲ್ಲಿಯೂ ಸದ್ಗುಣಗಳು ತೋರಿಬರಲಿ-ಅವು ದುರ್ಗುಣಗಳಿಂದ ಮರೆಗೊಳ್ಳದಿರಲಿ. ಹಿಂದಿನ ನಿಮ್ಮ ಧರ್ಮಗ್ರಂಥಗಳಲ್ಲಿ 'ವ್ಯಭಿಚಾರಮಾಡಬೇಡ' ಎಂಬ ವಿಧಿಯಿರುವುದು ನಿಮಗೆ ತಿಳಿದಿದೆಯಷ್ಟೆ! ಆದರೆ ನಾನು ಹೇಳುತ್ತೇನೆ ಕೇಳಿ. ದೇಹತಃ ಪರಸ್ತ್ರೀಯೊಂದಿಗೆ ಮಾಡುವ ಸಹವಾಸವು ಮಾತ್ರವೇ ವ್ಯಭಿಚಾರವು ಎಂದು ತಿಳಿಯಬೇಡಿ. ಕಾಮ ಭಾವನೆಯಿಂದ ನೀವು ಪರಸ್ತ್ರೀಯನ್ನು ನೋಡಿದರೆ, ಆ ಒಂದು ನೋಟವೂ ವ್ಯಭಿಚಾರವೇ! ಅಷ್ಟುಮಾತ್ರಕ್ಕೇ ನೀವು ನಿಮ್ಮ ಹೃದಯದಿಂದ ವ್ಯಭಿಚಾರಮಾಡಿದಂತಾಯಿತು ಎಂಬುದನ್ನು ಮರೆಯದಿರಿ. ಅಂತಹ ಸಂದರ್ಭದಲ್ಲಿ ನಿಮ್ಮ ಕಣ್ಣು ನಿಮಗೆ ವಿರೋಧಿಯಾಗಿದ್ದರೆ ಅದನ್ನು ಕಿತ್ತು ಒಗೆಯಿರಿ. ದೇಹವನ್ನೇ ನಾಶಮಾಡಿಕೊಳ್ಳುವುದಕ್ಕಿಂತಲೂ ಅದೊಂದು ಅಂಗವನ್ನು ಕಳೆದುಕೊಳ್ಳುವುದು ದೊಡ್ಡನಷ್ಟವಲ್ಲ. ನಿಮ್ಮ ಕೈಯು ನಿಮ್ಮ ಮಾತನ್ನು ಕೇಳದಿದ್ದರೆ ಅದನ್ನು ಕತ್ತರಿಸಿ ಹಾಕಿರಿ. ಪಾಪಕಾರಿಯಾದ ಕೈಯು ಇರುವುದಕ್ಕಿಂತಲೂ, ದೇಹಕ್ಕೆ ಕೈಯಿಲ್ಲದಿರುವುದೇ ಮೇಲಲ್ಲವೇ ದೇವರ ಹೆಸರಿನಲ್ಲಿ ಆಣೆಭಾಷೆಗಳನ್ನಿಡಬಾರದೆಂದು ನೀವು ಶಾಸ್ತ್ರಗಳಲ್ಲಿ ಓದುತ್ತೀರಲ್ಲವೆ! ಕೇಳಿ. ನಿಮ್ಮ ಸುಳ್ಳು, ಕಳ್ಳತನ, ಅಲ್ಪತನಗಳಿಗೆಲ್ಲ, ಸರ್ವೋತ್ತಮನೂ ಸರ್ವಶಕ್ತನೂ, ಆದ ಭಗವಂತನು ಸಾಕ್ಷಿಯಾಗಿ ಬರದಿರಲಿ. ಅದರೊಂದಿಗೇ, ನನ್ನಾಣೆಯೆಂದು ನಿಮ್ಮ ದೇಹವನ್ನೂ ಆಣೆಗೆ ಗುರಿಪಡಿಸಬೇಡಿ. ಅದರ ವಿಷಯದಲ್ಲೂ ನಿಮಗೇನೂ ಸ್ವಾತಂತ್ರ್ಯವಿಲ್ಲ. ಒಂದು ಕಪ್ಪುಕೂದಲನ್ನು ಬೆಳ್ಳಗೂ, ಬಿಳಿಯ ಕೂದಲನ್ನು ಕಪ್ಪಗೂ ಮಾಡಲು ನಿಮಗೆ ಶಕ್ತಿಯಿಲ್ಲ.

ಮಾತಿಗೊಂದು ಮಾತು, ಶಸ್ತ್ರಕ್ಕೊಂದು ಶಸ್ತ್ರ (*An eye for an eye and a tooth for a tooth*) ಎಂಬ ಮುಯ್ಯಿಗೆ ಮುಯ್ಯಿ ಭಾವನೆಯು ನಿಮ್ಮಿಂದ ದೂರವಾಗಲಿ. ಅದರಿಂದ ದ್ವೇಷವು ನಾಶವಾಗುವುದಿಲ್ಲ. ದ್ವೇಷವು ಪ್ರೀತಿಯಿಂದಲೇ ನಾಶವಾಗುವುದೆಂಬುದನ್ನು ಮರೆಯ

ಬೇಡಿ. ದಾನಮಾಡಬೇಕೆಂದು ನಿಮ್ಮ ಧರ್ಮಗ್ರಂಥಗಳಲ್ಲಿ ಓದುತ್ತೀರ ಲ್ಲವೆ? ಆದರೆ ಕೇಳಿ. ಪರರು ನೋಡಬೇಕೆಂದೂ, ದಂಭದರ್ಪಗಳ ಪ್ರದರ್ಶ ನಕ್ಕಾಗಿಯೂ ದಾನಮಾಡಬೇಡಿರಿ. ನೀವು ಬಲಗೈಯಿಂದ ಮಾಡುವ ದಾನ ವು ನಿಮ್ಮ ಎಡಗೈಗೆ ತಿಳಿಯದಿರಲಿ. ದೈವ ಪ್ರಾರ್ಥನೆ ಮಾಡುವಾಗಲೂ ಹೀ ಗೆಯೇ! ನೀವು ಕೇವಲ ಭಕ್ತಿನಿಷ್ಠರೆಂದೂ ದೈವಭಕ್ತರೆಂದೂ ಪರರು ತಿಳಿಯ ಬೇಕೆಂಬುದಕ್ಕಾಗಿಯೂ ಅಲ್ಲ- ನಿಮ್ಮ ಹೃದಯಾಂತರ್ಯಾಮಿಯಾದ ಸರ್ವೇ ಶ್ವರನಪ್ರೀತಿಗಾಗಿ ಪ್ರಾರ್ಥಿಸಿರಿ. ನಿಮ್ಮ ಕೊಟಡಿಗಳೊಳಕ್ಕೆ ಎಂದರೆ ಏಕಾಂತ ಸ್ಥಳಕ್ಕೆ ಹೋಗಿ ಅಲ್ಲಿ ಮೌನವಾಗಿ ಪ್ರಾರ್ಥಿಸಿರಿ. ಹೆಚ್ಚು ಸ್ತೋತ್ರಪಾಠಗ ಳನ್ನು ಹೇಳಿದಮಾತ್ರಕ್ಕೆ ದೇವರು ಹೆಚ್ಚಾಗಿ ಮೆಚ್ಚಿಕೊಳ್ಳುವನು ಎಂದು ತಿಳಿಯಬೇಡಿರಿ. ನಾವು ಪ್ರಾರ್ಥಿಸುವುದಕ್ಕೆ ಮುಂಚೆಯೇ ನಮಗೆ ಏನು ಬೇ ಕೆಂಬುದು ಸರ್ವಜ್ಞನಾದ ಆತನಿಗೆ ತಿಳಿದಿರುವುದು. ನಿಮ್ಮಲ್ಲಿ ದಯಾಸ್ವ ಭಾವವೂ, ಪರರ ತಪ್ಪುಗಳನ್ನು ಮನ್ನಿಸುವ ಸ್ವಭಾವವೂ ತೋರಿಬರಲಿ. ಉಪವಾಸ ಮುಂತಾದ ವ್ರತಾಚರಣೆಗಳಲ್ಲಿದ್ದಾಗ, ಉಪವಾಸ ಪಟ್ಟವರಂತೆ ಪರರು ತಿಳಿಯಬೇಕೆಂದು ಉಸ್-ಅಸ್ ಎಂದು ನರಳಿ, ಇವನೆಂತಹ ವ್ರತನಿ ಷ್ಠರೋ ಎಂದು ತೋರ್ಪಡಿಸಿಕೊಳ್ಳಲು ಹೆಣಗಬೇಡಿರಿ. ಭೂಮಿಯಮೇಲೆ ಹಣ ಹೊನ್ನು ವೃತ್ತಿ ಕ್ಷೇತ್ರಗಳನ್ನು ಗಳಿಸಿ ರಾಸಿಹಾಕುವುದರಲ್ಲೇ ಮಗ್ನ ರಾಗಬೇಡಿ. ಇವು ಎಂದಿಗಿದ್ದರೂ ಹುಳುಹಿಡಿದು, ಕೊಳೆತು, ಅಗ್ನಿ ಜಲ ತ ಸ್ಕರಾದಿಗಳಿಂದ ನಾಶವಾಗತಕ್ಕುವಲ್ಲದೆ ಸ್ಥಿರವಾಗಿರಲಾರವು. ಪರಲೋಕ ದಲ್ಲಿ ಐಶ್ವರ್ಯಭಾಂಡಾರಗಳನ್ನು ಗಳಿಸಿ ಇಡಲು ಪ್ರಯತ್ನಿಸಿರಿ. ಏಕೆಂದರೆ ನಿಮ್ಮ ಆಸ್ತಿಪಾಸ್ತಿಗಳು ಎಲ್ಲಿರುವುವೋ ನಿಮ್ಮ ಹೃದಯವೂ-ಮನಸ್ಸೂ ಅಲ್ಲೇ ಇರುವುವು. ಆದುದರಿಂದ ಇಲ್ಲೇ ನಟ್ಟಮನಸ್ಸಿನಿಂದ ಇರುವ ನೀವು ಪರಗ ತಿಯನ್ನು ಸಾಧಿಸಲು ಹೇಗೆ ಸಾಧ್ಯವಾದೀತು? ಸ್ವಾರ್ಥಪರತೆಯು ನಿಮ್ಮಿಂದ ನಾಶವಾಗಿ ಹೋಗಲಿ. ಯಾವನೊಬ್ಬನೂ, ದ್ರವ್ಯ ದೇವರು ಈ ಎರಡು ಪದಾ ರ್ಥಗಳನ್ನೂ ಒಟ್ಟಿಗೆ ಸೇವಿಸಲಾರನೆಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿಡಿರಿ. ಈ ಎರಡರಲ್ಲಿ ಯಾವುದಾದರೊಂದನ್ನು ಅನುಸರಿಸದಿದ್ದರೆ ಮಾರ್ಗವೇ ಇಲ್ಲ. ಒಂದನ್ನು ಅನುಸರಿಸಿದಿರೆಂದರೆ ಇನ್ನೊಂದು ತಾನಾಗಿಯೇ ಬಿಟ್ಟುಹೋಗು ವುದು. ಆದುದರಿಂದ ನಶ್ವರವಾದ ದ್ರವ್ಯವನ್ನು ತ್ಯಜಿಸಿ, ಶಾಶ್ವತನಾದ ಭಗವಂತನನ್ನು ಬಯಸಿರಿ. ನಾಳೆಗೆ ನಮ್ಮ ಗತಿಯೇನೆಂದು ಸದಾ ತಿಂದಿ

ಬಟ್ಟೆಗಳ ಚಿಂತೆಯಿಂದಲೇ ಕೊರಗಬೇಡಿರಿ. ಕಾಡಿನಲ್ಲಿರುವ ಪಶು ಪಕ್ಷಿ ವೃಕ್ಷಾದಿಗಳನ್ನು ನೋಡಿ. ಅವು ತಾವೇ ಬಿತ್ತುವುದಿಲ್ಲ. ಬೆಳೆಯುವುದಿಲ್ಲ. ಕಣಜಗಳಲ್ಲಿ ತುಂಬಿಡುವುದಿಲ್ಲ. ಆದರೂ ಅವು ದಿನವೂ ಆಹಾರ ಪಾನೀಯುಗಳನ್ನು ಗ್ರಹಿಸಿ ತೃಪ್ತವಾಗುವುದಿಲ್ಲವೆ! ನಿಮ್ಮ ಬಟ್ಟೆಗೆಂದು ಯೋಚಿಸುವಿರೋ! ಅರಣ್ಯದ (ಲಿಲ್ಲೀ) ಹೂಗಳನ್ನು ನೋಡಿ. ಅವುಗಳಿಗೆ ಎಂತೆಂತಹ ವಿಚಿತ್ರ ವರ್ಣಗಳ ವಸ್ತ್ರವನ್ನು ಭಗವಂತನು ಕರುಣಿಸಿರುವನೆಂಬುದನ್ನು ಗಮನಿಸಿರಿ. ದಯಾಮಯನಾದ ಆತನು ನಿಮಗೆ ಕೊಡಲಾರನೆ? ಆದರೆ, ಆ ಪರಮಪಿತನನ್ನು ಮಾತ್ರ ನಂಬದಿರಬೇಡಿ. ಮಿತ್ರರೇ, ಮನುಷ್ಯನು ಎಷ್ಟು ತುಚ್ಛ ಬುದ್ಧಿಯುವನು. ಅಲ್ಪಮನಸ್ಸಿನವನು. ಎಷ್ಟು ಅಲ್ಪರೀತಿಯಿಂದಲೂ ಅವನು ಆ ಪರಮಪಿತನನ್ನು ನಂಬುವುದಿಲ್ಲವಲ್ಲ! ಅವನಿಗೆ ಆ ಪರಮಾತ್ಮನ ದಯೆಯು ಹೇಗುಂಟಾದೀತು? ಏನು ತಿಂದೇನು, ಏನು ಉಂಡೇನು, ಏನು ಉಟ್ಟೇನು, ಏನು ಗಳಿಸೇನು ಎಂದು ಅಹರ್ನಿಶಿ ಎಷ್ಟು ಕಾತರನಾಗಿ ಸ್ವಾರ್ಥಸಾಧನೆಯಲ್ಲಿ ಮುಳುಗಿರುವನಲ್ಲಾ! ಮಿತ್ರರೇ! ನಮಗೇನು ಬೇಕೆಂಬುದು ಸರ್ವಜ್ಞನಾದ ಭಗವಂತನಿಗೆ ತಿಳಿಯದೆ? ನಾಳೆಯನ್ನು ಕುರಿತು ಇಂದು ಮರುಗಬೇಡಿ, ಚಿಂತಿಸಬೇಡಿ, ಕೊರಗಬೇಡಿ. ಇಂದಿನ ಕಷ್ಟವೇ ಇಂದಿಗೆ ಸಾಕಾಗಿದೆ. ನಿಶ್ಚಿಂತರಾಗಿರಿ. ತೃಪ್ತರಾಗಿರಿ. ಎಲ್ಲವೂ ಸರಿಹೋಗುವುದು.

ಪರರಲ್ಲಿ ದೋಷವನ್ನು ಕಂಡುಹಿಡಿಯುವುದೇ ನಿಮ್ಮ ಕೆಲಸವಾಗಿರದಿರಲಿ! ನಿಮ್ಮ ಕಣ್ಣಿನಲ್ಲಿ ಒಂದು ಹಲಗೆಯೇ ಬಿದ್ದಿರುವಾಗ, ಪರರ ಕಣ್ಣಿನಲ್ಲಿ ಬಿದ್ದ ಧೂಳನ್ನು ಕುರಿತು ಆಕ್ಷೇಪಿಸಲು ನಿಮಗೆ ಏನು ಅಧಿಕಾರವಿದೆ? ಅಪಾತ್ರರಿಗೆ ಎಂದೂ ಉತ್ತಮ ವಸ್ತುಗಳನ್ನು ಕೊಡಬೇಡಿ. ಕೋಳಿಗೆ ಬೇಕಾದುವೆರಡು ಜೋಳದ ಕಾಳು. ಅದರ ಎದುರಿಗೆ ಅಮೌಲ್ಯವಾದ ಆಣಿಮುತ್ತುಗಳನ್ನು ಸುರಿದರೆ ಪ್ರಯೋಜನವೇನು? ಹಾಗೆಯೇ ಕ್ಷುದ್ರರೆದುರಿಗೆ ಉನ್ನತವಿಚಾರಗಳನ್ನು ಹೇಳಬೇಡಿ. ಅವುಗಳ ಬೆಲೆಯು ಅವರಿಗೆ ತಿಳಿಯಲಾರದು. ನಿಮಗೆ ಬೇಕಾದುದನ್ನು ಕೇಳಿಕೊಂಡರೆ ಕೊಡಲು ಪರಮೋದಾರಚರಿತನಾದ ಸರ್ವೇಶ್ವರನು ಸದಾ ಸಿದ್ಧನಾಗಿರುವನು. ಕೂಗಿದವರಿಗೆ ಆತನು ಪ್ರತಿಧ್ವನಿಸಿ ಕೊಡುವನು. ಪರರು ನಿಮ್ಮ ವಿಷಯದಲ್ಲಿ ಹೇಗೆ ನಡೆಯಬೇಕೆಂದು ಅಪೇಕ್ಷಿಸುವಿರೋ ನೀವಾದರೂ ಪರರ ವಿಷಯದಲ್ಲಿ ಹಾಗೆಯೇ ನಡೆಯಿರಿ. ಈ

ಸುವರ್ಣಸೂತ್ರವು ಸರ್ವದಾ ಜಯಶಾಲಿಯಾಗುವುದೆಂಬುದಕ್ಕೆ ಸಂಶಯವೇ ಇಲ್ಲ. ನರಕದ್ವಾರವು ಬಹು ವಿಶಾಲವಾಗಿದೆ. ಲೋಕದಲ್ಲಿ ಆ ಮಾರ್ಗದಿಂದ ನುಗ್ಗುವವರೇ ಅಸಂಖ್ಯ ಜನರು. ಮೋಕ್ಷಮಾರ್ಗವು ಬಹು ಕಿರಿದಾದುದು. ಆ ಮೂಲಕ ಬಹು ಸ್ವಲ್ಪ ಜನರು ಮಾತ್ರ ಹೋಗುವರಿರುವರು. ಧರ್ಮಬೋಧಕರೆಂಬ ಹೆಸರಿನಿಂದ ಬರುವ ಸ್ವಾರ್ಥಸಾಧಕರಾದ ಕ್ಷುದ್ರಜನರನ್ನು ಎಂದಿಗೂ ನಂಬಬೇಡಿ. ಹುಳಿತುಹೋದ ವೃಕ್ಷದಿಂದ ಹೇಗೆ ಉತ್ತಮವಾದ ಫಲವು ದೊರೆಯಲಾರದೋ ಹಾಗೆಯೇ ಸ್ವಾರ್ಥಸಾಧಕರು ಎಂದೂ ಪರರಿಗೆ ಮೇಲನ್ನುಂಟುಮಾಡಲಾರರು. ಇನ್ನೊಂದು ವಿಚಾರವನ್ನು ಹೇಳುವೆನು ಕೇಳಿ. ನೀವು ಕೇವಲ ನನ್ನ ನಾಮಸ್ಮರಣೆಯನ್ನು ಮಾಡುತ್ತಾ ತಿರುಗುತ್ತಿದ್ದ ಮಾತ್ರಕ್ಕೆ ನನಗೆ ತೃಪ್ತಿಯುಂಟಾಗದು. ಮಾತ್ರವಲ್ಲ, ನಿಮಗೆ ಪರದಲ್ಲಿ ಉತ್ತಮಗತಿಯೂ ದೊರೆಯಲಾರದು. ಲೋಕಪಿತನ ಆಜ್ಞೆಗಳನ್ನು ತಿಳಿದು ಅವುಗಳನ್ನನುಸರಿಸಿ ನಡೆದವರಿಗೆ ಮಾತ್ರವೇ ರಕ್ಷಣೆಯುಂಟೆಂಬುದನ್ನು ಮರೆಯಬೇಡಿರಿ. ಮತ್ತೂ ಕೇಳಿ, ನನ್ನ ಈ ಮಾತುಗಳನ್ನು ಕೇಳಿ ಯಾವನು ಅವುಗಳಂತೆ ಆಚರಿಸುವವನಿರುವನೋ ಅವನು ಮಾತ್ರವೇ ದೃಢವಾದ ಶಿಲೆಯಮೇಲೆ ಮನೆಕಟ್ಟಿದ ವಿವೇಕಿಯಂತೆ ಚಿತ್ತಶಾಂತಿಯನ್ನು ಹೊಂದುವನು. ಆದರೆ ಯಾವನು ಉದಾಶೀನತೆಯಿಂದ ಅವುಗಳಂತೆ ಆಚರಿಸದೆ ಉಪೇಕ್ಷಿಸುವನೋ ಅವನು ಮರಳುರಾಸಿಯಮೇಲೆ ಮನೆಕಟ್ಟಿದವನಂತೆ ಅಪಾಯಕ್ಕೆ ಒಳಗಾಗುವನು. ಕಲ್ಲಿನಮೇಲೆ ಕಟ್ಟಲ್ಪಟ್ಟ ಮನೆಯು ಎಂತಹ ಮಳೆಗಾಳಿಗಳಿಗೂ ಉರುಳದೆ ದೃಢವಾಗಿರುವುದು. ಆದರೆ ಮರಳಮೇಲೆ ಕಟ್ಟಲ್ಪಟ್ಟ ಮನೆಯು ಸ್ವಲ್ಪ ಮಳೆಗೂ ಉರುಳಿಬೀಳದೆ ಉಳಿಯಲಾರದು. ಬೀಳುವುದಾದರೋ ಸಾಮಾನ್ಯವಾಗಿಯಲ್ಲ. ಪ್ರಳಯ ರಭಸದಿಂದ ಮೂಲಸಹಿತವಾಗಿ ಬಿದ್ದು ನಾಶವಾಗುವುದು ತಪ್ಪದು.'

ಪ್ರಿಯವಾಚಕಮಹಾಶಯರೇ! ಈ ಮೇಲ್ಕಂಡ ಪ್ರಸಂಗದಲ್ಲಿ, ಹಿಂದೂಧರ್ಮಾನುಯಾಯಿಗಳಾದ ನಮಗೆ ವಿರುದ್ಧವಾದುವುಗಳೆಂಬಂತಹ ಒಂದೇ ಒಂದು ನುಡಿಯಾದರೂ ಇದೆಯೇ! ಈ ಪ್ರಸಂಗವೇ ಕ್ರೈಸ್ತ ಧರ್ಮಿಯರಿಗೆ ಬಹು ಪೂಜ್ಯವಾದ ಧರ್ಮವಿಧಿಯೆನ್ನಿಸಿ ಪ್ರಸಿದ್ಧವಾಗಿದೆ. ನಮ್ಮಲ್ಲಿಯು ಅನೇಕ ಸಾಧುಸಂತರೂ, ಶೈವ ವೈಷ್ಣವ ಭಕ್ತಶಿರೋಮಣಿಗಳೂ,

ಈ ಪ್ರಸಂಗದಲ್ಲಿ ಕಂಡುಬರುವ ಅನೇಕ ಧರ್ಮನೀತಿಗಳನ್ನು ಹೇಳಿಸ್ದಾರೆ ಯಲ್ಲವೆ! ಶ್ರೀ ಪುರಂದರ ಕನಕ ಕಬೀರಾದಿ ದಾಸಶ್ರೇಷ್ಠರು ತಮ್ಮ ಮುಕ್ತ ವಾಣಿಯಿಂದ ಹಾಡಿದ್ದಾರೆಯಲ್ಲವೆ? ಇದರಿಂದಲೇ, ಧರ್ಮ ನೀತಿನ್ಯಾಯ ಗಳು ಸಕಲ ಮತಗಳಿಗೂ ಅಡಿಗಲ್ಲುಗಳಂತಿವೆಯೆಂಬುದು ಸಿದ್ಧವಾಗುತ್ತದೆ! ವಿಷಯದಲ್ಲಿ ಸಂದೇಹವೇನು !



**ಅಧ್ಯಾಯ ೫.** **'ಮರಣ-ಪುನರುತ್ಥಾನ'**

ಏಸುವು ಬೆಟ್ಟದಿಂದಿಳಿದು ಬಂದ ತರುವಾಯ, ಅನೇಕ ಕುಷ್ಟರೋಗಿ ಗಳನ್ನೂ, ಪಾರ್ಶ್ವರೋಗಪೀಡಿತರನ್ನೂ, ಜ್ವರವ್ಯಾಧಿಪೀಡಿತರನ್ನೂ, ಕೇವಲ ತನ್ನನೋಟ, ಆಜ್ಞೆ ಮತ್ತು ಸ್ಪರ್ಶ ಮುಂತಾದುವುಗಳಿಂದಲೇ ಗುಣಪಡಿಸಿದ ನೆಂದು ಕ್ರೈಸ್ತಧರ್ಮಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಮಾತ್ರವಲ್ಲ - ಆತನು ಅನೇಕ ಅದ್ಭುತಕಾರ್ಯಗಳನ್ನು ಮಾಡಿದನೆಂಬುದಕ್ಕೂ ಉದಾಹರಣೆಗಳಿವೆ. ಒಂದಾನೊಂದುವೇಳೆ, ತನ್ನ ಅನುಯಾಯಿಗಳೊಂದಿಗೆ ಒಂದು ದೋಣಿಯಲ್ಲಿ ಕುಳಿತು, ಆತನು ಪ್ರಯಾಣಮಾಡುತ್ತಿದ್ದಾಗ್ಗೆ, ಬಿರುಗಾಳಿಯೆದ್ದು, ದೋಣಿ ಯು ಮುಳುಗಿ ಎಲ್ಲರೂ ಸಾಯುವ ಸ್ಥಿತಿಯು ಪ್ರಾಪ್ತವಾಯಿತು. ಆಗ ಎಲ್ಲರೂ ಗಾಬರಿಪಟ್ಟು ಆತನನ್ನು ಮರೆಹೊಗಲು ಆತನು - 'ಅಯ್ಯಾ ಏಕೆ ಹೆದರಿರುವಿರಿ. ಅಯ್ಯೋ! ನೀವು ಎಷ್ಟು ರೀತಿಯಿಂದಲೂ ದೇವರನ್ನು ನಂಬ ಲಾರಿರಲ್ಲಾ. ಆತನನ್ನು ನಂಬದಿರುವವರಿಗೆ ರಕ್ಷಣೆಯು ಹೇಗೆ ಸಿಕ್ಕೀತು? ಆತನ ಆಜ್ಞೆಯಿಲ್ಲದೆ ಯಾವ ಕಾರ್ಯವೂ ನಡೆಯಲಾರದೆಂದು ತಿಳಿದು ನಂಬಿ ಧೈರ್ಯವಾಗಿರಿ' ಎಂದು ನುಡಿದು, ತನ್ನ ಆಜ್ಞೆಯಿಂದ ಆ ಮಹತ್ತಾದ ಬಿರು ಗಾಳಿಯನ್ನು ನಿಲ್ಲಿಸಿ, ಎಲ್ಲರನ್ನೂ ರಕ್ಷಿಸಿದನು. ಆತನು ಪಂಚಭೂತಗಳ ಮೇಲೆಯೂ ನಡೆಸುವ ಈ ಅಧಿಕಾರವನ್ನು ನೋಡಿ ಎಲ್ಲರೂ ಪರಮಾಶ್ಚರ್ಯ ಭರಿತರಾದರು.

'ನ್ಯೂ ಟೆಸ್ಟಮೆಂಟೆ'ಂಬ ಕ್ರೈಸ್ತವೇದಗ್ರಂಥವು, ಆತನು ಹೀಗೆ ಗುಣ ಪಡಿಸಿದ ಹಲವು ರೋಗಿಗಳ ವೃತ್ತಾಂತವನ್ನು ವರ್ಣಿಸುತ್ತದೆ. ಹಾಗೆ ರೋ ಗವನ್ನು ಗುಣಪಡಿಸಿದಾಗಲೆಲ್ಲ, ಆತನು ಅವುಗಳೆಲ್ಲವೂ ತನ್ನ ಸಾಮರ್ಥ್ಯದಿಂದ ನಡೆದುವೆಂಬ ಸ್ವಾರ್ಥತೆ ಅಹಂಭಾವಗಳು ಲೇಶಮಾತ್ರವೂ ಇಲ್ಲದೆ, ಕೇವಲ

ಆಯಾ ರೋಗಿಯ ಭಕ್ತಿ ಶ್ರದ್ಧೆ ನಂಬಿಕೆಗಳೇ ಕಾರಣವೆಂದು ಹೇಳಿ, ಭಕ್ತಿಯುಳ್ಳವರು ನಿಶ್ಚಯವಾಗಿಯೂ ರಕ್ಷಿಸಲ್ಪಡುವರೆಂದು ಮೇಲೆಮೇಲೆ ನುಡಿಯುತ್ತಿದ್ದನು. ಆತನು ಪಾಪಿಗಳನ್ನು ರಕ್ಷಿಸಿದ ವಿಚಾರದಲ್ಲಿ ನಡೆದ ಹಲವು ವಿಚಿತ್ರ ಕಥೆಗಳು ಹೇಳಲ್ಪಟ್ಟಿವೆ ಅವುಗಳಲ್ಲೆಲ್ಲಾ ಆತನ ಅತಿಶಯವಾದ ದೈವತತ್ಪರತೆಯೂ, ನಿಸ್ವಾರ್ಥತೆ, ನಿರಭಿಮಾನಗಳೂ ಚೆನ್ನಾಗಿ ವ್ಯಕ್ತಪಡುತ್ತಿವೆ.

ಒಂದಾನೊಂದು ವೇಳೆ ಆತನು ಸೈಮೋನನೆಂಬೊಬ್ಬ ಭಕ್ತನ ಮನೆಗೆ ಊಟಕ್ಕೆ ಆಹ್ವಾನಿತನಾಗಿ ಹೋಗಿದ್ದನು. ಅಲ್ಲಿ ಆತನು ಕುಳಿತಿದ್ದಾಗ, ಆ ಊರಿನಲ್ಲೇ ಮಹಾಪಾಪಿಯೆಂದು ಪ್ರಸಿದ್ಧಳಾಗಿದ್ದ ವೇಶ್ಯೆಯೊಬ್ಬಳು ಬಂದು ಹಿಂದುಗಡೆಯಿಂದ ಆತನ ವಸ್ತ್ರವನ್ನು ಮುಟ್ಟಿ, ಪಾದಗಳಿಗೆ ಅಡ್ಡಬಿದ್ದು ತನ್ನ ಅಗಾಧಪಾಪಗಳಿಗಾಗಿ ಪಶ್ಚಾತ್ತಾಪವುಂಟಾಗಿ, ಕಣ್ಣುಗಳಿಂದ ನೀರು ಧಾರೆಧಾರೆಯಾಗಿ ಸುರಿಯುತ್ತಿರಲು.-'ಪ್ರಭೋ ಮಹಾಪಾಪಿಯಾದ ನನ್ನನ್ನು ಕರುಣಿಸು-ಉದ್ಧರಿಸು' ಎಂದು ಬೇಡಿಕೊಂಡಳು. ಆಕೆಯ ಪಶ್ಚಾತ್ತಾಪವನ್ನು ಕಂಡು, ದಯಾಳುವಾದ ಏಸುವು, ಎದೆಕರಗಿ-'ತಾಯೇ, ಬೆದರದಿರು ನಿನಗೆ ರಕ್ಷಣೆಯುಂಟು. ನಿನ್ನ ಪಾಪಗಳು ಮನ್ನಿಸಲ್ಪಟ್ಟಿವೆ' ಎಂದನು. ಅದನ್ನು ಕೇಳಿದ ಸೈಮೋನನು—ಅಗಾಧ ಪಾಪಮಾಡಿದ ಆಕೆಯನ್ನು ಮನ್ನಿಸಿದ ಕಾರಣವೇನೆಂದು ಕೇಳಲು, ಏಸುವು-'ಅಯ್ಯಾ, ಆಕೆಯ ಪಶ್ಚಾತ್ತಾಪವನ್ನು ನೋಡು. ಕಣ್ಣುಗಳಿಂದ ಹರಿಯುತ್ತಿರುವ ಜಲರಾಶಿಯನ್ನು ನೋಡು. ಇಂತಹ ಪಶ್ಚಾತ್ತಾಪಪಡೆದುರಿಗೆ ಯಾವ ಪಾಪವು ನಿಂತೀತು. ನೋಡು. ಒಬ್ಬ ಮನುಷ್ಯನಿಗೆ ಇಬ್ಬರು ಸಾಲ ಕೊಡುವವರಿದ್ದರು. ಅವರಲ್ಲೊಬ್ಬನು ಐನೂರು ರೂಪಾಯಿಗಳನ್ನೂ, ಮತ್ತೊಬ್ಬನು ಐವತ್ತು ರೂಪಾಯಿಗಳನ್ನೂ ಕೊಡಬೇಕಾಗಿದ್ದಿತು. ಆ ಇಬ್ಬರಿಗೂ ಸಾಲ ತೀರಿಸಲು ಅನುಕೂಲವಿಲ್ಲವೆಂದು ತಿಳಿದು, ಆತನು ಇಬ್ಬರನ್ನೂ ಮನ್ನಿಸಿ ಋಣಮುಕ್ತರನ್ನಾಗಿ ಮಾಡಿಬಿಟ್ಟನು. ಆಗ ಆ ಇಬ್ಬರಲ್ಲಿ ಯಾರಿಗೆ ಹೆಚ್ಚು ಸಂತೋಷವುಂಟಾಗುವುದೆಂದು ಯೋಚಿಸು. ಹಾಗೆಯೇ, ಮಹಾಪಾಪಿಯಾದ ಆಕೆಗೆ ತನ್ನ ಪಾಪದ ರಕ್ಷಣೆಯುಂಟಾದುದರಲ್ಲಿ, ನಿನ್ನ ಪಾಪಕ್ಕಾಗಿ ನಿನಗೆ ರಕ್ಷಣೆ ಸಿಕ್ಕಿದರೆ ಉಂಟಾಗುವುದಕ್ಕಿಂತಲೂ ಹೆಚ್ಚು ಸಂತೋಷವುಂಟಾಗುತ್ತದ

ಲ್ಲವೆ! ಜನರಿಗೆ ದಯೆ ಮಮತೆಗಳನ್ನು ತೋರಿಸಿ ಅವರನ್ನು ಸಂತೋಷಪಡಿಸುವುದೇ ನನ್ನ ಮುಖ್ಯೋದ್ದೇಶವು-ಯಾರಿಗೆ ಅಧಿಕ ಸಂತೋಷವಾದರೆ ತ ಮೂಲಕ ಹೆಚ್ಚಾಗಿ ದೇವರ ಸೇವೆಯು ನಡೆಯಿತೆಂಬುದು ನನ್ನ ಭಾವನೆ' ಎಂದು ನುಡಿದನು.

ಆತನು ಯಾವಾಗಲೂ ಸಂದೇಹ ಮನಸ್ಕತೆಯಿಂದ ಮಾತನಾಡಿದುದೇ ಇಲ್ಲ. ಪರಮ ಪಿತನಲ್ಲಿ ಆತನಿಗಿದ್ದ ಅನಿರ್ವಾಚ್ಯ ಭಕ್ತಿಯ ಫಲವಾಗಿ, ಸಂಶಯ ವಿಚ್ಛೇದನವೂ ನಿರ್ಭೀತಿಯೂ ಉಂಟಾಗಿದ್ದುವು. ಆತನ ಬಾಯಿಂದ ಬರುವ ಪರೋಪಕಾರ ಸಾಧಕಗಳಾದ ಮಾತುಗಳೆಲ್ಲವೂ ಸ್ಪಷ್ಟವಾಗಿಯೂ ಅಧಿಕಾರ ಯುಕ್ತ ವಾಣಿಯಿಂದಲೂ ಬರುತ್ತಿದ್ದುವು.--' ಮಹಾ ಪಾಪಭಾರದಿಂದ ನರಳುತ್ತಿರುವವರೆಲ್ಲರೂ ನನ್ನ ಬಳಿಗೆ ಬನ್ನಿ. ನನ್ನ ನೊಗವನ್ನು ಹೊತ್ತು ಕೊಳ್ಳಿ. ಅದು ನಿಮ್ಮ ಹೃದಯಭಾರವನ್ನು ನಿವಾರಿಸಿ, ನಿಮ್ಮ ಆತ್ಮಗಳನ್ನು ಪರಿಶುದ್ಧಿಗೊಳಿಸುವುದು ' ಎಂದು ಆತನು ಆಹ್ವಾನಕೊಟ್ಟಿದ್ದಾನೆ.

ಭಕ್ತಿ ಪಾರವಶ್ಯತೆಯಿಂದ ಆತನು ಹೇಗೆ ವಿಶ್ವಕುಟುಂಬಿಯೋ ಎಂಬಂತಹ ಭಾವನೆಯನ್ನುಂಟಾಗಿದ್ದನೆಂಬುದು ವ್ಯಕ್ತವಾದ ಒಂದು ಸಂದರ್ಭವಿದೆ. ಸಂಚಾರದಲ್ಲಿದ್ದಾಗ ಒಂದೆಡೆಗೆ ಆತನ ತಾಯಿಯೂ, ತಮ್ಮಂದಿರೂ ಆತನನ್ನು ನೋಡುವುದಕ್ಕಾಗಿ ಬಂದಿದ್ದಾರೆಂಬ ವರ್ತಮಾನಬಂತು ಆಗಲಾತನು, ತನ್ನ ಬಳಿ ಇದ್ದವರನ್ನು ಕುರಿತು— ''ಅವರು ಮಾತ್ರ ನನ್ನ ತಾಯಿ ಮತ್ತು ತಂಗಿಯರೆಂದಲ್ಲ. ಯಾರು ನನ್ನ ಪರಮಪಿತನಾದ ಭಗವಾನನಿಗೆ ಪ್ರಿಯಕರಗಳಾದ ಕೆಲಸಮಾಡುವರೋ ಅವರೆಲ್ಲರೂ ನನ್ನ ಬಂಧುಗಳೇ- ನನ್ನ ಕುಟುಂಬಕ್ಕೆ ಸೇರಿದವರೇ'' ಎಂದನು.

ಬೋಧನೆಯಲ್ಲಿ ಆತನು ಉಪಯೋಗಿಸಿರುವ ಕೆಲಕೆಲವು ಮಾತುಗಳು ಕೇವಲ ಸಾಮಾನ್ಯವಾಗಿರುವಂತೆ ಕಾಣುತ್ತಿದರೂ, ಬಹು ಗೂಢಾರ್ಥಗಳನ್ನೊಳಗೊಂಡಿರುವುವು. ತಮ್ಮ ಊರಿನಲ್ಲೇ ಇದ್ದ ಜೋಸೇಫ್ ಮೇರಿಯರ ಮಗನಾಗಿ ಹುಟ್ಟಿದ ಆತನನ್ನು ಚಿಕ್ಕಂದಿನಿಂದಲೂ ಬಲ್ಲವರಾದ ಅನೇಕರು, ಆತನು ದೈವ ಕುಮಾರನೆಂಬ ವಾರ್ತೆಯನ್ನೂ, ಆತನು ಸ್ವರ್ಗ ಸಾಮ್ರಾಜ್ಯವನ್ನು ಸ್ಥಾಪಿಸುವನೆಂಬುದರ ಅರ್ಥವನ್ನೂ ನಂಬದೆ, ಹಲವು ಬಗೆಯಿಂದ ಆಕ್ಷೇಪಿಸಲಾರಂಭಿಸಿದರು. ಆಗಲಾತನು 'ಅಯ್ಯಾ ಏಕೆ ಅಪ

ನಂಬಿಕೆ ಪಡುವಿರಿ. ನನ್ನ ಈ ದೇಹವನ್ನು ಭಗವಂತನು ಲೋಕಸೇವೆಗಾಗಿಯೇ ಸೃಷ್ಟಿಸಿರುವನೆಂದು ತಿಳಿದಿದ್ದೇನೆ. ಭಗವಂತನಲ್ಲಿ ನಂಬಿಕೆ ವಿಶ್ವಾಸಗಳನ್ನುಳ್ಳ ಯಾವನಾದರೂ ಈ ನನ್ನ ದೇಹವನ್ನು ಬೇಕಾದಂತೆ ಉಪಯೋಗಿಸಿಕೊಂಡು ರಕ್ಷಣೆಯನ್ನು ಪಡೆಯಬಹುದು. ಅಂತಹ ಸೇವೆಗಾಗಿ, ನನ್ನೀ ದೇಹವನ್ನೇ ಅರ್ಪಿಸಲು ಸರ್ವದಾ ಸಿದ್ಧನಾಗಿರುವೆನು' ಎಂಬರ್ಥವುಳ್ಳ — 'ನಾನು ಸ್ವರ್ಗದಿಂದ ಕಳುಹಿಸಲ್ಪಟ್ಟ ಆಹಾರವಾಗಿರುವೆನು. ಹಸಿದವನು ಯಾವನಾದರೂ ನನ್ನ ಬಳಿಗೆ ಬರಲಿ. ಅವನಿಗೆ ನಾನು ಕೊಡುವ ಆಹಾರವು ನನ್ನ ದೇಹದ ಮಾಂಸವೇ! ನನ್ನ ದೇಹದ ಮಾಂಸವನ್ನು ಲೋಕದ ಜೀವನಕ್ಕಾಗಿ ನಾನು ಕೊಡುತ್ತೇನೆ" ಎಂದು ನುಡಿದನು. ಆದರೆ ಆ ಮಾತಿನ ಅರ್ಥವನ್ನು ತಿಳಿಯದೆ ಎಹೂದ್ಯರು, ಈತನು ತಿನ್ನುವುದಕ್ಕೆ ತನ್ನ ದೇಹದ ಮಾಂಸವನ್ನು ಕೊಡುತ್ತೇನೆಂಬುದರ ಅರ್ಥವೇನು? ಇಂತಹ ಧರ್ಮಶುಂಠನಿಂದ ನಮಗೆ ರೋಮನರ ಪರಾಧೀನತೆಯಿಂದ ಬಿಡುಗಡೆಯು ಲಭಿಸಲಾರದು. ಎಂದುಕೊಂಡು ಹಲವರು ಆತನನ್ನು ಬಿಟ್ಟು ಹೊರಟುಹೋದರು. ಇತರ ಅನೇಕರು ಈ ಬಗೆಯ ಅರ್ಥವಿಲ್ಲದ ಬೋಧನೆ ಮಾಡುತ್ತಾನೆಂದು ಆತನನ್ನು ಕೊಲ್ಲಲೂ ಯತ್ನಿಸಿದರು. ಆದುದರಿಂದ ಆತನು ಇತರ ಎಲ್ಲಾ ಸ್ಥಳಗಳನ್ನೂ ಬಿಟ್ಟು ಮುಂದೆ ಗ್ಯಾಲಿಲೀಯಲ್ಲೇ ವಾಸಮಾಡಿದನು.

ಪೂರ್ವಾಚಾರ ಪರಾಯಣರೂ ಮತಭ್ರಾಂತರೂ ಆದ ಎಹೂದ್ಯರಿಂದ ಮುಂದೆ ಕೆಲವು ದಿನಗಳಲ್ಲೇ ತನಗೆ ಪ್ರಾಪ್ತವಾಗಲಿದ್ದ ಮರಣವಿಚಾರವನ್ನು ಆತನು ತನ್ನ ಭವಿಷ್ಯಜ್ಞಾನದಿಂದ ತಿಳಿದಿದ್ದನೆಂದು ತೋರುತ್ತದೆ. ಆ ವಿಚಾರವನ್ನು ತನ್ನ ಆಪ್ತಶಿಷ್ಯರೆದುರಿಗೆ ಮುಂಚಿತವಾಗಿಯೇ ತಿಳಿಸಿದ್ದುದಲ್ಲದೆ,— 'ನನ್ನ ತರುವಾಯ ಯಾರಾದರೂ ನನ್ನನ್ನು ಅನುಸರಿಸಿ ಬಂದರಾದರೆ ಅವನು ನನ್ನಂತೆಯೇ ತನ್ನ ಶಿಲುಬೆ (*Cross*) ಯನ್ನು ಎತ್ತಿಕೊಂಡೇ ಬರಲಿ - ಎಂದರೆ ಸ್ವಾರ್ಥತ್ಯಾಗವನ್ನೇ ತನ್ನ ಮುಖ್ಯ ಗುರಿಯನ್ನಾಗಿ ಇಟ್ಟುಕೊಂಡಿರಲಿ; ಏಕೆಂದರೆ, ಯಾರಿಗೆ ತಮ್ಮ ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂಬ ಆತುರತೆ ಇರುವುದೋ ಅವನು ದೇಹ ಬಿಡದಿದ್ದರೆ ಮಾರ್ಗವೇ ಇಲ್ಲ. ಆದರೆ ಯಾರು ನನಗೋಸ್ಕರ ಜೀವಬಿಡಲು ಸಿದ್ಧರಾಗಿದ್ದಾರೋ ಅವರಿಗೆ ಆತ್ಮಪ್ರಾಪ್ತಿಯು ಆಗದಿರಲಾರದು" ಎಂದು ನುಡಿದನು.

ಆತನೊಂದು ವೇಳೆ ತನ್ನ ಎಪ್ಪತ್ತು ಮಂದಿ ಶಿಷ್ಯರನ್ನು, ತನ್ನ ಬೋಧನೆಗಳನ್ನು ಇತರ ಜನಾಂಗಗಳವರಿಗೆ ತಿಳಿಸಿರೆಂದು ಆಜ್ಞಾಪಿಸಿ ಕಳುಹಿಸಿದನು. ತರುವಾಯ ಪುನಃ ಎರೂಸಲೇಮಿಗೆ ಬಂದು ನಿರ್ಭಯವಾಗಿ ಬೋಧಿಸಿದನು. ಆತನಿಗೆ ಯಾರೂ ಪ್ರತ್ಯುತ್ತರ ಕೊಡಲಾಗದಿರಲು, ಆತನನ್ನು ಹೇಗಾದರೂ ಪರಾಭವಗೊಳಿಸಬೇಕೆಂದು, ವ್ಯಭಿಚಾರದೂಷಿತಳಾದ ಒಬ್ಬ ಸ್ತ್ರೀಯನ್ನು ಆತನ ಬಳಿಗೆ ಕರೆತಂದು,—'ಮೋಸೆಸ್ಸಿನ ಧರ್ಮಶಾಸ್ತ್ರದಂತೆ ಈ ಪಾಪಿ ಸ್ತ್ರೀಯನ್ನು ಕಲ್ಲಿನಿಂದ ಹೊಡೆದು ಕೊಲ್ಲಬೇಕೆಂದಿದೆ; ಅದಕ್ಕೆ ನಿನ್ನ ಹೇಳಿಕೆಯೇನು' ಎಂದರು. ಆಗ ಏಸುವು—' ಅಯ್ಯಾ ನಿಮ್ಮಲ್ಲಿ ಯಾವನು ಪಾಪರಹಿತನೋ ಅವನು ಮುಂದೆ ಬಂದು ಮೊದಲು ಅವಳನ್ನು ಕಲ್ಲಿನಿಂದ ಹೊಡೆಯಲಿ' ಎಂದನು. ಅದನ್ನು ಕೇಳಿದ ಆ ವಿರೋಧಿಗಳೆಲ್ಲರೂ ಪ್ರತಿಮಾತನಾಡಲಾರದೆ ಹೊರಟುಹೋದರು. ಕೊನೆಗೆ ಏಸುವು ಆಕೆಯನ್ನು ಮುಂದೆ ಪಾಪಮಾಡದಿರೆಂದು ಹೇಳಿಕಳುಹಿಸಿಬಿಟ್ಟನು.

ಮತ್ತೊಂದುವೇಳೆ ಹಲವರು ಸ್ತ್ರೀಯರು ಆತನಿಂದ ಆಶೀರ್ವಾದ ಪಡೆಯಬೇಕೆಂದು ತಮ್ಮ ಚಿಕ್ಕಮಕ್ಕಳನ್ನು ಕರೆತಂದರು. ಅವರನ್ನು ಶಿಷ್ಯರು ನಿವಾರಿಸುತ್ತಿರಲು, ಏಸುವು—''ಬೇಡಬೇಡ. ಆ ಚಿಕ್ಕಮಕ್ಕಳನ್ನು ತಳ್ಳಬೇಡಿ. ಸ್ವರ್ಗಸಾಮ್ರಾಜ್ಯವು ಅವರದೇ ಆಗಿದೆ. ಯಾವನಾದರೂ ಚಿಕ್ಕಮಕ್ಕಳಂತೆ ನಿರ್ದೋಷಿಯಾಗದೆ ಸ್ವರ್ಗಸಾಮ್ರಾಜ್ಯಕ್ಕೆ ಅರ್ಹನಾಗಲಾರನು' ಎಂದು ಹೇಳಿ ಅವರನ್ನು ಮನಃಪೂರ್ವಕ ಆಶೀರ್ವದಿಸಿ ಕಳುಹಿಸಿದನು.

ಕೊನೆಯಸಾರಿ ಆತನು ಎರೂಸಲೇಮಿಗೆ ಹೋದಾಗ್ಗೆ, ಅವರೆಗೆ ಆತನ ವಿಷಯದಲ್ಲಿ ಅಧಿಕ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡಿದ್ದ ಜನಸಮೂಹವು ಅಗಾಧ ಪ್ರೇಮದಿಂದ ಆತನನ್ನು ಬರಮಾಡಿಕೊಂಡಿತು. ಆತನ ಮಾರ್ಗದಲ್ಲಿ ಎಳೆತಳಿರುಗಳನ್ನೂ ಕೆಲವೆಡೆಗಳಲ್ಲಿ ಹೊದ್ದಿದ್ದ ತಮ್ಮ ವಸ್ತ್ರಗಳನ್ನೂ ಹಾಸಿ ಆತನನ್ನು ಕರೆತಂದರು. ಎಷ್ಟೋಮಂದಿ, ಮೊಣಕಾಲುಗಳ ಮೇಲೆ ಕುಳಿತು ಪ್ರಾರ್ಥಿಸಿ ಆತನನ್ನು ಗೌರವಿಸಿದರು. ಇದನ್ನೆಲ್ಲ ಕಂಡು ಪೂರ್ವಾಚಾರಪಂಗಡದವರಿಗೆ ಬಹು ಅಸೂಯೆಯೂ ದ್ವೇಷವೂ ಉಂಟಾದುವು. ಆತನು ಅಷ್ಟುಮಟ್ಟಿನ ಮರ್ಯಾದೆಯಿಂದ ಎರೂಸಲೇಂ ನಗರವನ್ನು ಹೊಕ್ಕು ಮುಂದೆ ಮುಂದೆ ನಡೆದನು. ಆಗ ದಿವ್ಯ ದೃಷ್ಟಿಯುಳ್ಳನಾಗಿದ್ದ ಆತನಿಗೆ

ಆ ನಗರಕ್ಕೆ ಮುಂದೆ ಸ್ವಲ್ಪ ಕಾಲದಲ್ಲೇ ಪ್ರಾಪ್ತವಾಗಲಿದ್ದ ಅಗಾಧ ದುರ್ವಿಧಿಯು ಗೋಚರವಾಯಿತಂತೆ! ಆಗಲಾತನು ಒಮ್ಮೆ ನಿಟ್ಟುಸಿರು ಬಿಟ್ಟು — 'ಅಕಟಾ ದುರ್ದೈವಿ ಪಟ್ಟಣವೇ, ಇಷ್ಟು ಸೌಂದರ್ಯಪೂರ್ಣತೆಯಿಂದ ರಾರಾಜಿಸುತ್ತಿರುವ ನಿನ್ನನ್ನು ನಿನ್ನ ಪ್ರಜೆಗಳೊಂದಿಗೆ ನೆಲಸಮಮಾಡುವ ದುರ್ದಿನವೂ ಒಂದು ಬರುವುದು' ಎಂದುಕೊಂಡನು. ಈ ಭವಿಷ್ಯವು, ನಾಲ್ವತ್ತು ವರ್ಷಗಳ ಮೇಲೆ ನಿಶ್ಚಯವಾಗಿ ನಡೆಯಿತಂತೆ! ರೋಮನರು ಆ ನಗರವನ್ನು ಆಕ್ರಮಿಸಿ, ಒಂದು ಮನೆಯಾದರೂ ಉಳಿಯದಂತೆ ನಾಶಗೊಳಿಸಿದರಂತೆ!

ಆತನಲ್ಲಿದ್ದ ಗುಣಗ್ರಹಣಶಕ್ತಿಗೆ ಉದಾಹರಣೆಯಾಗಿ ಒಂದು ಸಂಗತಿಯು ಹೇಳಲ್ಪಟ್ಟಿದೆ. ದೇವಾಲಯದಲ್ಲಿ ಎಲ್ಲರೂ ಕಾಣಿಕೆಗಳನ್ನು ಸಮರ್ಪಿಸುತ್ತಿದ್ದಾಗ್ಗೆ ಏಸುವು ಅಲ್ಲೇ ಕುಳಿತು ಅದನ್ನು ಗಮನಿಸುತ್ತಿದ್ದನು. ಆಗ ಒಬ್ಬ ಬಡ ವಿಧವೆಯು ಎರಡು ಕಾಸುಗಳನ್ನು ತಂದು ಕಾಣಿಕೆಯ ಪಾತ್ರೆಯಲ್ಲಿ ಹಾಕಿದಳು. ಅದನ್ನು ಕಂಡ ಏಸುವು ಬಳಿಯಲ್ಲಿದ್ದ ತನ್ನ ಶಿಷ್ಯರನ್ನು ಕುರಿತು,—'ನೋಡಿದೆಯಾ, ಧನವಂತರು ತಮ್ಮ ಐಶ್ವರ್ಯದಲ್ಲಿ ಸ್ವಲ್ಪವನ್ನು ಕಾಣಿಕೆಯಾಗಿ ಕೊಡುವುದು ದೊಡ್ಡದಲ್ಲ. ಈ ಬಡ ವಿಧವೆಯು ತನ್ನ ಅತಿಶಯ ದಾರಿದ್ರ್ಯದಲ್ಲೂ ದಾನ ಮಾಡಿದಳಲ್ಲ, ಅದೇ ಹೆಚ್ಚಿನದು' ಎಂದನು.

ಕೊನೆಯ ಸಾರಿ ನಡೆದ ಒಂದು ಪಸ್ಕ ಹಬ್ಬಕ್ಕಾಗಿ ಏಸುವು ಎರೂಸಲೇಮಿಗೆ ಬಂದಿದ್ದಾಗ, ಆತನಿಗೆ ತನ್ನ ಕಾರ್ಯವು ಸಮಾಪ್ತಿಗೆ ಬರುವ ಕಾಲವು ಸಮೀಪಿಸಿತೆಂದು ತೋರಿಬಂತು. ಅಲ್ಲಿದ್ದ ಫರಿಸಾಯರಲ್ಲಿ ಕೆಲವರು, ಆತನಿಗೆ ಭೂ ಸಾಮ್ರಾಜ್ಯವನ್ನು ಎಂದರೆ, ರೋಮನರಿಂದ ಬಿಡುಗಡೆಯನ್ನು ಹೊಂದಿ ಸ್ವಾತಂತ್ರ್ಯವನ್ನು ಸ್ಥಾಪಿಸುವ ಅಪೇಕ್ಷೆ ಇಲ್ಲವೆಂಬುದನ್ನು ಕಂಡುಕೊಂಡು ಕೆಲಸಕ್ಕೆ ಬಾರದುದೆಂದು ತಮಗೆ ತೋರಿದ ಧರ್ಮಬೋಧೆ ಮಾಡುತ್ತಿದ್ದ ಆತನನ್ನು ತೀರಿಸಿಬಿಡಬೇಕೆಂದುಕೊಂಡಿದ್ದರು. ಆ ದಿನ ಊಟಕ್ಕೆ ಎಲ್ಲರೂ ಕುಳಿತಿದ್ದಾಗ ಅಗ್ರಪೀಠವು ಯಾರಿಗೆ ಸಿಕ್ಕಬೇಕೆಂಬ ವಿಚಾರದಲ್ಲಿ ಚರ್ಚೆ ಎದ್ದಿತು. ಒಡನೆ ಏಸುವು,—'ಊಟದಲ್ಲಿ ದೊಡ್ಡವರು ಚಿಕ್ಕವರು ಎಂದರೇನು, ಬಡಿಸುವವರೇ ಅಥವ ಊಟಮಾಡುವವರೆ? ನಾನಾದರೋ ಎಲ್ಲರಿಗೂ ಬಡಿಸುವವನಾಗುವೆನು' ಎಂದು ನುಡಿದು, ಒಡನೆ ಎದ್ದು, ಸೊಂಟಕ್ಕೆ ಬಟ್ಟೆಯನ್ನು

ಸುತ್ತಿಕೊಂಡು, ಎಲ್ಲರ ಪಾದಗಳನ್ನೂ ತೊಳೆದು ಒರೆಸತೊಡಗಿದನು. ಆತನ ಹನ್ನೆರಡುಮಂದಿ ಶಿಷ್ಯರಲ್ಲಿ ಜ್ಯೂಡಾಸ್ ಎಂಬುವನು, ದ್ರೋಹಿಯಾಗಿ ಆತನನ್ನು ಹಿಡಿದುಕೊಡಲು ಸಂಕಲ್ಪಿಸಿದ್ದ ಸಂಗತಿಯು ಏಸುವಿಗೆ ಗೋಚರವಾಯಿತು. ಒಡನೆ ಏಸುವು ನಿರ್ದಾಕ್ಷಿಣ್ಯವಾಗಿ ಇದ್ದ ಸಂಗತಿಯನ್ನು ತಿಳಿಸಿಬಿಟ್ಟನು. ಆ ಮಾತನ್ನು ಕೇಳಿದ ಜ್ಯೂಡಾಸನು ಅಲ್ಲಿಂದ ಹೊರಟುಹೋಗಿ ಪಯಣ ಮರೆಸಿಕೊಂಡನು. ತರುವಾಯ ಏಸು ಎಲ್ಲರೊಂದಿಗೆ ಊಟಕ್ಕೆ ಕುಳಿತು, ರೊಟ್ಟಿಯನ್ನು ಕೈಗೆ ತೆಗೆದುಕೊಂಡು, ಅದನ್ನು ಮುರಿದು,- ಮಿತ್ರರೇ ನೋಡಿ, ಹೀಗೆಯೇ ನನ್ನ ಈ ದೇಹವನ್ನೂ, ನಿಮಗಾಗಿಯೇ ಬಲಿದಾನವಾಗಿ ಕೊಟ್ಟಿದ್ದೇನೆ. ಇದರ ಜ್ಞಾಪಕವು ನಿಮಗಿರಲಿ' ಎಂದು, ಕುಡಿಯುವುದಕ್ಕಾಗಿ ಬಟ್ಟಲನ್ನು ಕೈಗೆತ್ತಿಕೊಂಡು, - 'ಇಗೋ ನೋಡಿ, ಈ ಬಟ್ಟಲೇ ನನ್ನ ರಕ್ತವು. ನಿಮ್ಮ-ಅರ್ಥಾತ್ ಲೋಕದ ಸುಖಜೀವನಕ್ಕಾಗಿ ಇದನ್ನು ನಾನು ಧಾರೆ ಸುರಿಯುತ್ತಿದ್ದೇನೆ' ಎಂದು ನುಡಿದನು. ಹೀಗೆ ಸಂಪೂರ್ಣ ಜೀವಿತವನ್ನೂ, ಭಗವತ್ಸೇವೆಗಾಗಿ ನಿಸ್ವಾರ್ಥತೆಯಿಂದ ವಿನಿಯೋಗಿಸುವ ಅಗಾಧ ತ್ಯಾಗವನ್ನೇ ಕ್ರೈಸ್ತ ಧರ್ಮೀಯರು, ಪವಿತ್ರವಾದ ಆತ್ಮತನ್ಮಯವೆಂಬ ಭಾವನೆಯಲ್ಲಿ ಉಪಯೋಗಿಸುವರು. ಮತ್ತು- "ಮಿತ್ರರೇ, ನನ್ನ ಆತ್ಮ ಸಂತೋಷದಿಂದ ನಿಮಗೆ ಹೇಳುತ್ತಿದ್ದೇನೆ. ನೀವೆಲ್ಲರೂ ಐಕಮತ್ಯದಿಂದಲೂ, ಪರಸ್ಪರ ಪ್ರೀತಿ ವಿಶ್ವಾಸಗಳಿಂದಲೂ ಕೂಡಿ ಭಗವತ್ಕಾರ್ಯ ಸಾಧಕರಾಗಿರಿ. ಅದೇ ನನಗೆ ಸಲ್ಲಿಸತಕ್ಕ ಅತ್ಯಧಿಕ ಗೌರವವು" ಎಂದನು.

ಇದಾದ ಸ್ವಲ್ಪ ಹೊತ್ತಿನಮೇಲೆ ಆತನು ಸಮೀಪದ ಗುಡ್ಡದ ಮೇಲಕ್ಕೆ ಹೋಗಿ, ಅಲ್ಲಿ ಕೊನೆಯಸಾರಿ ತನ್ನ ಮನಸಾರೆ ಭಗವತ್ಪ್ರಾರ್ಥನೆ ಮಾಡಿದನು.—'ತಂದೆಯೇ ನಿನ್ನ ಇಷ್ಟವೇನೋ ಅದು ಸರ್ವಥಾ ನೆರವೇರುವುದು. ಈ ಪಾತ್ರೆಯನ್ನು ಶೀಘ್ರವಾಗಿ ತುಂಬಿಸು' ಎಂದು ಬೇಡಿಕೊಂಡು ಈಚೆಗೆ ಬಂದು ನೋಡುವಲ್ಲಿ, ತನ್ನ ಶಿಷ್ಯರೆಲ್ಲರೂ ಮಲಗಿ ನಿದ್ರೆಮಾಡುತ್ತಿದ್ದರು. ಸ್ವಲ್ಪ ಹೊತ್ತಿನಲ್ಲೇ ಹಿಂದೆ, ಏಸುವಿನಿಂದ ದ್ರೋಹಿಯೆಂದು ಗುರ್ತಿಸಲ್ಪಟ್ಟಿದ್ದ ಜ್ಯೂಡಾಸನು, ಅನೇಕಮಂದಿ ಅಧಿಕಾರಿಗಳು ಪುರೋಹಿತರು ಪೂರ್ವಾಚಾರ ವಾದಿಗಳು ಮುಂತಾದವರಿಂದ ಕೂಡಿ ಬಂದನು. ಅವನಿಗೆ ಏಸುವು ಅಂತಹ ಸಂದರ್ಭಗಳಲ್ಲಿ ಎಲ್ಲಿ ವಾಸಮಾಡುವನೆಂಬ ಸಂಗತಿಯು ತಿಳಿದಿತ್ತು

ದುದರಿಂದ ಅಲ್ಲಿ ಆವನನ್ನು ಹಿಡಿಯಬಹುದೆಂದು ಶತ್ರುಗಳೊಂದಿಗೆ ಒಳಸಂಚು ಮಾಡಿ ಕರೆತಂದಿದ್ದನು. ಅವರನ್ನು ಕಂಡೊಡನೆಯೇ, ಏಸುವು, 'ನೀವು ಯಾರನ್ನು ಹುಡುಕುತ್ತಿರುವಿರಿ, ಎನ್ನಲು ಅವರು 'ನಜರೇತಿನ ಏಸುವನ್ನು' ಎಂದರು. 'ಹಾಗಾದರೆ ನೀವು ಹುಡುಕುತ್ತಿರುವ ಏಸುವು ನಾನೇ' ಎಂದು ಮುಂದೆ ನಿಂತನು. ಒಡನೆ, ಅವರು ಅವನನ್ನು ಹಿಡಿದು ಕಟ್ಟಿದರು. ಅದನ್ನು ಕಂಡೊಡನೆಯೇ ಸಮೀಪದಲ್ಲಿದ್ದ ಅವನ ಶಿಷ್ಯರಲ್ಲೊಬ್ಬನಾದ ಪೀಟರನು, ತನ್ನ ಬಳಿ ಇದ್ದ ಕತ್ತಿಯನ್ನು ಹಿಡಿದು ಏಸುವನ್ನು ಹಿಡಿದಿದ್ದ ದೂತನ ಬಲದ ಕಿವಿಯನ್ನು ಕತ್ತರಿಸಿದನು. ಒಡನೆ ಏಸುವು ಕತ್ತರಿಸಲ್ಪಟ್ಟ ಅವನ ಕಿವಿಯನ್ನು ಮುಟ್ಟಿ ಗುಣಪಡಿಸಿ,—'ಪೀಟರ್ ಇದೇನು ಕೆಲಸ ಮಾಡಿದೆ· ನನ್ನ ತಂದೆಯಾದ ಭಗವಂತನು ಕಳುಹಿಸಿರುವ ಈ ಎಡೆಯನ್ನು ನಾನು ಉಣಬೇಕಲ್ಲವೋ' ಎಂದು ನುಡಿದು, ಆ ಅಧಿಕಾರಿ ಮುಂತಾದವರನ್ನು ಕುರಿತು—'ನೀವು ನಿಮ್ಮ ಆಯುಧಗಳನ್ನೆಲ್ಲಾ ಸಿದ್ಧಪಡಿಸಿಕೊಂಡು, ಒಬ್ಬ ದರೋಡೆಯವನ ಮೇಲೆ ಸಾಗಿಬಂದಂತೆ ಬಂದಿರುವಿರಲ್ಲಾ. ನಾನು ದಿನವೂ ದೇವಸ್ಥಾನದಲ್ಲೇ ಇರುತ್ತಿದ್ದೆ; ಅಲ್ಲೇ ಹಿಡಿಯಬಹುದಾಗಿದ್ದಿತಲ್ಲ. ಇಲ್ಲ, ಇಲ್ಲ. ಈವೇಳೆಯೇ ನಿಮಗೆ ತಕ್ಕುದು. ಅಧಿಕಾರದ ಗಾಢಾಂಧಕಾರವೇ ನನ್ನನ್ನು ಹಿಡಿಯಲು ತಕ್ಕ ವೇಳೆಯು; ಹೌದು' ಎಂದುಕೊಂಡನು.

ತರುವಾಯ ಆತನನ್ನು ಮೊದಲು, ದೇವಾಲಯದ ಮುಖ್ಯ ಧರ್ಮಾಧಿಕಾರ (*High Priest*)ಯ ಮನೆಗೆ ಕರೆದೊಯ್ದು, ಅಲ್ಲಿ ಆತನನ್ನು ದೈವದ್ರೋಹಿಯೆಂದು ದೂಷಿಸಿ ತಪ್ಪುಹೊರೆಸಿದರು. ಆದರೆ ರೋಮನರ ಸರ್ವಾಧಿಕಾರಿಯ ಅಪ್ಪಣೆಯಿಲ್ಲದೆ, ಅವನಿಗೆ ಪ್ರಾಣದಂಡನೆ ವಿಧಿಸುವುದು ಸಾಧ್ಯವಿರಲಿಲ್ಲವಾಗಿ, ಸರ್ವಾಧಿಕಾರಿಯಾದ ಪಿಲೇಟನ ಬಳಿಗೆ ಕಳುಹಿಸಿದನು. ಪಿಲೇಟನು ಆತನ ತಪ್ಪೇನೆಂದು ವಿಚಾರಿಸಿ, ನಿರ್ದೋಷಿಯೆಂದು ಹೇಳಿಬಿಟ್ಟನು. ಆತನ ಶತ್ರುಗಳಿಗಾದರೋ ಪಿಲೇಟನ ಆ ತೀರ್ಮಾನವು ಬಹು ಕೋಪೋದ್ರೇಕವನ್ನುಂಟುಮಾಡಿತು. ಇದನ್ನು ತಿಳಿದ ಆತನು, ಗ್ಯಾಲಿಲೀಯನಾದ ಆತನನ್ನು ರಾಜಾ ಹೆರೊದನೇ ವಿಚಾರಿಸಿ ಶಿಕ್ಷಿಸಲೆಂದು ಅವನ ಬಳಿಗೆ ಕಳುಹಿಸಿದನು. ಹೆರೊದನು, ಅವನ ತಪ್ಪಿತವೇನೆಂದು ಕೇಳಲು ಏಸುವು ಪ್ರತ್ಯುತ್ತರ ಕೊಡಲಿಲ್ಲ. ಪುನಃ ಆತನನ್ನು ಪಿಲೇಟನ ಬಳಿಗೇ ಕರೆತಂದರು.

ಮಾರ್ಗದಲ್ಲಿ ಶತ್ರುಗಳು ಆತನನ್ನು ಅನೇಕ ಬಗೆಯಲ್ಲಿ ಅವಮಾನಪಡಿಸಿದರು. ಆದರೂ ಅವನು ಏನೂ ಹೇಳದೆ ಅವರು ಕೊಟ್ಟ ಹಿಂಸೆಗಳನ್ನೂ ಮಾಡಿದ ದೂಷಣೆಗಳನ್ನೂ ಮೌನದಿಂದ ಸಹಿಸಿಕೊಂಡಿದ್ದನು. ಪಿಲೇಟನು ಈ ಸಾರಿಯೂ ಅವನ ಮೇಲೆ ಏನೂ ತಪ್ಪಿತವಿಲ್ಲವೆಂದು ಹೋಗಬಿಟ್ಟನು. ಆದರೆ ಆ ಜನರು ಬಿಡುವಂತಿರಲಿಲ್ಲ.—'ಇಲ್ಲ ಅವನು ಮಹಾದ್ರೋಹಿಯು; ಅವನನ್ನು ಕೊಲ್ಲಬೇಕು-ಶೂಲಕ್ಕೇರಿಸಬೇಕು,' ಎಂದು ಮನಬಂದಂತೆ ಅರಚಿಕೊಳ್ಳುತ್ತಿದ್ದರು. ಕೊನೆಗೆ ಪಿಲೇಟನು ಈ ಜನರು ದಂಗೆ ಏಳುವರೆಂದು ತಿಳಿದು—'ನಾನು ಈ ನಿರ್ದೋಷಿ ಮನುಷ್ಯನನ್ನು ವಧಿಸಿದ ಪಾಪಕ್ಕೆ ಗುರಿಯಾಗಲಾರೆನು. ನಿಮಗೆ ಇಷ್ಟಬಂದಂತೆ ಮಾಡಿಕೊಳ್ಳಿರಿ,' ಎಂದು ನುಡಿದು ಆ ಪಾಪದ ಸೋಂಕು ತನಗಿರಬಾರದೆಂದು ಕೈತೊಳೆದುಕೊಂಡನು. ಅದನ್ನು ಕಂಡ ಆ ಶತ್ರುವರ್ಗದವರು—'ಹಾಗಾದರೆ ಅವನ ರಕ್ತವು ನಮ್ಮ ಮೇಲೂ ನಮ್ಮ ಮಕ್ಕಳ ಮೇಲೂ ಇರಲಿ' ಎಂದು ನುಡಿದು ಆತನ ವಧೆಗೆ ಸಿದ್ಧರಾದರು.

ಒಡನೆ ಏಸುವನ್ನು ಶೂಲಾರೋಹಣಕ್ಕೆ ತಕ್ಕಂತೆ ಸಿಂಗರಿಸತೊಡಗಿದರು. ತಲೆಯಮೇಲೆ ಮುಳ್ಳಿನ ಕಿರೀಟವನ್ನು ತಂದಿಟ್ಟರು. ಒಂದು ನಿಲುವಂಗಿಯನ್ನು ತೊಡಿಸಿದರು. ಅವನೆದುರಿಗೆ ಅಡ್ಡಬಿದ್ದು,—'ಎಹೂದ್ಯರ ಅರಸೇ, ಶರಣು' ಎಂದು ಅಣಕಿಸಿದರು. ಪಿಲೇಟನು ಆತನನ್ನು ಬಿಡುಗಡೆಮಾಡಬೇಕೆಂದು ಆಗಲೂ ಎಷ್ಟೋ ಪ್ರಯತ್ನಿಸಿದನು. ಆದರೆ ಸಾಧ್ಯವಾಗಲಿಲ್ಲ. ಕೊನೆಗೆ ಆತನನ್ನು ಕಾಲ್ವರಿ ಎಂಬೊಂದು ಗುಡ್ಡದ ಮೇಲಕ್ಕೆ ಶಿಲುಬೆಯನ್ನೂ ಆತನಿಂದಲೇ ಹೊರಿಸಿಕೊಂಡು ಕರೆದೊಯ್ದು, ಅಲ್ಲಿ ಎರಡು ಪಕ್ಕದಲ್ಲೂ ಒಬ್ಬೊಬ್ಬ ಕಳ್ಳನನ್ನೂ ಮಧ್ಯದಲ್ಲಿ ಏಸುವನ್ನೂ ನಿಲ್ಲಿಸಿ ಶೂಲಕ್ಕೇರಿಸಿದರು. ಎರಡು ಕೈಗಳಿಗೆ ಎರಡು ಮೊಳೆಗಳನ್ನು ಹೊಡೆದರು. ಪಾದಗಳೆರಡನ್ನೂ ಒಂದಾಗಿಟ್ಟು ಅದಕ್ಕೊಂದು ಮೊಳೆಯನ್ನು ಜಡಿದರು. ಪ್ರಾಣಸಹಿತವಾಗಿ ಉಂಟಾಗುವ ಆ ಬಗೆಯ ಬಾಧೆಯನ್ನು ವರ್ಣಿಸಲು ಸಾಧ್ಯವೇ! ಆಗಲೂ ಆ ದಯಾಮಯನು ಅವರನ್ನು ದೂಷಿಸದೆ, 'ದೇವಾ,-ಅವರನ್ನು ಕ್ಷಮಿಸು, ತಾವು ಏನು ಮಾಡುತ್ತಿರುವರೆಂಬುದು ಅವರಿಗೆ ತಿಳಿಯದು' ಎಂದು ಭಗವಂತನನ್ನೇ ಮರೆಹೊಕ್ಕು ಪ್ರಾರ್ಥಿಸಿದನು.

ಆತನ ಬಳಿಯಲ್ಲಿ ಆ ಸಂದರ್ಭದಲ್ಲಿ ಕೆಲವರು ಸ್ನೇಹಿತರು ಮಾತ್ರ ಇದ್ದರು. ಆತನು ತನ್ನ ತಾಯಿಯನ್ನು ದಯೆಯಿಂದ ನೋಡಿಕೊಳ್ಳುವಂತೆ ಅವರ ವಶಕ್ಕೆ ವಹಿಸಿ, ಅಸಹನೀಯವಾದ ಬಾಧೆಯನ್ನೂ, ವ್ಯಥೆಯನ್ನೂ ಸಹಿಸಲಾರದೆ— 'ದೇವಾ, ದೇವಾ, ನನ್ನನ್ನೇಕೆ ಕೈಬಿಟ್ಟೆ!' ಎಂದು ಹಲುಬಿಕೊಂಡನು. ಆದರೆ ಸ್ವಲ್ಪ ಹೊತ್ತಿನಲ್ಲೇ ಪುನಃ ಪ್ರಜ್ಞೆಹೊಂದಿ —'ಇಲ್ಲ, ಸರ್ವೇಶ್ವರಾ ಇದು ನಿನ್ನ ಇಚ್ಛೆಯು. ಇಗೋ ನನ್ನೀ ಆತ್ಮವನ್ನು ನಿನ್ನ ಕೈಗಳಲ್ಲಿ ಒಪ್ಪಿಸಿದ್ದೇನೆ; ಸ್ವೀಕರಿಸು' ಎಂದು ನುಡಿದು ಕೊನೆಯಸಾರಿ ದೀರ್ಘ ನಿಶ್ವಾಸವನ್ನು ಬಿಟ್ಟನು.

ಆ ದಿನ ಸಾಯಂಕಾಲವೇ, ಆತನ ಅನುಯಾಯಿಗಳಲ್ಲಿ ಧನವಂತನಾಗಿದ್ದ ಒಬ್ಬಾತನು ಆತನ ದೇಹವನ್ನು ಬೇಡಿ ಪಡೆದು ಅಲ್ಲೇ ಬಂಡೆಯಲ್ಲಿ ಕೊರೆದು ಮಾಡಿದ್ದ ಒಂದು ಸಮಾಧಿಯಲ್ಲಿ ಆತನ ದೇಹವನ್ನಿಟ್ಟು - ಮೇಲೆ ದೊಡ್ಡದೊಂದು ಬಂಡೆಯನ್ನು ಎಳೆದು ಹೋದನು. ಮಾರನೆಯ ಪ್ರಾತಃಕಾಲ, ಆತನನ್ನು ಶಿಲುಬೆಗೇರಿಸಿದಾಗ ಸೇವೆ ಮಾಡಿದ್ದ ಇಬ್ಬರು ಸ್ತ್ರೀಯರು ಆತನ ದೇಹವನ್ನು ನೋಡಬೇಕೆಂದು ಬಂದಾಗ, ಆ ದೊಡ್ಡಬಂಡೆಯು ಒಂದೆಡೆಗೆ ಜರುಗಿಸಲ್ಪಟ್ಟು ಒಳಗಿದ್ದ ಮೃತದೇಹವು ಮಾಯವಾಗಿದ್ದುದನ್ನು ಕಂಡು ಪರಮಾಶ್ಚರ್ಯಪಟ್ಟು ಓಡಿಹೋಗಿ, ಪೀಟರಿಗೂ ಜ್ಞಾನಸಿಗೂ ಏಸುವಿನ ದೇಹವು ತಸ್ಕರವಾಗಿದೆಯೆಂದು ಹೇಳಿದರು. ಆಗ ಇಬ್ಬರು ದೇವದೂತರು ಪ್ರತ್ಯಕ್ಷರಾಗಿ,—'ಇಲ್ಲ, ಆ ದೇಹವು ಕಳುವಾಗಿಲ್ಲ. ಆತನು ಆ ಸಮಾಧಿಯಿಂದ ಪುನಃ ಎದ್ದು, ತನ್ನ ಶಿಷ್ಯರಿಗೆ ಆ ಸಂಗತಿಯನ್ನು ಹೇಳುವುದಕ್ಕಾಗಿ ನಮ್ಮನ್ನು ಕಳುಹಿಸಿದ್ದಾನೆ,' ಎಂದು ಹೇಳಿದರು. ಅದೇ ದಿನವೇ ಆ ಸ್ತ್ರೀಗೂ ಪೀಟರು ಮತ್ತು ಜ್ಞಾನ್ ಇವರಿಗೂ ಆತನು ಪೂರ್ವದಂತೆಯೇ ಪರಿಪೂರ್ಣ ದೇಹದಿಂದ ಪ್ರತ್ಯಕ್ಷನಾದನು. ಹೀಗೆ ಆ ಮಹಾಸಾಧುವು, ದುಷ್ಟರ ಧರ್ಮಾಂಧತೆಯಿಂದ ಮರಣವನ್ನು ಹೊಂದಿ ದೇಹವನ್ನು ತ್ಯಜಿಸಿದರೂ, ತನ್ನಲ್ಲಿದ್ದ ದೈವಿಕಗುಣಗಳ ಫಲವಾಗಿ ಪುನರುತ್ಥಾನ ಹೊಂದಿ, ಲೋಕಕ್ಕೆ ಆಶ್ಚರ್ಯವನ್ನುಂಟುಮಾಡಿದನೆಂದು, ಕ್ರೈಸ್ತ ಧಾರ್ಮಿಕಗ್ರಂಥಗಳಲ್ಲಿ ಆತನ ಮಹಿಮೆಯು ವರ್ಣಿತವಾಗಿದೆ.



# ಉಪಸಂಹಾರ

ಆತನ ಶಿಷ್ಯರಲ್ಲಿ ಕೇವಲ ಶ್ರದ್ಧಾವಂತರಾದ ಹಲವು ಮಂದಿ, ಆತನ ಬೋಧನೆಗಳನ್ನು ಮೇಲೆ ಮೇಲೆ ಜ್ಞಾಪಿಸಿಕೊಳ್ಳುತ್ತಾ, ಮಹಾ ಸಾಧುವಾದ ಆತನ ಮರಣಕ್ಕಾಗಿ ಮರುಗುತ್ತಾ ಮಹಾ ಚಿಂತೆಗೆ ಒಳಗಾಗಿದ್ದರು. ಅಂತಹ ಸಂದರ್ಭಗಳಲ್ಲೆಲ್ಲ, ಏಸುವು ಅವರಿಗೆ ದರ್ಶನವಿತ್ತು, ಉತ್ತೇಜನ ಕೊಡುತ್ತಿದ್ದನಂತೆ! ಹೀಗೆ ಪುನಃ ತಮ್ಮ ಗುರುವಿನಿಂದ ಉತ್ತೇಜಿತರಾದ ಆ ಶಿಷ್ಯರು ಮೇಲೆಮೇಲೆ ನವಸ್ಫೂರ್ತಿಯಿಂದ ಹತ್ತಿರದ ದೂರದ ಅನೇಕಾನೇಕ ದೇಶಗಳಲ್ಲಿ ಸಂಚರಿಸಿ ಆತನ ಬೋಧನೆಗಳನ್ನು ಹರಡಿದರು. ಅನೇಕ ಮಂದಿಗೆ, ಈ ಧರ್ಮ ಪ್ರಚಾರ ಕಾರ್ಯದಲ್ಲಿ ಅಗಾಧ ಶಿಕ್ಷೆಗಳೂ, ದುರಂತ ಬಾಧೆಗಳೂ ಪ್ರಾಪ್ತವಾದುವು. ಆದರೂ ಆಯಾ ಸಂದರ್ಭಗಳಲ್ಲೆಲ್ಲ, ತಮ್ಮ ಗುರುವರ್ಯನ ಅಗಾಧ ತ್ಯಾಗವೇ ಅವರ ಕಣ್ಣೆದುರಿನಲ್ಲಿದ್ದು ಅವರಿಗೆ ಮಾರ್ಗದರ್ಶಕವಾಯಿತು.

ಯಾವ ಮಹನೀಯನ ಈ ಅದ್ವಿತೀಯ ತ್ಯಾಗವೂ ಸರ್ವ ಜನ ಸುಲಭವಾದ ಬೋಧನೆಗಳೂ, ಆತನ ಮರಣವಾದ ಹತ್ತೊಂಬತ್ತು ಶತಮಾನಗಳು ಕಳೆದು ಹೋದರೂ ಇನ್ನೂ ಮಲಿನವಾಗದೆ ಭೂಲೋಕದ ಸಮಸ್ತ ಖಂಡಗಳಲ್ಲೂ ವ್ಯಾಪಿಸಿ, ಸಕಲರಿಂದಲೂ ಪರಿತ್ಯಜಿಸಲ್ಪಟ್ಟ ಕ್ಷುದ್ರ ಜೀವಿಗಳಿಗೂ, ಮಹಾ ಪಾಪಿಗಳಿಗೂ ಆಶ್ರಯವನ್ನಿತ್ತು ರಕ್ಷಿಸುವಲ್ಲಿ ಅದ್ವಿತೀಯವಾಗಿವೆಯೋ ಆ ಅಮೂಲ್ಯ ಸದ್ಗುಣಗಳು ಸರ್ವರಿಗೂ ಮಾರ್ಗದರ್ಶಕಗಳಾಗಿರಲಿ. ನಮ್ಮ ಕ್ರೈಸ್ತಬಾಂಧವರು, ತಮ್ಮ ಸದ್ಗುರುವರ್ಯನಾದ ಈತನ ಅಮೂಲ್ಯ ಬೋಧನೆಗಳ ಸಾರಾಂಶವನ್ನು ನಿಶ್ಚಯ ರೀತಿಯಿಂದ ಗ್ರಹಿಸಿ, ನಿಷ್ಪಕ್ಷಪಾತ ದೃಷ್ಟಿಯಿಂದ ಮಿಕ್ಕ ಸರ್ವಧರ್ಮಗಳವರೊಂದಿಗೂ ಸಹಕರಿಸುವಂತಾಗಲಿ, ಸರ್ವ ಧರ್ಮಗಳಲ್ಲಿಯೂ ನೆಲೆಸಿ, ಜಗಚ್ಛಾಂತಿಗೆ ಮೂಲಭೂತವೂ ಸರ್ವರಕ್ಷಕವೂ ಆದ ಭಗವತ್ತತ್ವವು ಸರ್ವರಲ್ಲೂ ಐಕ್ಯಮತ್ಯ, ಸಾಧುಭಾವ, ಸಾನುಭೂತಿಗಳನ್ನು ಪ್ರಸಾದಿಸಿ ರಕ್ಷಿಸಲಿ.

ತಥಾಸ್ತು.



# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

### ಏಳನೆಯ ವರ್ಷಾರಂಭ—ಜನವರಿ ೧೯೩೯

ಪೌರಾಣಿಕ ಐತಿಹಾಸಿಕ, ಆಧುನಿಕ ಕಾಲಗಳಲ್ಲಿ ಪ್ರಸಿದ್ಧರಾದ ಭಾರತ ದೇಶದ ಸ್ತ್ರೀ-ಪುರುಷರ ಪವಿತ್ರ ಜೀವನ ಚರಿತ್ರೆಗಳನ್ನು ಸದ್ಯಃ ಸ್ಥಿತಿಯನ್ನನುಸರಿಸಿ ಬರೆದು, ಪ್ರತಿ ತಿಂಗಳಲ್ಲಿಯೂ ಸಂಪೂರ್ಣ ಪುಸ್ತಕರೂಪದಲ್ಲಿ ಪ್ರಕಟಿಸುತ್ತಲಿರುವ ಅಖಿಳ ಕರ್ಣಾಟಕದಲ್ಲಿ ಒಂದೇ ಒಂದಾದ ಸಚಿತ್ರ ಮಾಸ ಪುಸ್ತಕಾವಳಿ

**ವಾರ್ಷಿಕ ಚಂದಾ:—ರಫ್ ೧—೮—೦. ಗ್ಲೇಜ್ ೨—೪—೦.**

**ಕುಸುಮ ಸಂಖ್ಯೆ**

| | | |
|---|---|---|
| ೮೭ | ಜನವರಿ | ಅಪ್ರತಿಮ ಧನ್ವಿ - ತ್ರಿಲೋಕವೀರ **ಧನಂಜಯ** |
| ೮೮ | ಫೆಬ್ರುವರಿ | ಗೌತಮಪತ್ನಿ-ಮಹಾ ಪತಿವ್ರತೆ **ಅಹಲ್ಯಾದೇವಿ** |
| ೮೯ | ಮಾರ್ಚಿ | ಮೈಸೂರಿನ ನವಾಬ್ **ಹೈದರಲ್ಲೀ ಖಾನ್ ಬಹದ್ದೂರ್** |
| ೯೦ | ಏಪ್ರಿಲ್ | ಸಿಕ್ ಮತಸ್ಥಾಪಕ-ಮಹಾತ್ಮಾ **ಗುರು ನಾನಕ್** |
| ೯೧ | ಮೇ | ಸುಪ್ರಸಿದ್ಧ ಕರ್ಣಾಟಕ ವೀರ ಶಿರೋಮಣಿ **ಎರಡನೇ ಪುಲಕೇಶಿ** |
| ೯೨ | ಜೂನ್ | ಗಾನ ಕಲಾವಿಶಾರದ-ರಾಮಭಕ್ತಾಗ್ರೇಸರ **ಶ್ರೀ ತ್ಯಾಗರಾಜಸ್ವಾಮಿ** |
| ೯೩ | ಜೂಲೈ | ಶ್ರೀ ಬ್ರಹ್ಮಚೈತನ್ಯ ಸದ್ಗುರು **ಶ್ರೀ ಗೋಂದಾವಳಿ ಮಹಾರಾಜರು** |
| ೯೪ | ಆಗಸ್ಟ್ | ರಾಜಪುತ್ರ ಸ್ತ್ರೀ ಶಿರೋಮಣಿ **ಕರ್ಮದೇವಿ** |
| ೯೫ | ಸೆಪ್ಟಂಬರ್ | ಸಿಕ್‌ಮತಸ್ಥರ ವೀರಗುರು - **ಗುರು ಗೋವಿಂದಸಿಂಗ್** |
| ೯೬ | ಆಕ್ಟೋಬರ್ | ಅದ್ವಿತೀಯ ಚಿತ್ರಕಲಾಪ್ರವೀಣ **ರಾಜಾರವಿವರ್ಮ** |
| ೯೭ | ನವಂಬರ್ | ಕರ್ಣಾಟಕ ಭೂಷಣ- ವಿಜಯನಗರದ ರಾಜಗುರು - **ಶ್ರೀ ವ್ಯಾಸರಾಯ ಸ್ವಾಮಿಗಳು** |
| ೯೮ | ಡಿಶಂಬರ್ | ಸುಪ್ರಸಿದ್ಧ ವಂಗೀಯ ಸಾಹಿತ್ಯ ಸೇವಕ **ಬಂಕಿಂ ಚಂದ್ರಛಟರ್ಜಿ** |

ಅನೇಕ ಗ್ರಂಥಮಾಲಾ ಪ್ರೇಮಿಗಳ
ಅಪೇಕ್ಷೆಯಂತೆ ಈ ಏಳನೇ ಸಂಪುಟದ
ಪ್ರಾರಂಭದಿಂದ
ಗ್ರಂಥಮಾಲೆಯ ಪುಸ್ತಕಗಳನ್ನು
ಉತ್ತಮವಾದ ಹೊಳಪು ಕಾಗದದಲ್ಲೂ
ಮುದ್ರಿಸಲು ಏರ್ಪಡಿಸಿರುತ್ತೇವೆ.
ಅಪೇಕ್ಷೆಯುಳ್ಳವರು ಮುಂದಾಗಿ ತಿಳಿಸಿರಿ!

—ವಾರ್ಷಿಕ ವರ್ಗಣಿ—

| | | |
|---|---|---|
| ಉತ್ತಮ ಪ್ರತಿ | — | ರೂ ೨—೪—೦ |
| ಸಾಮಾನ್ಯ ಪ್ರತಿ | — | ರೂ ೧—೮—೦ |